

# ಪ್ರಾಮಾಣಿಕ ದುಡಿಮೆಯ ತೃಪ್ತಿ

ಕಲ್ಲಿಕೋಟೆ ಪ್ರವಾಸದ ಎರಡು ದಿನ – ರಾತ್ರಿ ವೇಳೆ ಸಹ – ಆಟೋರಿಕ್ಷಾದಲ್ಲಿ ಅತ್ತಿತ್ತ ತಿರುಗಾಡಬೇಕಾದ ಅನಿವಾರ್ಯತೆ ಉಂಟಾಗಿತ್ತು. ಒಂದೆರಡು ಕಡೆ ಚಾಲಕರು ಮೀಟರ್ ತೋರಿಸಿದ ಹಣವನ್ನಷ್ಟೇ ತೆಗೆದುಕೊಂಡು ಚಿಲ್ಲರೆ ಹಿಂದಿರುಗಿಸಿದರು. ಒಬ್ಬನಂತೂ ನಾವು ಆಟೊ ಇಳಿದು ಹೆಜ್ಜೆ ಮುಂದಿಡುವಷ್ಟರಲ್ಲಿ 'ಸಾರ್ ಇಗೊಳ್ಳಿ ಐವತ್ತು ಪೈಸೆ' ಎಂದು ನಮ್ಮನ್ನು ಹಿಂದಕ್ಕೆ ಕರೆದ. ಆತನ ವರ್ತನೆ ಅಹಂಕಾರದ್ದೋ ಮೂದಲಿಸುವ ರೀತಿಯದೋ ಆಗಿರದೆ ಸಹಜವಾಗಿತ್ತು. ಬೆಂಗಳೂರು ಮತ್ತು ಚೆನ್ನೈ ನಗರಗಳ ಆಟೋಗಳ ಪರಿಚಯವಿದ್ದ ನನಗೆ ಸ್ವಲ್ಪ ಆಶ್ಚರ್ಯವಾಯಿತು. ಮಿತ್ರರಿಂದ ತಿಳಿದು ಬಂದಂತೆ, ಅಲ್ಲಿನ ಆಟೋಚಾಲಕರ ಒಟ್ಟಾರೆ ನಡವಳಿಕೆಯೇ ಹಾಗಂತೆ! ಪ್ರಯಾಣಿಕರನ್ನು ಕಾಡಿಸುವುದು, ಹೊಸಬರಾದರೆ ಬಳಸು ರಸ್ತೆಯಲ್ಲಿ ಕರೆದೊಯ್ದು ಹೆಚ್ಚು ಬಾಡಿಗೆ ಸುಲಿಯುವುದು – ಮುಂತಾದ ಉಪದ್ರವಗಳಿಲ್ಲ. ಪ್ರಯಾಣಿಕರೊಂದಿಗೆ ಒರಟಾಗಿ ನಡೆದುಕೊಳ್ಳುವ ಚಾಲಕ ನೂರರಲ್ಲೊಬ್ಬನಿರಬಹುದು. ಸಾಮಾನ್ಯವಾಗಿ ಎಲ್ಲರೂ ವಿದ್ಯಾವಂತರು. ಪದವೀಧರ ಆಟೋಚಾಲಕರು ಧಾರಾಳ ಉಂಟು. ಸಂಜೆ ಆರರ ನಂತರ ರಾತ್ರಿ ಹತ್ತರವರೆಗೆ ಆಟೋ ಓಡಿಸಿ ತಮ್ಮ ಓದಿನ ವೆಚ್ಚ ತೂಗಿಸಿಕೊಳ್ಳುವ ಕಾಲೇಜು ವಿದ್ಯಾರ್ಥಿಗಳೂ ಇದ್ದಾರೆ. ಆಟೋ ಓಡಿಸುವುದು ತಮ್ಮ ಘನತೆಗೆ ಕುಂದೆಂದು ಅವರು ಭಾವಿಸುವುದಿಲ್ಲ. ವಿದ್ಯೆಯ, ಪ್ರಾಮಾಣಿಕ ದುಡಿಮೆಯ ಮಹತ್ವ ಬಲ್ಲ ಜನರು ಅವರು!

ಈ ಅನುಭವದ ದೃಷ್ಟಿಯಿಂದ ಯಾರಾದರೂ ಆಟೋಚಾಲಕನೊಂದಿಗೆ ಮಾತಾಡಬೇಕೆನ್ನಿಸಿತು. ಋಷಿಪುರ ಶಿವನ್‌ಕ್ಷೇತ್ರದ (ದೇವಾಲಯ) ದಾರಿಯಲ್ಲಿ ತನ್ನ ಪುಟ್ಟ ಮನೆಯ ಮುಂದೆ ಆಟೋ ಒರೆಸುತ್ತಿದ್ದ ವ್ಯಕ್ತಿಯನ್ನು ಕಂಡು, ಅವರೊಂದಿಗೆ ಸ್ವಲ್ಪ ಮಾತಾಡಬಹುದೇ – ಎಂದಾಗ, ನನ್ನ ಬಗ್ಗೆ ಒಂದೆರಡು ಮಾತಿನಲ್ಲಿ ತನಿಖೆ ನಡೆಸಿದ ಆತ ''ಓ... ಅದಕ್ಕೇನಂತೆ!'' ಎಂದು ಮಲಯಾಳಿಗಳ ಶೈಲಿಯಲ್ಲಿ ಸಮ್ಮತಿ ನೀಡಿದರು. ಆದರೆ ಹತ್ತು ನಿಮಿಷದಲ್ಲಿ ಮಾತುಕತೆ ಮುಗಿಯಬೇಕೆಂಬ ನಿಬಂಧನೆ ಹಾಕಿದರು. ''೮.೨೦ಕ್ಕೆ ಸರಿಯಾಗಿ ಮನೆ ಬಿಡಬೇಕು. ಶಾಲೆಯ ಮಕ್ಕಳು ಕಾಯುತ್ತಿರುತ್ತವೆ. ನಾನು ಮಕ್ಕಳಿಗಾಗಿ ಕಾಯಬೇಕಲ್ಲದೆ ಮಕ್ಕಳು ನನಗಾಗಿ ಕಾಯುವಂತಾಗಬಾರದು!'' – ಎಂದ. ಮೆಚ್ಚುವ ಮಾತು.

ಎರವತ್ತುತ್ತಾಳಂ ಮನೆತನದ, ನಲವತ್ತೈದು ವಯಸ್ಸಿನ ಕಾರಾಟ್ಟು ಕೃಷ್ಣನ್ ಎಸ್ಸೆಸ್ಸೆಲ್ಸಿವರೆಗೆ ಕಲಿತಿದ್ದಾರೆ. ಬ್ಯಾಂಕ್ ಸಾಲದಿಂದ ಖರೀದಿಸಿದ ಆಟೋ. ಈಗ ಸಾಲ ತೀರಿದೆ. ಇವರ ಪತ್ನಿ ಸುಹಾಸಿನಿ ಸಹ ಹೈಸ್ಕೂಲು ಶಿಕ್ಷಣ ಮುಗಿಸಿದ್ದಾರೆ. ಮನೆಯೊಡತಿ. ಇಬ್ಬರು ಮಕ್ಕಳು. ಹಿರಿಯ ಮಗಳು ಕೃಷ್ಣಾ ಪ್ರತಿಭಾವಂತೆ. ಮೈಸೂರಿನಲ್ಲಿ ಬಯೋಟೆಕ್ನಾಲಜಿ ಕಲಿಯುತ್ತಿದ್ದಾಳೆ. ಮಗ ಸಚಿನ್ ಒಂಬತ್ತನೇ ತರಗತಿಯಲ್ಲಿದ್ದಾನೆ. ಮನೆ ಕಟ್ಟಿಸಲು ಒಂದೂ ಕಾಲು ಲಕ್ಷ, ಮಗಳನ್ನು ಮೈಸೂರಿಗೆ ಸೇರಿಸಲು ಅರುವತ್ತು ಸಾವಿರ ಬ್ಯಾಂಕ್ ಸಾಲವಾಗಿದೆ. ಶಾಲೆಗೆ ಒಯ್ಯುವ ಎಂಟು ಮಕ್ಕಳು ನೀಡುವ ತಿಂಗಳ ಸಂಬಳ ಬ್ಯಾಂಕಿಗೆ ಜಮಾ ಆಗುತ್ತದೆ. ಉಳಿದಂತೆ ಪ್ರತಿದಿನ ಸುಮಾರು ೧೫೦ರೂ. ಕೈಗೆ ಬರುತ್ತದೆ. ಸಂಸಾರ ತೂಗಿಸಲು ಸಾಕು.

ಅವರ ಮಾತಿನಲ್ಲಿ ಆತ್ಮವಿಶ್ವಾಸವಿತ್ತು, ಪ್ರಾಮಾಣಿಕತೆ ಇತ್ತು, ದುಡಿಮೆಯ ಬಗ್ಗೆ ತೃಪ್ತಿ ಇತ್ತು. ಒಂದು ಊರಿನ ಅಥವಾ ನಗರದ ನಾಗರಿಕರ ಸಾಮಾನ್ಯ ನಡವಳಿಕೆ ಆ ಸಮಾಜದ ವ್ಯವಸ್ಥೆಯನ್ನು ಹಾಗೂ ಅದರ ಆರೋಗ್ಯವನ್ನು ಪ್ರತಿಬಿಂಬಿಸುತ್ತದೆಯೆ? ಎಂಬ ಪ್ರಶ್ನೆ ನನ್ನ ತಲೆಯಲ್ಲಿ ಸುಳಿಯಿತು.



ಚಿತ್ರ-ಲೇಖನ: **ಕೆ. ಪಿ. ಸ್ವಾಮಿ**, ೧೬೮, ೧೦ನೇ ಮುಖ್ಯರಸ್ತೆ, ೩ನೇ ಫೇಸ್, ಪೀಣ್ಯ ಇಂಡಸ್ಟ್ರಿಯಲ್ ಏರಿಯಾ, ಬೆಂಗಳೂರು - ೫೮

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...




ಚಿತ್ರಗಳು : ಆಚಾರ್ಯ, ಮೋನಪ್ಪ, ಶ್ರೀಹರಿ, ಕೆದಿಲಾಯ, ಬಿ. ವಿಲ್ಸನ್

ಮುಖಪುಟ : ವ್ಯಾಸರಾಯ ಬಲ್ಲಾಳ (೧-೧೨-೧೯೨೩ – ೩೦-೧-೨೦೦೮)

ವರ್ಣಚಿತ್ರ : ಕೆ. ಪಿ. ಸ್ವಾಮಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಛೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

**ಈ** ತಿಂಗಳ ನೋವಿನ ಸುದ್ದಿ ಮಾನ್ಯ ಶ್ರೀ ವ್ಯಾಸರಾಯ ಬಲ್ಲಾಳರ ನಿಧನ. ಡಿಸೆಂಬರ್‌ನಲ್ಲಿ ಪ್ರೊ॥ ಜಿ. ಶ್ರೀನಿವಾಸರಾಜು ಅವರನ್ನು ಕಳೆದುಕೊಂಡು ಚೇತರಿಸಿಕೊಳ್ಳುವ ಮೊದಲೇ ಶ್ರೀ ಬಲ್ಲಾಳರು ಗತಿಸಿದ್ದು ಆಘಾತವೆನಿಸಿದೆ. 'ಹೊಸತು' ಪತ್ರಿಕೆಯಲ್ಲಿ ಅಪಾರ ಆಸಕ್ತಿ ಇರಿಸಿಕೊಂಡಿದ್ದ ಬಲ್ಲಾಳರು ಅನೇಕ ವಿಧಗಳಲ್ಲಿ ನಮಗೆ ಸಹಾಯಹಸ್ತ ನೀಡುತ್ತಿದ್ದವರು. ಅವರಿಗೆ ಪತ್ರಿಕೆಯು ಗೌರವಪೂರ್ವಕ ನಮನ ಸಲ್ಲಿಸುತ್ತದೆ. ಈ ಸಂಚಿಕೆಯಲ್ಲಿ ಡಾ॥ ವಿಜಯಾ ಅವರು ಬಲ್ಲಾಳರನ್ನು ಕುರಿತ ಆತ್ಮೀಯ ಲೇಖನವೊಂದನ್ನು ನೀಡಿ ಉಪಕರಿಸಿದ್ದಾರೆ. ಬಲ್ಲಾಳರೊಡನೆ ನಿಕಟ ಸಂಪರ್ಕವನ್ನಿರಿಸಿಕೊಂಡಿದ್ದ ಬೆಂಗಳೂರಿಗರಲ್ಲಿ ಡಾ॥ ವಿಜಯಾ ಪ್ರಮುಖರು. ಅವರೊಂದಿಗಿನ ಬಾಂಧವ್ಯ ಹೇಗೆ ಬೆಸೆತುಕೊಂಡಿತು ಎಂಬುದನ್ನು ಡಾ॥ ವಿಜಯಾ ಅವರೇ ತಿಳಿಸಿಕೊಟ್ಟಿದ್ದಾರೆ. ಬಲ್ಲಾಳರ ಬಹುಮುಖ ವ್ಯಕ್ತಿತ್ವವನ್ನು ಪರಿಚಯಿಸಿರುವ ಅವರಿಗೆ ನಾವು ಕೃತಜ್ಞರು.

* * *

ವಿಶ್ವ ಬ್ಯಾಂಕ್ ಮುಂತಾದ ಅಂತರರಾಷ್ಟ್ರೀಯ ಸಂಸ್ಥೆಗಳಿಂದ ಸಾಲ ಪಡೆಯುವ ನಮ್ಮ ದೇಶವು ಅದನ್ನು ವ್ಯಯಮಾಡುವ ರೀತಿ ಗೌರವ ತರುವಂಥದಲ್ಲ. ಯೋಜನೆಗಳಿಗೆ ಭರಿಸಬೇಕಾದ ಹಣವನ್ನು ಪೋಲು ಮಾಡುವುದು ಮತ್ತು ನುಂಗಿಹಾಕುವುದು ದೇಶಕ್ಕೆ ಹೆಣಭಾರ. ಸಾಲದಿಂದ ಉಪಯೋಗ ಆಗದಿದ್ದರೂ ಸಾಲವನ್ನು ಹಿಂದಿರುಗಿಸುವ ಹೊರೆ ಸಾರ್ವಜನಿಕರ ಮೇಲಿರುತ್ತದೆ. ಆದ್ದರಿಂದ ನುಂಗಣ್ಣಗಳನ್ನು ಪತ್ತೆಹಚ್ಚಿ ಬಹಿರಂಗವಾಗಿ ಅವರಿಗೆ ಛೀಮಾರಿ ಹಾಕಬೇಕಾದ್ದು ಅವಶ್ಯಕ. ಕೆಲವು ರಾಜಕಾರಣಿಗಳು ಮತ್ತು ಅಧಿಕಾರಿಗಳು ಶಾಮೀಲಾಗಿ ಈ ದಂಧೆಯಿಂದ ದೇಶಕ್ಕೆ ಉರುಲು ಹಾಕುತ್ತಿದ್ದಾರೆಂಬುದು ಶೋಚನೀಯ. ಇತ್ತೀಚಿನ ಒಂದು ಚಿಕ್ಕ ಉದಾಹರಣೆ ಒರಿಸ್ಸಾದಿಂದ ಬಂದಿದೆ. ನಮ್ಮ ರಾಜ್ಯದ ಸರ್ವ ಶಿಕ್ಷಣ ಅಭಿಯಾನದಲ್ಲಿ ಜರುಗುವ ಭ್ರಷ್ಟಾಚಾರವನ್ನು ಮೀರಿಸುವಂತಿದೆ ಅದು. ಆರೋಗ್ಯ ಸುಧಾರಣೆಯ ಬಾಬ್ತು ೩೪೮ ಕೋಟಿ ರೂಪಾಯಿಗಳನ್ನು ವಿಶ್ವ ಬ್ಯಾಂಕಿನಿಂದ ಪಡೆದಿರುವ ಒರಿಸ್ಸಾದಲ್ಲಿ ಹಣದ ವಿತರಣೆಯು ಎಗ್ಗಿಲ್ಲದೆ ಸಾಗಿದೆ. ಇತ್ತೀಚೆಗೆ ಒಂದು ಬಿಲ್ ಪಾವತಿಸಲು ರಾಜಕಾರಣಿ-ಅಧಿಕಾರಿ ಕೂಟವು ೨೫ ಲಕ್ಷ ರೂಪಾಯಿ ಲಂಚ ಪಡೆದಿದೆಯೆಂಬುದು ಬಹಿರಂಗವಾಗಿದೆ. ಲಂಚವೇ ಅಷ್ಟಾದರೆ ಇನ್ನು ಬಿಲ್ ಪಡೆಯುವ ಕಂಟ್ರಾಕ್ಟುದಾರ ಇನ್ನೆಷ್ಟು ಲೂಟಿ ಮಾಡಿರಬೇಕು ! ಒಟ್ಟಿನಲ್ಲಿ ಒರಿಸ್ಸಾದ ಆರೋಗ್ಯವು ಸುಧಾರಿಸುವ ಬದಲು ಹೆಚ್ಚು ಹೆಚ್ಚು ಕ್ಷೀಣಿಸುತ್ತಿದೆ. ಅದೇ ಸೂತ್ರವು ಇಡೀ ದೇಶಕ್ಕೆ ಅನ್ವಯವಾಗುತ್ತದೆ. ಸಾಲ ತಂದು ಏನನ್ನೋ ಸಾಧಿಸಿದಂತೆ ಮೆರೆಯುವವರ ಉತ್ಸಾಹಕ್ಕೆ ಮೂಲ ಪ್ರಚೋದನೆ ಯಾವುದೆಂದು ಇದರಿಂದ ತಿಳಿಯುತ್ತದೆ. ಅದನ್ನೆಲ್ಲಾ ನೋಡದಿರುವ ಚಮತ್ಕಾರದಲ್ಲಿ ಅರ್ಥ ಸಚಿವ ಚಿದಂಬರಂ ಸಿದ್ಧಹಸ್ತರಾಗಿರುವುದು ಖಂಡನೀಯ. ಇಂತಹ ''ಸುಸಂಸ್ಕೃತ''ರೆಲ್ಲಾ ಈ ಹಗರಣಗಳಲ್ಲಿ ಭಾಗಿಗಳಾಗಿರುವುದರಿಂದಲೋ ಏನೋ ನಮ್ಮ ಮಾಧ್ಯಮಗಳು ಆ ಬಗ್ಗೆ ಹೆಚ್ಚಿನ ಮಾಹಿತಿ ನೀಡಿ ಸಾರ್ವಜನಿಕ ಚರ್ಚೆಗೆ ಆಹ್ವಾನ ನೀಡುತ್ತಿಲ್ಲವೆಂದು ತೋರುತ್ತದೆ. ವಿಶ್ವ ಬ್ಯಾಂಕಿನಿಂದ ಪಡೆದ ಹಣವು ಪೋಲಾಗುತ್ತಿರುವ ಬಗ್ಗೆ ಖಚಿತ ಮಾಹಿತಿ ಇರುವವರು ಅದನ್ನು ನಮ್ಮ ಓದುಗರೊಂದಿಗೆ ಹಂಚಿಕೊಳ್ಳಬೇಕೆಂದು ಮನವಿ ಮಾಡಿಕೊಳ್ಳುತ್ತೇವೆ.

* * *

ಮಹಾ ಅಪರಾಧಿಗಳನ್ನು ಒಡ್ಡೋಲಗದಲ್ಲಿ ಕೂರಿಸಿ ಆರಾಧಿಸುವ ಕೆಟ್ಟ ಸಂಪ್ರದಾಯವು ಹೆಚ್ಚುತ್ತಿರುವುದು ಕಳೆದ ಒಂದೆರಡು ದಶಕಗಳ ವಿಶೇಷ ವಿದ್ಯಮಾನ. ಲಂಚಕೋರರನ್ನು ''ಯಶಸ್ವಿ'' ಜನರೆಂದು ಪಟ್ಟಿ ಮಾಡುವುದು, ಕೊಲೆಗಾರರನ್ನು ಲೋಕಸಭೆ-ಶಾಸನಸಭೆಗಳಿಗೆ ಚುನಾಯಿಸುವುದು, ದಾವೂದ್ ಇಬ್ರಾಹಿಂ ಭಂಟರನ್ನು ಅಪ್ರತಿಮ ಕಲಾವಿದರೆಂದು ಶ್ಲಾಘಿಸುವುದು, ದೇಶವನ್ನು ಒಡೆಯುವ ಕೆಲಸವನ್ನು ಮಾಡುವ ರಾಜಕೀಯ ಪಕ್ಷಗಳನ್ನು ''ರಾಷ್ಟ್ರೀಯ'' ಅಥವಾ ''ದೇಶ ಪ್ರೇಮಿ'' ಪಕ್ಷಗಳೆಂದು ಪರಿಗಣಿಸುವುದು, ಇವೆಲ್ಲಾ ಇದಕ್ಕೆ ನಿದರ್ಶನ. ಸಂಜಯ ದತ್ ಮತ್ತೆ ಸಮಾಚಾರ ಪತ್ರಿಕೆಗಳ ಮುಖಪುಟದಲ್ಲಿ ಕಾಣಿಸಿಕೊಳ್ಳುತ್ತಿರುವುದು ಇದನ್ನೇ ತೋರಿಸುತ್ತದೆ. ಕಾರಾಗೃಹದಲ್ಲಿರಬೇಕಾದ ವ್ಯಕ್ತಿ ಹೇಗೋ ಹೊರಬಂದು ಪ್ರಶ್ನಾರ್ಹವಾದ ಮದುವೆ ಮಾಡಿಕೊಂಡರೆ ನಮ್ಮ ಮಾಧ್ಯಮಗಳು ಏಕೆ ಸಂಭ್ರಮಿಸಬೇಕೋ ತಿಳಿಯದು. ನಾಳೆ ಜೈಲಿಗೆ ಹೋಗುವವನು ಇಂದು ವಿವಾಹವಾಗುವುದು ಎರಡು ರೀತಿಯ ವಂಚನೆ: ಪತ್ನಿಯನ್ನು ಕಷ್ಟಕ್ಕೆ ಸಿಲುಕಿಸುವುದು ಮತ್ತು ನ್ಯಾಯಾಲಯದಿಂದ ಮಗುಮ್ಮಾಗಿ ಕನಿಕರದ ರಕ್ಷಣೆ ಪಡೆಯಲು ಯತ್ನಿಸುವುದು. ಭಯೋತ್ಪಾದಕತೆಯನ್ನು

೮ನೇ ಪುಟಕ್ಕೆ




ಸಂಪುಟ-೯ ಸಂಚಿಕೆ-೮ ಮಾರ್ಚ್ ೨೦೦೮

ಸಂಪಾದಕ

ಜಿ. ರಾಮಕೃಷ್ಣ

ಸಹಸಂಪಾದಕರು

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

ವ್ಯವಸ್ಥಾಪಕ

ಎ. ಆರ್. ಉಡುಪ

ಮುದ್ರಕ-ಪ್ರಕಾಶಕ

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

ಮುದ್ರಣ

ನವಕರ್ನಾಟಕ ಪ್ರಿಂಟರ್ಸ್
೧೬೭.ಮತ್ತು೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

ಹೊಸತು ಕಚೇರಿಯ ವಿಳಾಸ




ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@vsnl.com
website : www.navakarnatakabooks.com


## ಶಿಕ್ಷಣ ದೊರೆಯದ ಬಾಲಕಾರ್ಮಿಕರು

ಸಂಪಾದಕೀಯ

ಬೇರೆ ಕ್ಷೇತ್ರಗಳಿಗಿಂತಲೂ ಹೆಚ್ಚಾಗಿ ಶಿಕ್ಷಣ ಕ್ಷೇತ್ರವು ಅಧಿಕಾರಿಗಳ ಬಾಹುಳ್ಯ ಉಳ್ಳದ್ದು. ಎಲ್ಲ ಸಮಸ್ಯೆಗಳಿಗೂ ಅಧಿಕಾರಿಗಳ ಬಳಿ ಒಂದು ಪರಿಹಾರವಿದೆ: ಅದೇನೆಂದರೆ, ಅಧ್ಯಾಪಕರಿಗೆ ಉಪದೇಶ ನೀಡುವುದು ಮತ್ತು ಅವರ ಕರ್ತವ್ಯಗಳನ್ನು ಜ್ಞಾಪಿಸುತ್ತಿರುವುದು. ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲಾ ಹಂತಗಳಲ್ಲಿ ಇದು ಬಹಳ ಜಾಸ್ತಿ. ಮಕ್ಕಳು ಶಾಲೆಗಳಿಗೆ ಹೋಗುತ್ತಿಲ್ಲವೆಂದರೆ ಅದು ತಂದೆ-ತಾಯಂದಿರ ಮಾನಸಿಕ ಪ್ರವೃತ್ತಿಯ ಕಾರಣದಿಂದಾಗಿ ಎಂಬ ಸರಳ ಸೂತ್ರವನ್ನು ಅವರು ಯಾವಾಗಲೂ ಮುಂದಿಡುತ್ತಾರೆ. ಶಾಲಾ ಅಧ್ಯಾಪಕರು ಅವರ ಮನಸ್ಸನ್ನು ಬದಲಾಯಿಸುವ ಹೊಣೆ ಹೊರಬೇಕೆಂದು ಸಹ ಅವರು ಹೇಳುತ್ತಾರೆ. ಬಾಲಕಾರ್ಮಿಕರ ಸಮಸ್ಯೆಗೆ ಇದೇ ಸೂಕ್ತ ಉತ್ತರವಾಗುತ್ತದೆಂದು ಕೆಲವು ವಿಚಾರಗೋಷ್ಠಿಗಳಲ್ಲಿ ಕೂಡ ಪ್ರತಿಪಾದನೆ ಮಾಡುವುದುಂಟು. ಬೇರೆಯವರಿಗೆ ''ಹೀಗೆ ಮಾಡಿ'' ಎಂದು ಹೇಳಿ ಕೈತೊಳೆದುಕೊಳ್ಳುವುದು ಅಧ್ಯಾಪಕರಿಗೆ ಸಾಧ್ಯವಿಲ್ಲ. ಅವರೇನಿದ್ದರೂ ''ಪರಿಸ್ಥಿತಿ ಹೀಗಿದೆ, ನಾವೇನು ಮಾಡಬೇಕೆಂಬುದನ್ನು ವಿಶ್ಲೇಷಿಸಿಕೊಳ್ಳೋಣ'' ಎಂಬ ನಿಲುವನ್ನು ತಾಳಬೇಕಾಗುತ್ತದೆ.

ಯಾರು ಅಧ್ಯಾಪಕರಾಗಿ ನೇಮಕಗೊಳ್ಳುತ್ತಾರೆಂಬುದರ ಮರ್ಮವನ್ನು ತಿಳಿಯುವುದು ಸುಲಭ. ಅಧಿಕಾರಿಗಳು ಮತ್ತು ಕೆಲವು ರಾಜಕೀಯ ನೇತಾರರು ಹಸ್ತಕ್ಷೇಪ ಮಾಡಿ ಅಧ್ಯಾಪಕರ ಹುದ್ದೆಗಳನ್ನು ತುಂಬುವಾಗ ಅರ್ಹತೆಯೊಂದನ್ನೇ ಆಧಾರವಾಗಿಟ್ಟುಕೊಂಡಿರುವುದಿಲ್ಲ. ನಮ್ಮ ಸನ್ನಿವೇಶವು ಹರಿಯಾಣ ರಾಜ್ಯದಲ್ಲಿದ್ದಷ್ಟು ಹದಗೆಟ್ಟಿಲ್ಲ; ಅಲ್ಲಿ ಅಧ್ಯಾಪಕರ ಹುದ್ದೆಗಳನ್ನು ಭರ್ತಿಮಾಡಲು ಹರಾಜು ಪದ್ಧತಿ ಜಾರಿಗೆ ಬಂದುಬಿಟ್ಟಿದೆ. ಶ್ರೀವಾಸ್ತವ ಎಂಬ ಅಧಿಕಾರಿಗೆ ಐದು ಸಾವಿರ ಜನರ ಪಟ್ಟಿಯೊಂದನ್ನು ಕೊಟ್ಟು ಅವರನ್ನೆಲ್ಲಾ ನೇಮಕ ಮಾಡಬೇಕೆಂದು ಆದೇಶಿಸಲಾಗಿದ್ದಿತಂತೆ. ಅದರಲ್ಲಿ ಅಪರಾಧಗಳ ಹಿನ್ನೆಲೆಯುಳ್ಳವರೂ ಇದ್ದರು. ಪೇಚಿಗೆ ಸಿಕ್ಕಿದ ಶ್ರೀವಾಸ್ತವ ಮೊದಲು ತನ್ನನ್ನು ಬೇರೆಡೆಗೆ ವರ್ಗಾಯಿಸಬೇಕೆಂದು ಕೋರಿಕೊಂಡರಂತೆ!

ಬಾಲಕಾರ್ಮಿಕ ಪದ್ಧತಿಯನ್ನು ಕೊನೆಗೊಳಿಸಲು ಅಥವಾ ಎಲ್ಲ ಮಕ್ಕಳನ್ನು ಶಾಲೆಗೆ ಬರುವಂತೆ ಮಾಡಲು ಅಧ್ಯಾಪಕರಿಗೆ ಮತ್ತು ಅವರ ಸಂಘಗಳಿಗೆ ನೇರವಾದ ಯಾವ ಮಾರ್ಗವೂ ಇಲ್ಲ. ಮಕ್ಕಳನ್ನು ದುಡಿಮೆಗೆ ಹಚ್ಚಿರುವವರು ಅಧ್ಯಾಪಕರಲ್ಲ; ಹಾಗೆ ಹಚ್ಚಿರುವವರನ್ನು ಓಲೈಸಲು ಕೇವಲ ಮಾತುಗಳು ಸಾಲುವುದಿಲ್ಲ. ಶಿಕ್ಷಣದ ವ್ಯವಸ್ಥೆಯ ಕರ್ತವ್ಯಗಳನ್ನು ಚರ್ಚಿಸುವಾಗ ೧೯೬೪ರ ಕೊಠಾರಿ ಆಯೋಗವು ಹೇಳಿದ್ದುದು ಇದು : ''ಬೇರೆ ಬೇರೆ ಸಾಮಾಜಿಕ ವರ್ಗಗಳನ್ನು ಮತ್ತು ಗುಂಪುಗಳನ್ನು ಒಗ್ಗೂಡಿಸುವ ಜವಾಬ್ದಾರಿಯು ಶಿಕ್ಷಣ ವ್ಯವಸ್ಥೆಗಿದೆ. ಸಮಾನತೆಯ ಹಾಗೂ ಐಕ್ಯತೆಯ ಸಮಾಜವು ಹೊರಹೊಮ್ಮಲು ಇದೇ ಹಾದಿ. ಸದ್ಯದ ಸನ್ನಿವೇಶದಲ್ಲಿ ನಾವು ಅದನ್ನು ಮಾಡುತ್ತಿಲ್ಲ; ಬದಲಾಗಿ, ಶಿಕ್ಷಣವು ಸ್ವತಃ ಸಾಮಾಜಿಕ ಪ್ರತ್ಯೇಕತೆಯನ್ನು ಹೆಚ್ಚಿಸುವ ಸಾಧನವಾಗಿದೆ. ವರ್ಗ ಭಿನ್ನತೆಯನ್ನು ಮುಂದುವರಿಸಿಕೊಂಡುಹೋಗುತ್ತಿರಲು ಇದೂ ಒಂದು ಕಾರಣವಾಗುತ್ತಿದೆ.'' ಸಮಾನ ಶಿಕ್ಷಣದ ಮೌಲ್ಯವನ್ನು ಒತ್ತಿಹೇಳಿದ್ದ ಕೊಠಾರಿ ಆಯೋಗದ ನಂತರದ ನಲವತ್ತು ವರ್ಷಗಳಲ್ಲಿ ಪರಿಸ್ಥಿತಿಯು ಸುಧಾರಿಸುವ ಬದಲು ಇನ್ನೂ ಹೆಚ್ಚಾಗಿ ಬಿಗಡಾಯಿಸುತ್ತಿದೆ.

ಶಾಲೆಗೆ ಹೋಗುವ ಮತ್ತು ಹೋಗದೆ ಉಳಿದ ಮಕ್ಕಳ ಗಣತಿ ಆಗಾಗ್ಗೆ ನಡೆಯುತ್ತಲೇ ಇರುತ್ತದೆ. ಅದನ್ನೂ ಅಧ್ಯಾಪಕರು ಮಾಡಬೇಕು. ಅಷ್ಟೇ ಏಕೆ, ಆಯಾ ಊರುಗಳಲ್ಲಿರುವ ಕುರಿ-ಕೋಳಿಗಳ ಗಣತಿ ಮಾಡಲು ಸಹ ಶಾಲಾ ಉಪಾಧ್ಯಾಯರೇ ಬೇಕು! ಅವರ ಅಧ್ಯಾಪನ ಕಾರ್ಯಕ್ಕೆ ಸರ್ಕಾರವು ನೀಡುತ್ತಿರುವ ಗೌರವ ಅಂತಹದ್ದು. ಶಾಲೆಗೆ ಬರದೆ ಉಳಿದಿರುವ ಮಕ್ಕಳು ಶಾಲೆಗೇಕೆ ಬರುತ್ತಿಲ್ಲವೆಂಬುದು ಪ್ರಮುಖ ಪ್ರಶ್ನೆ. ವಿಪ್ರೋ ಸಂಸ್ಥೆಯ ಆಶ್ರಯದಲ್ಲಿರುವ 'ಪ್ರಥಮ್' ಎಂಬ ವಿಭಾಗವು ತನ್ನೊಂದು ವರದಿಯಲ್ಲಿ ಈ ಪ್ರಶ್ನೆಯನ್ನು ಎತ್ತಿದೆ. ಶಾಲೆಗೆ ಸೇರಿ ಮುಂದಿನ ತರಗತಿಗೆ ಬರದೆ ಹೊರಹೋಗುವವರು ಯಾವ ಪ್ರಮಾಣದಲ್ಲಿದ್ದಾರೆಂದೂ ಅದು ವರದಿ ಮಾಡಿದೆ. ಊಟ-ಬಟ್ಟೆ-ಪುಸ್ತಕ, ಎಲ್ಲಾ ಕೊಡುತ್ತಿರುವುದರಿಂದ ಬಹುತೇಕ ಮಕ್ಕಳು ಶಾಲೆಗೆ ಸೇರಿಕೊಳ್ಳುತ್ತಾರೆ. ಹಾಗೆ ಸೇರದವರು ನಮ್ಮ ರಾಜ್ಯದಲ್ಲಿ ಕೇವಲ ಒಂದು ಲಕ್ಷವೆಂದು ಸರ್ಕಾರದ ಅಭಿಪ್ರಾಯ. ಅದಕ್ಕಿಂತಲೂ ಬಹಳ ಜಾಸ್ತಿ ಎಂಬುದು ಇನ್ನೊಂದು ಲೆಕ್ಕಾಚಾರ. ಇಡೀ ದೇಶದಲ್ಲಿ ಈ ತರಹದ ಮಕ್ಕಳ ಸಂಖ್ಯೆ ಏಳು ಕೋಟಿ ಎಪ್ಪತ್ತು ಲಕ್ಷ. ಆದ್ದರಿಂದ ನಮ್ಮ ರಾಜ್ಯದ ಪಾಲು ಒಂದು ಲಕ್ಷ ಮಾತ್ರವೇ ಇರಲಾರದು. ರಾಷ್ಟ್ರೀಯ ಜ್ಞಾನ ಆಯೋಗವು ಪ್ರಕಟಿಸಿರುವ ಅಂಕಿ-ಸಂಖ್ಯೆಗಳ ಪ್ರಕಾರ ಒಟ್ಟು ೨೫ ಕೋಟಿ ಅನಕ್ಷರಸ್ಥರ ಪೈಕಿ ೧೦ ಕೋಟಿ ಮಕ್ಕಳಿದ್ದಾರೆ. ''ಜ್ಞಾನಾಧಾರಿತ ಸಮಾಜ'' ರಚನೆ ನಮ್ಮ ಗುರಿಯೆಂದು ಹೇಳುವವರಿಗೆ ಇದು ತಿಳಿದಿಲ್ಲವೆಂದೇನೂ ಇಲ್ಲ.

ಅಮೆರಿಕಾದಲ್ಲಿ ''ಎಡಿಸನ್ ಶಾಲೆಗಳು'' ಎಂಬ ಪ್ರಕಾರದ ಹಲವು ಶಾಲೆಗಳಿವೆ ಎನ್ನುತ್ತಾರೆ. ಆ ಶಾಲೆಗಳ ಪರವಾದ ವಾದವು ಹೀಗಿದೆ : ಇಡಿಯಾಗಿ ಶಾಲೆಗಳಿಗಾಗಿ ವೆಚ್ಚ ಮಾಡುವ ಹಣವು ದೊಡ್ಡ ದೊಡ್ಡ ಕಾರ್ಪೊರೇಟ್ ಸಂಸ್ಥೆಗಳಲ್ಲಿ ಹೂಡಿರುವ ಹಣದಷ್ಟಿದೆ; ಆದರೆ ಕಾರ್ಪೊರೇಟ್‌ಗಳು ಉತ್ಪಾದಿಸುವ ಹಸನು ಸರಕುಗಳಿಗೆ ಭಿನ್ನವಾಗಿ ಶಾಲೆಗಳು ಕಳಪೆ ವಿದ್ಯಾರ್ಥಿಗಳನ್ನು ತಯಾರಿಸುತ್ತಿವೆ. ಆದ್ದರಿಂದ ಶಾಲೆಗಳು ಮತ್ತು ಹಣವನ್ನು 'ಎಡಿಸನ್ ಸಮುಚ್ಚಯ'ಕ್ಕೆ ಕೊಟ್ಟರೆ ಉತ್ತಮಿಕೆಯತ್ತ ಸರಿಯಬಹುದು.

ನಮ್ಮಲ್ಲಿ ಇಂತಹ ವಾದ ಬೆಳೆಯುತ್ತಿದೆ. ಸಾರ್ವಜನಿಕ ಸಂಪತ್ತು ಮತ್ತು ಖಾಸಗಿ ಆಡಳಿತದ ಹೊಸ ನಮೂನೆಯ ವ್ಯವಸ್ಥೆಯನ್ನು ಹೊಗಳಲಾಗುತ್ತಿದೆ. ಮೂಲತಃ ಖಾಸಗಿತನವು ಸಾರ್ವಜನಿಕರಿಗೆ ಲೆಕ್ಕ ಕೊಡಬೇಕಾಗಿಲ್ಲ. ಹೀಗಿರುವಾಗ ಶಾಲೆಗಳಲ್ಲಿ ಏನಾಗುತ್ತದೆಂದು ತಿಳಿಯುವುದು ಹೇಗೆ, ಪ್ರಶ್ನಿಸುವುದು ಹೇಗೆ? ಖಾಸಗಿತನವು ಮಕ್ಕಳ ದುಡಿಮೆಯ ಪ್ರಶ್ನೆಯನ್ನು ಎಳ್ಳಷ್ಟೂ ಗಮನಿಸದಿದ್ದರೆ ನಮ್ಮ ದೊಡ್ಡ ಸಮಸ್ಯೆಗೆ ಉತ್ತರ ಸಿಗುವುದಾದರೂ ಹೇಗೆ? ಕಾಯಿದೆಯನ್ವಯ ಮಕ್ಕಳನ್ನು ಶಾಲೆಗೆ ಕಳಿಸಬೇಕೆಂದು ಕಡ್ಡಾಯ ಮಾಡಿದಾಗಲೂ ಹಾಗೆ ಕಳಿಸದಿದ್ದ ಪೋಷಕರನ್ನು ಅಥವಾ ಮಕ್ಕಳನ್ನು ದಂಡನೆಗೆ ಗುರಿಮಾಡಬಹುದೆ? ಏನೋ ಉಪೇಕ್ಷೆಯಿಂದ ಶಾಲೆಗೆ ಹೋಗದವರನ್ನು ಪ್ರೇರೇಪಿಸಲು ಸಾಧ್ಯವಿರಬಹುದು, ಆದರೆ ದುಡಿಮೆ ಅನಿವಾರ್ಯವಾಗಿರುವಂತಹ ಮಕ್ಕಳ ಮನಸ್ಸನ್ನು ಒಲಿಸಿಕೊಳ್ಳುವುದು ಹೇಗೆ? ಇದಕ್ಕೆ ಸಮಗ್ರ

ಪರಿಹಾರದ ಅಗತ್ಯವಿದೆ; ಕೇವಲ ವೈಯಕ್ತಿಕ ನೆಲೆಯಲ್ಲಿ ಅಧ್ಯಾಪಕರು ಅದನ್ನು ನೀಡಲು ಸಮರ್ಥರಲ್ಲ.

ಅಂತರರಾಷ್ಟ್ರೀಯ ದುಡಿಮೆಯ ಸಂಘಟನೆಯ ಆದೇಶದಂತೆ ೧೪ ಅಥವಾ ೧೬ರ ವಯಸ್ಸಿನವರೆಗೆ ಎಲ್ಲರೂ ಕಡ್ಡಾಯವಾಗಿ ಶಾಲೆಗೆ ಸೇರಿಕೊಳ್ಳಬೇಕು. ನಮ್ಮ ಸಂವಿಧಾನವೂ ಅದನ್ನು ಹೇಳುತ್ತದೆ. ಬಾಲಕಾರ್ಮಿಕರಿಲ್ಲದಂತೆ ಮಾಡಲು ಈ ಸೂತ್ರದ ಅನುಷ್ಠಾನವು ಒಂದು ದೊಡ್ಡ ಸಾಧನ. ಆದರೆ ಅದನ್ನು ಅನುಷ್ಠಾನಕ್ಕೆ ತರುವುದು ಹೇಗೆ ? ಕೃಷಿ, ತಂತ್ರಜ್ಞಾನ, ಕಲೆ, ಆಟಪಾಟ ಮುಂತಾದ ಕ್ಷೇತ್ರಗಳಲ್ಲಿ ಕೌಶಲ್ಯದ ವರ್ಧನೆಗೆ ಮಕ್ಕಳನ್ನು ತೊಡಗಿಸುವುದು ಬೇರೆ, ಅವರನ್ನು ಅವೇ ಕ್ಷೇತ್ರಗಳಲ್ಲಿ ದುಡಿಮೆಗೆ ಹಚ್ಚುವುದು ಬೇರೆ. ಟೆನಿಸ್ ಆಟದಲ್ಲಿ ಚೆಂಡು ತೆಗೆದುಕೊಡುವ ಮಗು ಕೂಲಿಗಾಗಿ ದುಡಿಯುತ್ತಿಲ್ಲ; ನಾಳೆ ಟೆನಿಸ್ ಆಟಗಾರ ಅಥವಾ ಆಟಗಾರ್ತಿ ಆಗಲು ಅದು ತರಬೇತಿ ಪಡೆಯುತ್ತಿದೆ. ಅಂತೆಯೇ, ಕೆತ್ತನೆ ಕೆಲಸ, ಮರದ ಕೆಲಸ, ಮನೆ ಕಟ್ಟುವ ಕೆಲಸ ಹೀಗೆ ಯಾವುದೂ ಆಗಬಹುದು. ಅವೆಲ್ಲ ಶಾಲೆಗೆ ಬದಲಾಗಿ ಅಲ್ಲ, ಶಾಲೆಯ ಜೊತೆಗೆ ಅವೆಲ್ಲಾ. ಒಂದು ಸೈಕಲ್ ರಿಪೇರಿ ಅಂಗಡಿಯಲ್ಲಿ ದುಡಿಯುವ ಮಗುವಿನ ಕತೆಯೇ ಬೇರೆ. ಅಥವಾ, ಬೇರೆಯವರ ದನ ಮೇಯಿಸಲು ಹೋಗಬೇಕಾದ ಮಗುವಿನ ಕತೆಯನ್ನೂ ನೋಡಬಹುದು.

ಅಸಂಘಟಿತ ದುಡಿಯುವ ಜನರ ಪರಿಸ್ಥಿತಿಯನ್ನು ಅಧ್ಯಯನ ಮಾಡಲು ನಮ್ಮ ದೇಶದ ಪ್ರಧಾನಿ ಅರ್ಜುನ್ ಸೇನ್‌ಗುಪ್ತ ಆಯೋಗವನ್ನು ನೇಮಿಸಿದ್ದರು. ಅದರ ವರದಿಯಂತೆ ನಮ್ಮ ದೇಶದ ಶೇಕಡ ಎಪ್ಪತ್ತಕ್ಕೂ ಹೆಚ್ಚು ಮಂದಿ ದಿನಂಪ್ರತಿ ಇಪ್ಪತ್ತು ರೂಪಾಯಿ ಅಥವಾ ಅದಕ್ಕಿಂತಲೂ ಕಡಿಮೆ ಆದಾಯದಿಂದ ಜೀವಿಸುತ್ತಿದ್ದಾರೆ. ದೇಶದ ಅಗಾಧ ಅಭಿವೃದ್ಧಿಯು ಜನಸಾಮಾನ್ಯರಿಗೆ ನೀಡಿರುವ ಸವಲತ್ತು ಇಂಥದೆಂದು ಪ್ರಧಾನಿಯವರು ತಳಮಳಗೊಂಡದ್ದೇನೂ ಇಲ್ಲ. ಶಾಲೆಗೆ ಹೋಗದ ಮಕ್ಕಳು ಅತ್ಯಂತ ಕಡಿಮೆ ಆದಾಯವಿರುವ ಕುಟುಂಬಗಳಿಗೇ ಸೇರಿರುತ್ತಾರೆಂದು ಸಾಮಾನ್ಯವಾಗಿ ಭಾವಿಸಬಹುದು. ಮಾನವಿಕ ಅಭಿವೃದ್ಧಿ ಸೂಚ್ಯಂಕದ ಆಧಾರದ ಮೇಲೆ ನಮ್ಮ ದೇಶಕ್ಕೆ ಕಳೆದ ವರ್ಷ ೧೪೭ನೆಯ ಸ್ಥಾನವಿದೆ; ಅದಕ್ಕೆ ಮುಂಚಿನ ವರ್ಷದಲ್ಲಿ ಅದು ೧೪೮ ಇದ್ದಿತು. ನಮ್ಮ ಅಭಿವೃದ್ಧಿ ಎಂತಹುದೆಂದು ಇದರಿಂದ ತಿಳಿಯಬಹುದು. ಷೇರು ಪೇಟೆಯಲ್ಲಿ ಕುಸಿತವುಂಟಾದಾಗ ಹೌಹಾರಿ ಕಾಳಜಿ ವ್ಯಕ್ತಪಡಿಸುವ ನಮ್ಮ ಸರ್ಕಾರಕ್ಕೆ ವಿಶ್ವದಲ್ಲಿ ನಮಗೆ ೧೪೭ನೆಯ ಸ್ಥಾನವಿದೆಯೆಂದು ಅಸಮಾಧಾನವಿಲ್ಲ, ಮಧ್ಯಪ್ರವೇಶ ಮಾಡಿ ಜೀವನವನ್ನು ಸುಧಾರಿಸಬೇಕೆಂಬ ತರಾತುರಿಯೂ ಇಲ್ಲ. ರಾಷ್ಟ್ರೀಯ ಪಠ್ಯಕ್ರಮದ ಸ್ವರೂಪವನ್ನು ನಿಗದಿಗೊಳಿಸಲು ೨೦೦೫ರಲ್ಲಿ ರಚಿತವಾಗಿದ್ದ ಸಮಿತಿಯ ಅಧ್ಯಕ್ಷೆ ಶಾಂತಾ ಸಿನ್ಹ ಒಮ್ಮೆ ಹೇಳಿದ್ದರು, ''ಗ್ರಾಮೀಣ ಮಕ್ಕಳ ದುಃಸ್ಥಿತಿ ಏನೆಂದರೆ ಅವರು ಶಾಲೆಗಾಗಿ ಹೋರಾಡಬೇಕಾಗಿ ಬಂದಿದೆ'' ಎಂದು. ನಮ್ಮ ಶಾಲಾಪದ್ಧತಿಯ ಕಟ್ಟಳೆಗಳನ್ನು ಸಡಿಲಗೊಳಿಸಿ, ಅರ್ಹತೆಗೆ ತಕ್ಕಂತೆ ಯಾವುದೇ ತರಗತಿಗೆ ಸೇರಿಕೊಳ್ಳುವ ಅವಕಾಶ ಮಕ್ಕಳಿಗಿರಬೇಕೆಂದು ಹಲವು ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಅಧ್ಯಾಪಕರ ಸಂಘಗಳು ಈ ಬಗ್ಗೆ ವಿಶೇಷ ಆಸಕ್ತಿ ಬೆಳೆಸಿಕೊಳ್ಳುವುದು ಉಚಿತ.

ಗ್ರಾಮ ಮತ್ತು ಗ್ರಾಮಸ್ಥರ ಜೊತೆ ಶಾಲೆಯು ಅನೌಪಚಾರಿಕ ಸಂಬಂಧವನ್ನು ಮೊದಲಿನಿಂದಲೂ ಬೆಳೆಸಿಕೊಂಡಿದೆ. ಆದ್ದರಿಂದ ಯಾವ ಕುಟುಂಬಗಳ ಮಕ್ಕಳು ಶಾಲೆಯಿಂದ ಹೊರಗೆ ಉಳಿಯುತ್ತವೆಂದು ಉಪಾಧ್ಯಾಯರಿಗೆ ಸಾಮಾನ್ಯವಾಗಿ ತಿಳಿದಿರುತ್ತದೆ. ದನ-ಕುರಿ ಕಾಯುವುದು, ಕೊಟ್ಟಿಗೆ ಕೆಲಸ ಮಾಡುವುದು, ಇಂಥವನ್ನು ಬಿಟ್ಟರೆ ನಮ್ಮ ಗ್ರಾಮಗಳಲ್ಲಿ ಮಕ್ಕಳಿಗೆ ಬೇರೆ ಉದ್ಯೋಗಗಳು ವಿರಳ. ಹೀಗಾಗಿ ಶಾಲೆಗೆ ಹೋಗದ ಮಕ್ಕಳು ಪಟ್ಟಣಗಳಲ್ಲಿ ಮತ್ತು ನಗರಗಳಲ್ಲಿ ಹೆಚ್ಚು. ಹಲವು ಕಾರಣಗಳಿಂದಾಗಿ ಅಲೆಮಾರಿ ಜೀವನ ನಡೆಸುವ ಕುಟುಂಬಗಳ ಮಕ್ಕಳಿಗೆ ಸಹ ಶಾಲೆ ಇರುವುದಿಲ್ಲ. ಕಟ್ಟಡಗಳನ್ನು ಕಟ್ಟುವ ಕೆಲಸದಲ್ಲಿರುವವರು ಇದಕ್ಕೊಂದು ಉದಾಹರಣೆ. ಇನ್ನೊಂದಂಶವನ್ನೂ ಗಮನಿಸಬಹುದು : ಅದನ್ನು ಕೊಠಾರಿ ಆಯೋಗವು ಗುರುತಿಸಿತ್ತು. ಅದೇನೆಂದರೆ, ಶಾಲೆಗೆ ಸೇರುವ ವಯಸ್ಸಿನಲ್ಲಿ ದಾಖಲಾಗಿ, ನಂತರ ಶಾಲೆಯನ್ನು ಬಿಡುವವರ ಸಂಖ್ಯೆ ಹೆಚ್ಚಾಗಿರುತ್ತದೆ. ಅಂದರೆ, ೬ರಿಂದ ೯ರವರೆಗಿನ ವಯಸ್ಸಿನ ಮಕ್ಕಳು ಬಹುತೇಕ ಶಾಲೆಗೆ ಸೇರುತ್ತಾರೆ. ಆ ವಯಸ್ಸಿನವರನ್ನು ದುಡಿಮೆಗಾಗಿ ನೇಮಿಸಿಕೊಳ್ಳುವುದು ಶಕ್ಯವಿಲ್ಲ. ಮನೆಯಲ್ಲಿ ತಂಟೆ ಮಾಡುವ ಬದಲು ಶಾಲೆಗೆ ಹೋಗಲೆಂದು ತಂದೆ- ತಾಯಿಯರೂ ಆಶಿಸಬಹುದು. ಹತ್ತನೆಯ ವಯಸ್ಸಿಗೆ ಬಂದವರು ಶಾಲೆಯಿಂದ ನಿರ್ಗಮಿಸಿ ದುಡಿಮೆಯಲ್ಲಿ ನಿರತರಾಗುವುದು ಸಾಧ್ಯ; ಬಾಲಕಾರ್ಮಿಕ ಪದ್ಧತಿಯಲ್ಲಿ ಆ ವಯಸ್ಸಿನವರು ಸಿಲುಕಿಕೊಳ್ಳಲು ಸಾಧ್ಯ. ಅಂಥವರಿಗಾಗಿ ವಿಶೇಷ ಯೋಜನೆ ಯೊಂದನ್ನು ರೂಪಿಸುವುದು ತುರ್ತು ಅವಶ್ಯಕತೆ.

ರಾಷ್ಟ್ರೀಯ ಶಿಕ್ಷಣ ಮತ್ತು ತರಬೇತಿ ಸಂಸ್ಥೆಯ ನಿರ್ದೇಶಕ ಶ್ರೀ ಕೃಷ್ಣಕುಮಾರ್ ಅವರು ಇತ್ತೀಚೆಗೆ ಎರಡು ವಿಷಯಗಳ ಬಗ್ಗೆ ಗಮನ ಸೆಳೆದಿದ್ದಾರೆ : (ಅ) ಎಲ್ಲಿ ಗ್ರಾಮ ಶಿಕ್ಷಣ ಸಮಿತಿಗಳು ಚೆನ್ನಾಗಿ ಕಾರ್ಯನಿರ್ವಹಿಸುತ್ತಿವೆಯೋ ಅಲ್ಲಿ ಮಕ್ಕಳನ್ನೆಲ್ಲಾ ಶಾಲೆಗೆ ಸೇರಿಸುವ ಪ್ರಕ್ರಿಯೆಯು ಚೆನ್ನಾಗಿ ನಡೆಯುತ್ತಿದೆ. (ಅಂದರೆ, ಅಧಿಕಾರಶಾಹಿಯ ಆಣತಿಯಿಂದ ಅದು ಕಾರ್ಯಗತವಾಗುವುದಿಲ್ಲ). ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಕಾಯಿದೆಯನ್ನು ಇಡೀ ದೇಶಕ್ಕೆ ಅನ್ವಯಿಸಿದಾಗ ಸ್ವಲ್ಪಮಟ್ಟಿಗೆ ಬಾಲಕಾರ್ಮಿಕ ಪದ್ಧತಿಯು ಇಲ್ಲವಾಗಬಹುದು; (ಆ) ಶಾಲೆಗಳನ್ನು ಹೆಚ್ಚು ಆಕರ್ಷಕವನ್ನಾಗಿ ಮಾಡಿದಾಗ ಮಕ್ಕಳು ಶಾಲೆಗಳಲ್ಲಿ ಉಳಿಯುವ ಸಾಧ್ಯತೆ ಹೆಚ್ಚು. ಅಂದರೆ, ವ್ಯಾಸಂಗದಲ್ಲಿ ಮುದ ದೊರೆಯುವಂತಿರಬೇಕು. ನೂತನ ವಿಧಾನಗಳು ಮತ್ತು ಕೌಶಲ್ಯ ಪದ್ಧತಿಗಳು ಮಕ್ಕಳಿಗೆ ಹೆಚ್ಚು ಪ್ರಿಯವೂ ಹಿತವೂ ಆಗಿರುವ ಸಾಧ್ಯತೆ ಇದೆ. ಅಧ್ಯಾಪಕರು ಮತ್ತು ಅಧ್ಯಾಪಕ ಸಂಘಗಳು ಇದರಲ್ಲಿ ನೇರವಾಗಿ ಭಾಗವಹಿಸಬೇಕು.

ಸಮಾನ ಶಿಕ್ಷಣ ಮತ್ತು ಸಮಾನತೆಗಾಗಿ ಶಿಕ್ಷಣ, ಇದು ನಮ್ಮ ದೇಶದ ಧೋರಣೆಯಾಗಬೇಕು ಮತ್ತು ಆರ್ಥಿಕ ಸೌಲಭ್ಯವಿಲ್ಲದಿರುವ ಕುಟುಂಬಗಳ ಮಕ್ಕಳಿಗೆ, ವಿಶೇಷವಾಗಿ ಅಲೆಮಾರಿ ಕುಟುಂಬಗಳ ಮಕ್ಕಳಿಗೆ, ನವೋದಯ ಶಾಲೆಗಳಂತಹ ವಸತಿ ಶಾಲೆಗಳನ್ನು ತೆರೆಯಬೇಕು. ಎಲ್ಲ ಮಕ್ಕಳೂ ಶಾಲೆಗೆ ಬಂದು, ಅಲ್ಲೇ ಉಳಿದು, ಬಾಲಕಾರ್ಮಿಕರಾಗಿ ದುಡಿಮೆಗೆ ಹೋಗಬೇಕಾದ ಸನ್ನಿವೇಶವು ಮಕ್ಕಳಿಗೆ ಬರದಿರಬೇಕಾದರೆ ಈ ಕ್ರಮಗಳು ಅಗತ್ಯ.




**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಕೆ. ಎಲ್. ಗೋಪಾಲಕೃಷ್ಣ ರಾವ್
ಎಚ್. ಎಸ್. ಗೋಪಾಲ ರಾವ್
ಜಿ. ಕೆ. ಗೋವಿಂದ ರಾವ್
ಎಂ. ಸಿ. ನರಸಿಂಹನ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮಹಾಬಲೇಶ್ವರ ರಾವ್
ವ್ಯಾಸರಾಯ ಬಲ್ಲಾಳ
ವಿಜಯಾ
ಬಿ. ವಿ. ವೀರಭದ್ರಪ್ಪ
ಟಿ. ವೆಂಕಟೇಶ ಮೂರ್ತಿ
ಯು. ಎಸ್. ಶ್ರೀನಿವಾಸನ್
ಸಿದ್ದನಗೌಡ ಪಾಟೀಲ
ಎಲ್. ಹನುಮಂತಯ್ಯ

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




**'ಹೊಸತು' ವಿಶೇಷ ಸಂಚಿಕೆ**

ಈ ಸಲದ ವಿಶೇಷ ಸಂಚಿಕೆ ಗಾತ್ರದಲ್ಲಿಯೂ ಪಾತ್ರದಲ್ಲಿಯೂ ಹಿರಿದಾಗಿದೆಯೆಂದರೆ ಯಾವ ಅತಿಶಯೋಕ್ತಿಯೂ ಆಗದು. ನೀವು ಸಂಪಾದಕೀಯದಲ್ಲಿ ಬರೆದಿರುವಂತೆ ಪತ್ರಿಕೆಯ ಆಧಾರಸ್ತಂಭಗಳಾಗಿರುವ ಮೌಲ್ಯಗಳನ್ನು ಹಾಗೂ ಅದರ ಮುಕ್ತ ಧೋರಣೆಯನ್ನು ಲೇಖಕರು ಹಾಗೂ ಓದುಗರು ಸಂಪೂರ್ಣ ಅರಿತು ಮೆಚ್ಚಿಕೊಂಡಿರುವುದನ್ನು ನಾನು ಕಂಡಿದ್ದೇನೆ. ಇಲ್ಲದಿದ್ದರೆ ಇಷ್ಟೊಂದು ಜನ ಲೇಖಕರು ಪತ್ರಿಕೆಯ ಬೆಂಬಲಕ್ಕೆ ನಿಲ್ಲುತ್ತಿರಲಿಲ್ಲ. ಈ ಸಂಚಿಕೆಯ ವಿಷಯ ವೈವಿಧ್ಯ ಹಾಗೂ ಲೇಖನಗಳ ಗುಣಮಟ್ಟ ವಿಶಿಷ್ಟವಾದದ್ದು; ನಿಜವಾದ ಅರ್ಥದಲ್ಲಿ ಕನ್ನಡದ ಬಗ್ಗೆ ಕಾಳಜಿಯುಳ್ಳದ್ದು; ಹೊಸ ವಿಚಾರಗಳಿಗೆ ಪ್ರಚೋದನೆ ನೀಡುವಂಥದು. ಮುದ್ರಣ ಅಲ್ಲಲ್ಲಿ ಸ್ವಲ್ಪ ಮಸುಕಾಗಿರುವುದನ್ನು ಬಿಟ್ಟರೆ ಉಳಿದ ಎಲ್ಲ ದೃಷ್ಟಿಯಿಂದಲೂ ಸಂಗ್ರಾಹ್ಯವಾದ ಸಂಚಿಕೆ.

ಧಾರವಾಡ — *ಚೆನ್ನವೀರ ಕಣವಿ*

ವಿಶೇಷ ಸಂಚಿಕೆ ತಲುಪಿ ಕೂಡಲೇ ಓದಲು ಪ್ರಾರಂಭಿಸಿದೆ. ತುಂಬ ಉನ್ನತಮಟ್ಟದ ಪ್ರಚಲಿತ ಸಮಸ್ಯೆಗಳನ್ನು ಕುರಿತಾದ ಲೇಖನಗಳಿವೆ. ಸೊಗಸಾದ ಸಂದರ್ಶನಗಳು; ಜನ-ಭಾಷೆ-ಕೃಷಿ ಕುರಿತಾದ ವಿಚಾರಪೂರ್ಣ ಲೇಖನಗಳು; ಸಾಹಿತ್ಯ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ ವಿಶ್ಲೇಷಣೆ, ಕತೆ-ಚುಟುಕುಗಳು-ಪದ್ಯ, ನಾಟಕ, ಹಾಸ್ಯ ಹೀಗೆ ವೈವಿಧ್ಯಮಯ ಬರಹಗಳು. ಈ ಸಂಚಿಕೆ ಪದೇ ಪದೇ ಓದುವ ಹಾಗಿದೆ.

ಅಚ್ಚರಿಯ ಸಂಗತಿ ಏನೆಂದರೆ, ವಿಶೇಷ ಸಂಚಿಕೆಗಳಲ್ಲಿ ನಾವು ಸಾಮಾನ್ಯವಾಗಿ ಕಾಣುವುದು ಸಂಚಿಕೆಯ ಅರ್ಧಕ್ಕಿಂತ ಹೆಚ್ಚು ಪುಟಗಳಲ್ಲಿ ಕಾಣುವ ಸಿನಿಮಾ ನಟ-ನಟಿಯರ ವಿಚಿತ್ರ ಭಂಗಿಗಳ ಚಿತ್ರಗಳು, ರೋಚಕವೆನಿಸುವ ಸಂಗತಿಗಳು, ಅಡ್ಡದಾರಿಯಲ್ಲಿ ನಿಂತು ಮಾತಾಡುವ ಗಾಸಿಪ್‌ಗಳು – ಇವೇ ತುಂಬಿರುತ್ತವೆ. ಆದರೆ 'ಹೊಸತು' ಅದಕ್ಕೆ ಸಂಪೂರ್ಣ ಹೊರತಾಗಿದ್ದು ಅತ್ಯಂತ ಸಾಹಿತ್ಯಕ-ಸಾಂಸ್ಕೃತಿಕ ಲೇಖನಗಳಿಂದ ಕಲಾತ್ಮಕ ಸಂಚಿಕೆಯಾಗಿದೆ. ಮನಃಪೂರ್ವಕ ಅಭಿನಂದನೆಗಳು.

ಬೆಂಗಳೂರು — *ಎಚ್. ಜಿ. ಸೋಮಶೇಖರ ರಾವ್*

'ಹೊಸತು' ವಿಶೇಷ ಸಂಚಿಕೆ ತುಂಬ ಮೌಲಿಕವಾಗಿದೆ; 'ತೂಕ'ವಾಗಿಯೂ ಇದೆ! (೩೦ ರೂ. ಬೆಲೆ ಏನೇನೂ ಅಲ್ಲ). ಅಭಿನಂದನೆಗಳು. 'ಇಬ್ಬರು ಹೇಳಿದ ಒಂದೇ ಕತೆ' ಸ್ವಾರಸ್ಯಪೂರ್ಣವಾಗಿದೆ. ಮಾತ್ರವಲ್ಲ, 'ರಾಜು' ಅವರ ಮರಣದ ಅಸ್ಪಷ್ಟ ಮುನ್ಸೂಚನೆ ಅದರ ಅಂತ್ಯದಲ್ಲಿರುವಂತಿದೆ!

ಮೈಸೂರು — *ಸಿ. ಪಿ. ಕೃಷ್ಣಕುಮಾರ್*

'ಧರ್ಮದ ಬಗೆಗೆ ಗಾಂಧೀಜಿಯವರ ಮನೋಧರ್ಮ' ಎಂಬ ಲೇಖನ ಮತ್ತು 'ಭಾರತ-ಚೀನಾ ಸಂಬಂಧ: ಭವಿಷ್ಯದ ಸವಾಲುಗಳು' ಎಂಬ ಲೇಖನಗಳು ತುಂಬ ವಿಚಾರಗಳನ್ನು ತಿಳಿಸಿಕೊಟ್ಟವು. ಈ ಲೇಖಕರಿಗೆ ಧನ್ಯವಾದಗಳು. ಎಲ್ಲಕ್ಕಿಂತ ಮಿಗಿಲಾಗಿ ಹೆಚ್ಚು ವಿಚಾರಪೂರಿತ ಮಾಹಿತಿ ಒದಗಿಸುತ್ತಿರುವ 'ಹೊಸತು' ಪತ್ರಿಕೆಗೆ ಒಬ್ಬ ಓದುಗನಾಗಿ ತುಂಬ ಋಣಿಯಾಗಿದ್ದೇನೆ.

ಕೋಲಾರ — *ಚೆನ್ನಪಟ್ಣ ಗೋ. ಧನಂಜಯ*

ದೇಶದಲ್ಲಿ ಉನ್ನತ ಶಿಕ್ಷಣಕ್ಕೆ ಸಂಬಂಧಿಸಿದಂತೆ ''ರಾಷ್ಟ್ರೀಯ ಜ್ಞಾನ ಆಯೋಗ'' ಯಾರ ಪರವಾಗಿದೆ? (ಡಾ|| ಥೇಕೆಡತ್) ಬರಹ ಸಕಾಲಿಕವಾಗಿದೆ. ದೇಶದಲ್ಲಿ ಇನ್ನೂ ಸಾಕಷ್ಟು ವಿಶ್ವವಿದ್ಯಾಲಯಗಳ ಅವಶ್ಯಕತೆ ಇದೆ ಎನ್ನುವ ವರದಿ (ಶಿಫಾರಸ್ಸಿ)ಯೊಂದಿಗೆ ಖಾಸಗಿ (ಶಿಕ್ಷಣ) ಮತ್ತು ವಿದೇಶ ವಿ.ವಿ.ಗಳ ಸ್ಥಾಪನೆಗೆ ಅವಕಾಶ ಸಿಗುತ್ತದೆ, ಅಥವಾ ರತ್ನಗಂಬಳಿ ಹಾಸಲಾಗುತ್ತಿದೆ. ಇದರಿಂದ ಈ ವರದಿ ಯಾರ ಪರ ಎನ್ನುವುದು ಬೆಳಕಿನಷ್ಟೇ ಸ್ಪಷ್ಟ. ಉನ್ನತ ಶಿಕ್ಷಣ ಕೆಲವರ ಸ್ವತ್ತಾಗುತ್ತಿರುವುದರಿಂದ ದುಡಿಯುವ ಬುನಾದಿ ವರ್ಗಗಳು ಮತ್ತಷ್ಟು ಮೂಲೆಗುಂಪಾಗುತ್ತವೆ.




ಪ್ರಾಥಮಿಕ ಶಿಕ್ಷಣ ಇನ್ನೂ ಅಭದ್ರವಾಗಿರುವ ಈ ಸ್ಥಿತಿಯಲ್ಲಿ ಉನ್ನತ ಶಿಕ್ಷಣ ಗಗನಕುಸುಮವೇ ಸರಿ.

ಇನ್ನು ಎಸ್.ಇ.ಝಡ್.ಗಳ ವಿಚಾರದಲ್ಲಿ ನರಸಿಂಹ ರೆಡ್ಡಿಯವರ ವಾದಸರಣಿಯನ್ನು ಸಂಬಂಧಿಸಿದವರು ಗಮನಹರಿಸಿದರೆ ಒಳಿತು. ಇಲ್ಲದಿದ್ದರೆ ಶ್ರೇಣೀಕೃತ ನಮ್ಮ ವ್ಯವಸ್ಥೆಯಲ್ಲಿ ರೈತ ಮಣ್ಣುಪಾಲಾಗಬೇಕಾಗಿಬರುತ್ತದೆ.

ಸೇಡಂ — *ಬಿ. ಆರ್. ಅಣ್ಣಾಸಾಗರ್*

ವಾರ್ಷಿಕ ಹಲವಾರು ವೈವಿಧ್ಯಮಯ ಲೇಖನಗಳಿಂದ ಅಭ್ಯಾಸಯೋಗ್ಯವಾಗಿದೆ. ಆದರೂ ಏನೋ ಕೊರತೆ ಅನಿಸುತ್ತಿದೆ. ಲೇಔಟ್, ವಾರ್ಷಿಕದಲ್ಲಿರುವ ಫೋಟೋಗಳು ಇನ್ನೂ ಉತ್ತಮವಾಗಿರಬೇಕಿತ್ತು. ಸಂದರ್ಶನಗಳಲ್ಲಿ ಪ್ರೊ|| ಎ. ಆರ್. ವಾಸುದೇವಮೂರ್ತಿಗಳಂತಹ 'ಎಲೆಮರೆ ಹಣ್ಣು'ಗಳನ್ನು ಸೇರಿಸಿರುವುದು ನಿಜಕ್ಕೂ ಶ್ಲಾಘನೀಯ ಕಾರ್ಯ. ಜನಪ್ರಿಯರಾದವರಿಗಿಂತ ಎಷ್ಟೋ ಪಾಲು ಉತ್ತಮ ಕೆಲಸ ಮಾಡಿರುವ ಪ್ರೊ|| ವಾಸುದೇವ ಮೂರ್ತಿಗಳಂತಹವರು ಇನ್ನೂ ಹಲವಾರು ಜನರು ಇದ್ದಾರೆ. ಪ್ರತಿ ಓರ್ವ ಅಂತಹವರನ್ನು ಜನತೆಗೆ ಪರಿಚಯಿಸಿದರೆ ಉಪಕಾರವಾದೀತು.

ರಂಗಭೂಮಿ ಮತ್ತು ಸಿನಿಮಾ ಬಗ್ಗೆ ಲೇಖನಗಳಿಲ್ಲ. ಆದ್ರೂ ಅಣತಿ ಅವರ ಪರಿಚಯಾತ್ಮಕ ಲೇಖನ ಮತ್ತು ಮಾಲತಮ್ಮನವರನ್ನು ಪರಿಚಯಿಸಿದ ಲೇಖನಗಳು ವರ್ತಮಾನದ ರಂಗಭೂಮಿ, ಸಿನಿಮಾ ಮಾಧ್ಯಮಗಳ ಬಗ್ಗೆ ಏನೂ ತಿಳಿಸಲಾರವು) ಸಿನಿಮಾ ಉದಾಸೀನ ಮಾಡಬೇಡಿ. ಎಲ್ಲಾ ಪತ್ರಿಕೆಗಳಲ್ಲಿ ಅದನ್ನು ವೈಭವೀಕರಿಸಿ, ನಟಿಯರ ಆಕರ್ಷಕ ಭಂಗಿಗಳ ಚಿತ್ರಪಟಗಳಿರುತ್ತವೆ ವಿನಃ, ವಿಚಾರಪೂರ್ಣ ಲೇಖನಗಳನ್ನು ಒಳಗೊಂಡಿರುವುದಿಲ್ಲ. ಈ ದಿಸೆಯಲ್ಲಿ 'ಹೊಸತು' ಸರಿಹೆಜ್ಜೆಯನ್ನಿರಿಸಬಹುದು. ಒಟ್ಟಾರೆ ಓದುಗನಿಗೆ ಉಪಯುಕ್ತವಾಗಿದೆ.

ಬೆಂಗಳೂರು — *ಸಂಪಿಗೆ ತೋಂಟದಾರ್ಯ*

೨೦೦೭ರಲ್ಲಿನ ಘಟನೆಗಳನ್ನು ಕುರಿತಾದ ಸಂಪಾದಕೀಯ ಜಿ.ಆರ್. ಲೇಖನಿಯಲ್ಲಿ ಸಹಜವಾಗಿ ಮೊನಚಾಗಿಯೇ ಮೂಡಿಬಂದಿದೆ. ಇನ್ನು ''ಕಡಗೋಲು''ವಿನಲ್ಲಿ ಹೊಸತುವಿನಿಂದ ಆಯ್ದ ಲೇಖನಗಳು ಪ್ರಕಟಗೊಂಡಿರುವುದು ನಿಜಕ್ಕೂ ಹೆಮ್ಮೆಯ ಸಂಕೇತ. ಇದಕ್ಕೆ ಪ್ರಶಂಸನಾರ್ಹರು 'ಹೊಸತು'ವಿನ ಲೇಖಕ ಬಳಗ. ಇನ್ನು ಸಾಹಿತ್ಯ ಪರಿಷತ್ತನ್ನು ಕುರಿತಾದ ಸಂಪಾದಕೀಯದ ಧೋರಣೆ ಎಚ್ಚರಿಕೆ ಗಂಟೆಯಾಗಬೇಕೆನ್ನುವುದು ಈ ಓದುಗನ ಅನಿಸಿಕೆಯೂ ಸಹ. ಚುನಾವಣೆ ಗೆಲ್ಲುವುದು ಸುಲಭಸಾಧ್ಯವಲ್ಲ, ಅದಕ್ಕೆ ಜನಮನಗೆಲ್ಲುವ ಕೆಲಸವಾಗಬೇಕೆನ್ನುವ ಸಲಹೆ ಕಾಂಗ್ರೆಸಿಗೆ ಸೂಕ್ತವಾಗಿದೆ.

ಬೆಂಗಳೂರು — *ನೆ. ಲ. ರಾಮಮೂರ್ತಿ*

ಲೇಖನಗಳು ಉಪಯುಕ್ತವಾಗಿವೆ. ಸಂಪಿಗೆ ತೋಂಟದಾರ್ಯರ 'ಕಣ ಸಿದ್ಧಾಂತ' ತುಂಬಾ ಚೆನ್ನಾಗಿತ್ತು. ಒಟ್ಟಿನಲ್ಲಿ 'ಹೊಸತು' ನಮ್ಮ ಸಮುದಾಯದಲ್ಲಿ ವಿಭಿನ್ನ

''ಹೊಸತು ೨೦೦೮'' ವಿಶೇಷಾಂಕದಲ್ಲಿ ನನ್ನ 'ಜನರನ್ನು ಒಳಗೊಳ್ಳುವ ಅಭಿವೃದ್ಧಿ – ಕರ್ನಾಟಕದ ಅನುಭವಗಳು' ಎಂಬ ಲೇಖನದಲ್ಲಿ ಎರಡು ಅಂಕಿಗಳು ತಪ್ಪಾಗಿಬಿಟ್ಟಿವೆ: 'ರಾಜ್ಯದಲ್ಲಿ ೨೦೦೪-೦೫ರಲ್ಲಿ ೧ರಿಂದ ೧೦ನೆಯ ತರಗತಿವರೆಗೆ ದಾಖಲಾದ ಪರಿಶಿಷ್ಟ ಮಕ್ಕಳ ಸಂಖ್ಯೆ ೨.೬೧ ಲಕ್ಷ, ಇವರ ಸಂಖ್ಯೆ ೨೦೦೫-೦೬ರಲ್ಲಿ ೨.೬೮ ಲಕ್ಷಕ್ಕೆ ಏರಿಕೆಯಾಗಿದೆ.' (ಪುಟ ೨೬). ವಾಸ್ತವವಾಗಿ ೨೦೦೪-೦೫ರಲ್ಲಿ ೧ರಿಂದ ೧೦ನೆಯ ತರಗತಿವರೆಗೆ ದಾಖಲಾದ ಪರಿಶಿಷ್ಟ ಮಕ್ಕಳ ಸಂಖ್ಯೆ ೨೬.೦೭ ಲಕ್ಷ, ಇವರ ಸಂಖ್ಯೆ ೨೦೦೫-೦೬ರಲ್ಲಿ ೨೬.೭೮ ಲಕ್ಷಕ್ಕೆ ಏರಿಕೆಯಾಗಿದೆ. ತಪ್ಪಿಗಾಗಿ ಕ್ಷಮೆ ಯಾಚಿಸುತ್ತೇನೆ. ಇದನ್ನು ಸರಿಪಡಿಸಿಕೊಂಡು ಓದಿಕೊಳ್ಳಬೇಕಾಗಿ ಕೇಳಿಕೊಳ್ಳುತ್ತೇನೆ.

*– ಡಾ|| ಟಿ. ಆರ್. ಚಂದ್ರಶೇಖರ್, ಹಂಪಿ*

'ಹೊಸತು' ಜನವರಿ ವಿಶೇಷ ಸಂಚಿಕೆಯ ೧೪೩ನೆಯ ಪುಟದ ಎಡಗಡೆ ಮೇಲ್ಭಾಗದಲ್ಲಿ ಅಚ್ಚಾಗಿರುವ ಚಿತ್ರದಲ್ಲಿ ಶ್ರೀ ಗುಬ್ಬಿ ವೀರಣ್ಣ ಅವರೊಡನಿರುವುದು ಅವರ ಪತ್ನಿ ಶ್ರೀಮತಿ ಜಿ. ಸುಂದರಮ್ಮನವರು. ತಪ್ಪಾಗಿ ಅಚ್ಚಾಗಿರುವಂತೆ ಅವರು ಮಗಳಾದ ಶ್ರೀಮತಿ ಮಾಲತಮ್ಮನವರಲ್ಲ. ಪ್ರಮಾದಕ್ಕಾಗಿ ವಿಷಾದಿಸುತ್ತೇವೆ.

*– ಸಂಪಾದಕ*

ದೃಷ್ಟಿಕೋನಗಳನ್ನು ಬೆಳೆಸುವ, ದೇಶವನ್ನು ಪ್ರಗತಿಯೆಡೆಗೆ ಕೊಂಡೊಯ್ಯುವ ಜವಾಬ್ದಾರಿಯಿಂದ ನಡೆಯುತ್ತಿದೆ.

ಬಾಚಿಗೊಂಡನಹಳ್ಳಿ **ಕೊಪ್ಪಳ ಶ್ರೀಧರ**

ನನ್ನ ಒಂದು ವಿಚಾರವನ್ನು ತಮ್ಮೆದುರು ಪ್ರಸ್ತುತ ಪಡಿಸುತ್ತೇನೆ. ತಾವು ಪ್ರಸ್ತಾಪಿಸಿರುವ ವಿಷಯಗಳನ್ನು ಸಂಪಾದಕೀಯದಲ್ಲಿ ಸ್ವಲ್ಪ ಮಾತ್ರ ಬಳಸಿಕೊಂಡು ನಿಮ್ಮದೇ ಆದ ಅಂಕಣದಲ್ಲಿ ಲೇಖನದ ರೂಪದಲ್ಲಿ ಪ್ರಕಟಿಸುವುದು ತುಂಬ ಸೂಕ್ತವೆನಿಸುತ್ತದೆ. ಸಂಪಾದಕೀಯವು ತೀರ ಸುದೀರ್ಘವಾದರೆ ಓದುಗರಿಗೆ ಹುರುಪು ಬರುವುದಿಲ್ಲ. ಸಂಪಾದಕೀಯ ಯಾವಾಗಲೂ ಕುತೂಹಲವನ್ನು ಒಳಗೊಂಡಿರಲು ಚಿಕ್ಕದಾಗಿರುವುದು ಒಳಿತು. ನಿಮ್ಮ ಆಲೋಚನೆಗಳನ್ನು ಪ್ರತ್ಯೇಕ ಲೇಖನದ ಮೂಲಕ ಹೊರ ಹಾಕುವುದು ಹೆಚ್ಚು ಸೂಕ್ತವಾದದ್ದೆಂದು ನನ್ನ ಅಭಿಪ್ರಾಯ.

ಜಮಖಂಡಿ **ಅರ್ಜುನ ಕೋರಟಕರ**

**ಜನವರಿ 'ಹೊಸತು'**

ಇಳಿ ವಯಸ್ಸಿನಲ್ಲೂ ಆಚಾರ್ಯ ಕೆ.ವಿ.ಆರ್. ಶಿಕ್ಷಣದ ಮಹತ್ವದ ಬಗ್ಗೆ ಬತ್ತದ ಅವರ ಕಳಕಳಿ ನನ್ನನ್ನು ಬೆರಗುಗೊಳಿಸಿದ್ದಿದೆ. ಎಲ್ಲೆಲ್ಲೂ ಪಾಠದಂಗಡಿಗಳೇ ಕೋರೈಸುತ್ತಿರುವಾಗ, ತಮ್ಮ ವ್ಯಾಪಕ ಅನುಭವವನ್ನು ಸೋಸಿ, ಬೀಜ ಬಿತ್ತಲು ತವಕಿಸುವ ಆ ಹಿರಿ ಚೇತನಕ್ಕೆ ನನ್ನ ನಮನ.

ನನ್ನ ಮಗಳು ಅವರ ಶಾಲೆಯಲ್ಲಿ ಸ್ವಲ್ಪಕಾಲ ವ್ಯಾಸಂಗ ಮಾಡಿದ್ದಳು ಮತ್ತು ನಾನು ಕೆ.ವಿ.ಆರ್. ನಿರೂಪಿಸಿದ ಪೋಷಕಸಭೆಯಲ್ಲಿದ್ದು, ಅವರ ಕಾಳಜಿಯ ಅರಿವು ಪಡೆದಿದ್ದೆ ಎನ್ನುವುದು – ಲೇಖನದ ನೇಪಥ್ಯದಲ್ಲಿ ಖುಷಿಯ ವಿಷಯ.

ಪಾವಗಡ **ಕೆ. ಪುರುಷೋತ್ತಮ**



# ಎದ್ದೇಳು ಕೃಷ್ಣ ಎದ್ದೇಳು



ಎದ್ದೇಳು ಕೃಷ್ಣ ಎದ್ದೇಳು
ಮೈ ಮುರಿ ತೆಗೆದು ಎದ್ದೇಳು
ಮೊನ್ನೆ ಮಕರ ಸಂಕ್ರಾಂತಿ
ಇನ್ನು ಉತ್ತರಾಯಣ
ಇಂದು ನಿನ್ನ ಪರ್ಯಾಯೋತ್ಸವ
ಯತಿವರೇಣ್ಯರ ಯಾದವಿಕಲಹ ಇದೀಗ
ನಿನ್ನ ಭಕ್ತರಿಗೆ ಪುಕ್ಕಟೆ ಮನೋರಂಜನೆ
ಎದ್ದೇಳು ಕೃಷ್ಣ ಎದ್ದೇಳು
ನೇಸರು ನೆತ್ತಿಗೇರಿತು, ಎದ್ದೇಳು

ಭಕ್ತಜನ ನಿನ್ನ ದರುಶನಕಾಗಿ
ಸುಡುಬಿಸಿಲನ್ನೂ ಲೆಕ್ಕಿಸದೆ
ಬರಿಗಾಲಲ್ಲಿ ಕ್ಯೂ ನಿಂತು
ಜಾತ್ರೆ ನೆರೆದಿದ್ದಾರೆ
ಜಿಗುಟು ಮೈಬೆವರು
ಕೊಳಕು ಚರಂಡಿ ಮೂತ್ರ ದೊಡ್ಡಿಯ
ಗಬ್ಬುವಾಸನೆ; ಪಿಳ್ಳಂಗೋವಿಗಳು
ಮಾಡಿದ ಹೇಸಿಕೆಯ ದುರ್ನಾತ
ಆದರೂ ನೋಡು ಮೂಗಿಗೆ ಕೈ ಹಿಡಿದು
ತದೇಕ ಭಕ್ತಿಯಿಂದ ಭಕ್ತವತ್ಸಲನಾದ
ನಿನ್ನ ಬರೋಣವನ್ನೇ ಕಾಯುತ್ತಿದ್ದಾರೆ

ಈಗತಾನೆ ಮಾಧ್ವಸರೋವರದಲ್ಲಿ ಮಿಂದು
ಮೈಮನ ಶುಚಿರ್ಭೂತರಾಗಿ
ಒದ್ದೆ ಸೀರೆಯಲಿ ಎದೆಯುಬ್ಬು
ನಾಭಿ ಜಘನ ಸ್ಥಲ ಮರೆಮಾಚದೆ
ತುಂಬು ಮೊಗದ ಅರಳುಗಂಗಳ
ಗುಂಗುರುಗೂದಲಿನ ಶ್ವೇತವರ್ಣದ
ಗೋಪಿಕಾ ಕನ್ನೆಯರು ಕೈಮುಗಿದು
ನಿನ ಅಪ್ಪುಗೆಗಾಗಿ ಹಂಬಲಿಸುತ್ತಿದ್ದಾರೆ

ಎಂದಿನಂತೆ ಇಂದು ನೀನು
ಓಬಿರಾಯನ ಜಬ್ಬು ರಥದಲಿ
ಕುಳಿತು ರಥಬೀದಿಯಲಿ ತಿರುಗಬೇಕಾಗಿಲ್ಲ
ನಿನಗಾಗಿ ಇಂದು ಸಿದ್ಧವಾಗಿದೆ ಚಿನ್ನದ ರಥ
ಅದು ನಿನ್ನ ಭಕ್ತಮಣಿಗಳು ನೀಡಿದ
'ಸುದಾಮಭಕ್ತಿ'ಯ ಕಾಣಿಕೆ

ಹಾಂ! ಬಂದೆಯಾ ಈ ಕಡೆ ಬಾ
ಅದೇಕೆ ಮತ್ತೆ ಆ ಕಡೆ ದಿಟ್ಟಿಸುತ್ತಿರುವೆ?
ಕುಚೇಲನ ನೆನಪಾಯಿತೆ?
ಇರಲಿ ಬಿಡು ಅವನು ಮುದುಕ
ಕಡಲೆಕಾಯಿ ಮುಂಡಕ್ಕಿ ಚಕ್ಕುಲಿ
ಮಾರುತ್ತಿದ್ದಾನೆ ರಸ್ತೆ ಪಕ್ಕದಲ್ಲಿ
ದ್ವಾಪರಯುಗದ ನಿನ್ನ ಭಕ್ತನಿಗೆ
ನೀನು ನೀಡಿದ ಫಲ ವಿಪುಲ
ಧನ್ಯಕುಚೇಲ ಧನ್ಯ!

ಮುನಿಸು ಬೇಡ ಕೃಷ್ಣ ಮುನಿಸು ಬೇಡ
ಆ ಕಡೆ ತಪ್ಪಿಯೂ ನೋಡಬೇಡ
ಅದು ನಮ್ಮ ಉಡುಪಿಯ ಕಾಲೇಜು ಹುಡುಗರು
ದನಕಾಯುವ ನಿನ್ನ ಗೋವಳ ಮಂದೆಯಲ್ಲ
ಏನೋ ಮೈಯ ಸೆಕೆ ತಾಳಲಾರದೆ ಗುಂಪಿನ ಮಧ್ಯೆ
ತೂರಿ ಕಂಡೂ ಕಾಣದಂತೆ ನಿನಗಾಗಿ ಕಾದು ನಿಂತ
ಹುಡುಗಿಯರಿಗೆ ಢಿಕ್ಕಿ ಹೊಡೆಯುತ್ತಾರೆ
ಮೈ ಉರಿ ತಣ್ಣಗೆ ಮಾಡಿಕೊಳ್ಳುತ್ತಾರೆ
ನಿನಗೆಲ್ಲ ಇದು ಹೊಸತಲ್ಲ ಬಿಡು
ಹಾಗಾಗಿ ಅದನೆಲ್ಲ ಮರೆತು ಬಿಡು

ಅದೇಕೆ ಆ ಕಡೆ ಮತ್ತೆ ನೋಡುತ್ತಿರುವೆ?
ತ್ರೇತಾಯುಗದ ಶಬರಿಯ ನೆನಪಾಯಿತೆ?
ಅವಳು ಹಣ್ಣುಮುದುಕಿ, ಬುಗುರಿ ಪೇರಳೆ
ನೇರಳೆ ಹಣ್ಣು ಮಾರುತ್ತಿದ್ದಾಳೆ; ಅದಕೆಲ್ಲ
ತಲೆಬಿಸಿಬೇಡ; ಅದೆಲ್ಲ ನಮ್ಮಲ್ಲಿ ಮಾಮೂಲು
ಎಲ್ಲ ಅವರವರ ಕರ್ಮದ ಫಲ
ಅದನ್ನು ನೀನೂ ಹೇಳಿದೆಯಲ್ಲ ಗೀತೆಯಲ್ಲಿ?

ಅಂದು ದ್ವಾಪರಯುಗದಲ್ಲಿ ಅರ್ಜುನನಿಗೆ
ಮಂಕುಮಾಯೆ ಕವಿದಾಗ ವಿರಾಟರೂಪ ತೋರಿದೆ
ರಥದಲ್ಲಿಯೆ; ಇಂದು ಈ ಸ್ವರ್ಣ ರಥದಲ್ಲಿ
ವಜ್ರಮುಕುಟಧಾರಿಯಾಗಿ ಕುಳಿತು ಮಂಕುಕವಿದು
ವಿಲಿ ವಿಲಿ ಒದ್ದಾಡುವ ನಮಗೂ ನಿನ್ನ ದರುಶ ನೀಡಿ
ಒಳಗಣ್ಣು ತೆರೆಯುವಂತೆ ಮಾಡು; ನಮಗೂ ಮೋಕ್ಷ ನೀಡು.



**ಗೋಪಾಲ ಬಿ. ಶೆಟ್ಟಿ**

'ಆರಾಧನಾ' ಇಂದ್ರಾಳಿ, ೩ನೇ ಅಡ್ಡರಸ್ತೆ, ಉಡುಪಿ - ೫೭೬ ೧೦೨

ಈ ತಿಂಗಳು (೩ನೇ ಪುಟದಿಂದ)

ಎದುರಿಸಬೇಕಾಗಿರುವ ಸನ್ನಿವೇಶದಲ್ಲಿ ದಾವೂದ್ ಕೂಟದಲ್ಲಿ ಪಾಲ್ಗೊಂಡವರಿಗೆ ಅತೀವ ಮರ್ಯಾದೆ ತೋರಿಸುವುದು ಹೇಗೆ ತಾನೆ ಸಮರ್ಥನೀಯ ? ನಮ್ಮ ದೇಶದ ನಾಗರಿಕರು ಈ ಪ್ರಶ್ನೆಯನ್ನು ಹಾಕಿಕೊಳ್ಳುವುದು ಉಚಿತವಾಗಿರುತ್ತದೆ.

* * *

ಸಂಜಯ ದತ್‌ಗೆ ಶಿಕ್ಷೆಯಿಂದ ತಪ್ಪಿಸಿಕೊಳ್ಳುವ ಮಾರ್ಗ ಗೊತ್ತಿದೆ. ಆದರೆ ರಾಜ ಠಾಕ್ರೆ ಆ ಬಗ್ಗೆ ಯೋಚನೆಯನ್ನೂ ಮಾಡಬೇಕಾಗಿಲ್ಲ. ಏಕೆಂದರೆ ಆತನ ಪ್ರಚೋದನೆ ಮತ್ತು ಹಿಂಸಾಕಾಂಡಗಳನ್ನು ಅಪರಾಧವೆಂದು ಪರಿಗಣಿಸಿ ಕಾನೂನು ಕ್ರಮ ಜರುಗಿಸಲು ಸ್ವತಃ ಮಹಾರಾಷ್ಟ್ರ ಸರ್ಕಾರವೇ ಹಿಂಜರಿಯುತ್ತದೆ. ಬಾಳ ಠಾಕ್ರೆ ಅರವತ್ತರ ದಶಕದಲ್ಲಿ ''ಲುಂಗೀವಾಲಾ''ಗಳನ್ನು ಗುರಿಯಾಗಿಸಿ ಪ್ರಸಿದ್ಧಿಗೆ ಬಂದ ವ್ಯಕ್ತಿ. ತನ್ನ ''ಮಾರ್ಮಿಕ್'' ಎಂಬ ವಾರಪತ್ರಿಕೆಯಲ್ಲಿ ದಕ್ಷಿಣ ಭಾರತದ ಜನರನ್ನು ಮೂದಲಿಸಿ ವಿಷದ ಗಾಳಿ ಹರಡಿದ ಅಪಕೀರ್ತಿ ಆತನಿಗೆ ಅಂಟಿಕೊಳ್ಳಲಿಲ್ಲ. ಅವೆಷ್ಟು ''ಉಡುಪಿ ಹೊಟೇಲ್''ಗಳು ಧ್ವಂಸವಾದುವೆಂಬ ಲೆಕ್ಕ ಮರೆತುಹೋಗಿದೆ. ಆತನೀಗ ಪರಿಷ್ಕೃತ ಯೋಗ್ಯ ರಾಜಕಾರಣಿ ಎನಿಸಿಕೊಂಡು ಬೇರೆ ರಾಜಕೀಯ ಪಕ್ಷಗಳೊಡನೆ ಮೈತ್ರಿ ಸಾಧಿಸಿ ಸರಕಾರ ರಚಿಸುವ ಹಂತ ತಲುಪಿರುವುದು ಸರ್ವವೇದ್ಯ. ಆತನಂತೆಯೇ ಮೆಟ್ಟಿಲೇರಲು ಈಗ ರಾಜ ಠಾಕ್ರೆ ಸರದಿ. ಉತ್ತರ ಪ್ರದೇಶ ಮತ್ತು ಬಿಹಾರದವರನ್ನು ಸೇರಿಸಿ ಆತ ದಕ್ಷಿಣ ಭಾರತ ಮೂಲದವರ ವಿರುದ್ಧ ಮಹಾರಾಷ್ಟ್ರದಲ್ಲಿ ಸಮರ ಸಾರಿದ್ದಾನೆ. ಅದನ್ನು ಮೊಳಕೆಯಲ್ಲೇ ಚಿವುಟಿಹಾಕಲು ಮುಂದಾಗದಿರುವ ಸರ್ಕಾರವು ಮುಂದೆ ಅದು ಪೆಡಂಭೂತವಾಗಿ ಬೆಳೆದಾಗ ನೀತಿ ಬೋಧನೆ ಮಾಡಲು ಹೇಸುವುದಿಲ್ಲ. ಅಪರಾಧಿಗಳನ್ನು ಮನ್ನಿಸುವುದು ಮತ್ತು ಜನಪರ ಹೋರಾಟಗಾರರನ್ನು ನಿಂದಿಸಿ ಬಂಧಿಸುವುದು ಸಹಜ ಆಡಳಿತ ನೀತಿಯಾಗಿ ಕಾಣಬರುತ್ತಿದೆ. ಇದು ಪ್ರಜಾಪ್ರಭುತ್ವವನ್ನು ಬೆಳೆಸುವ ವಿಧಾನವಲ್ಲ.

* * *

ಷೇರು ಪೇಟೆಯಲ್ಲಿ ರಿಲಯನ್ಸ್‌ನ ಕಾರುಬಾರು ನಿರೀಕ್ಷೆಯ ಮಟ್ಟವನ್ನು ಮೀರಿ ಹೂಡಿಕೆದಾರರಿಗೆ ಹುರುಪನ್ನುಂಟುಮಾಡಿತು. ಅದರ ಫಲವಾಗಿ, ಚಿಕ್ಕ ಪ್ರಮಾಣದಲ್ಲಿ ಹಣ ತೊಡಗಿಸಿ ಲಾಭ ಪಡೆಯಲಿಚ್ಛಿಸುವ ಕನಸುಗಾರರನೇಕರು ನುಗ್ಗಿನುಗ್ಗಿ ಷೇರುಗಳನ್ನು ಕೊಂಡರು. ಅವರ ಬಂಡವಾಳ ಇನ್ನೇನು ದ್ವಿಗುಣಗೊಳ್ಳುತ್ತದೆಂದು ಆಕಾಶ ಕುಸುಮಕ್ಕೆ ಕೈಚಾಚುತ್ತಿದ್ದಾಗ ರಿಲಯನ್ಸ್ ಷೇರುಗಳು ಅಗಾಧವಾಗಿ ಕುಸಿದು ಇವರೆಲ್ಲರಿಗೂ ಪ್ರಬಲವಾದ ಪ್ರಹಾರ ನೀಡಿತು. ಷೇರುಪೇಟೆಯಲ್ಲಿ ಕೇವಲ ಲಾಭವೇ ನಮ್ಮನ್ನು ಎದುರುಗೊಳ್ಳುತ್ತದೆಂಬ ಮೂರ್ಖ ನಂಬಿಕೆಯವರಿಗೆ ಸಾಂತ್ವನ ಹೇಳುವುದು ವ್ಯರ್ಥ. ಕುದುರೆಯ ಬಾಲ ಹಿಡಿಯುವವರು ಮುಗ್ಗರಿಸಲು ತಯಾರಿರಬೇಕೆಂಬುದು ಬಂಡವಾಳಶಾಹಿ ಷೇರು ಮಾರುಕಟ್ಟೆಯ ನಿಯಮ. ಅದನ್ನು ತಿಳಿಯದವರಂತೆ ನಟಿಸಿ ಜೋರಾಗಿ ಬೊಬ್ಬೆಯಿಡುವವರ ಬಗ್ಗೆ ಎಷ್ಟು ಕನಿಕರವಿರ ಬೇಕೆಂಬುದನ್ನು ನಾಗರಿಕರು ತೀರ್ಮಾನಿಸಿಕೊಳ್ಳಬೇಕು. ವ್ಯಾಸರು ತಮ್ಮ ಕಾವ್ಯದಲ್ಲಿ ಪಾಂಡವರನ್ನು ಚಿತ್ರಿಸಿದಿಂದಾಗಿನಿಂದಲೂ ಇದು ನಡೆಯುತ್ತಲೇ ಬಂದಿದೆ. ದುಡಿಮೆಯಿಲ್ಲದೆ ಲಾಭ ಪಡೆದುಕೊಳ್ಳಲು ಬಂಡವಳಿಗರಿಗೆ ಮಿಗಿತಾಯ ಮೌಲ್ಯದ ಆಸರೆ ಇದೆ. ಷೇರುಪೇಟೆಯಲ್ಲಿ ಸಣ್ಣ ಪ್ರಮಾಣದ ಹೂಡಿಕೆಯು ಸದಾ ಲಾಭವನ್ನು ತಂದುಕೊಡುತ್ತದೆಂಬ ಆಶಯವು ತೀರಾ ಆಸೆಬುರುಕುತನದ್ದೆಂದಷ್ಟೇ ಹೇಳಬಹುದು. ಅದನ್ನು ತಿಳಿದೂ ಷೇರು ಮಾರುಕಟ್ಟೆಯನ್ನು ಪ್ರವೇಶಿಸುವವರಿಗೆ ನಾಗರಿಕ ಸಮಾಜವು ನಷ್ಟವನ್ನು ತುಂಬಿಕೊಡುವ ಜವಾಬ್ದಾರಿಯನ್ನು ಹೊತ್ತುಕೊಳ್ಳಬೇಕಾಗಿಲ್ಲ. ಅದೆಲ್ಲಾ ಅವರವರ ಆಯ್ಕೆ; ಅದಕ್ಕೆ ಅವರವರೇ ಜವಾಬ್ದಾರರು. ನಾಗರಿಕ ಸಮಾಜದ ಮುಂದೆ ಗೋಳಿಡುವವರು ತಮಗೆ ಲಾಭ ಉಂಟಾದಾಗ ಅದನ್ನು ಸಾಮಾಜಿಕರೊಡನೆ ಹಂಚಿಕೊಳ್ಳಲು ಬಂದಿದ್ದರೇನು ?

* * *

ಪ್ರಧಾನಿ ಮನಮೋಹನ ಸಿಂಗರು ವ್ಯಗ್ರರಾಗಿದ್ದಾರೆ. ಅವರ ಹಲವು ಹೊಲಸು ನೀತಿಗಳನ್ನು ಪ್ರಶ್ನಿಸುವವರನ್ನು ಕಂಡರೆ ಅವರಿಗೆ ಸಿಟ್ಟು ಬರುತ್ತದೆ. ಅವರನ್ನೆಲ್ಲ ''ಅಭಿವೃದ್ಧಿ''ಗೆ ಅಡ್ಡಗಾಲುಹಾಕುವ ಕೆಟ್ಟ ಜನರೆಂದು ಪ್ರಧಾನಿ ಮೂದಲಿಸುತ್ತಾರೆ. ತಮ್ಮ ನೀತಿಗಳನ್ನು ವ್ಯಾಪಕವಾಗಿ ಜಾರಿಗೆ ತರಲು ''ಆಂತರಿಕ ಛಿದ್ರತೆ'' ಕಾರಣವೆಂದು ಅವರು ವ್ಯಸನ ವ್ಯಕ್ತಪಡಿಸಿದ್ದಾರೆ. ಇದರಿಂದಾಗಿ ವಿದೇಶಗಳ ಕಣ್ಣಿನಲ್ಲಿ ಭಾರತದ ಸರ್ಕಾರಕ್ಕೆ ಘನತೆಯು ಕುಂದುತ್ತದಂತೆ ! ಅಂದರೆ, ಅಮೆರಿಕಾದೊಡನೆ ಅವರು ಮಾಡಿಕೊಳ್ಳಲೆಳಸುವ ಪರಮಾಣು ಒಪ್ಪಂದ, ವಿದೇಶಿ ಬಂಡವಾಳದ ಮುಕ್ತ ಪ್ರವೇಶ, ನಮ್ಮ ದೇಶದ ಸಂಪನ್ಮೂಲವನ್ನು ಪರಭಾರೆ ಮಾಡುವುದು, ವಿದೇಶಾಂಗ ನೀತಿಯನ್ನು ಅಮೆರಿಕಾದ ಪರವನ್ನಾಗಿ ಪರಿವರ್ತಿಸುವುದು, ಮುಂತಾದುವನ್ನೆಲ್ಲಾ ಜನತೆಯು ಕಣ್ಣುಮುಚ್ಚಿ ಸ್ವಾಗತಿಸಬೇಕೆಂದು ಅವರು ಅಪೇಕ್ಷಿಸುತ್ತಾರೆ. ''ವಿದೇಶಗಳ ಕಣ್ಣು'' ಅವರಿಗೆ ಮುಖ್ಯವಾಗುತ್ತದೆ, ಸ್ವದೇಶದ ಜೀವ ಮುಖ್ಯವಾಗುವುದಿಲ್ಲ. ಇದು ನಾಚಿಕೆಗೇಡಿನ ಸಂಗತಿ. ''ಆಂತರಿಕ ಛಿದ್ರತೆ''ಎಂದಾಗ ರಾಜ ಠಾಕ್ರೆ, ಲಾಲೂ ಪ್ರಸಾದ ಯಾದವರ ರೈಲ್ವೇ ಇಲಾಖೆಯ ನೇಮಕಾತಿ ಅನೀತಿ, ಹಲವು ರಾಜ್ಯಗಳಲ್ಲಿ ಪ್ರಭುತ್ವದ ದಮನ ನೀತಿ, ಇವೆಲ್ಲಾ ಅವರಿಗೆ ನೆನಪಿಗೆ ಬರುವುದಿಲ್ಲ. ಇಂತಹ ಪ್ರಧಾನಿಯನ್ನು ಹೊಂದಿರುವುದು ನಮ್ಮ ದೇಶಕ್ಕೆ ಶೋಭೆ ತರುವುದಿಲ್ಲ. ಅವರಿಗೆ ಕಾಣುವುದು ಅಂಬಾನಿ ಸೋದರರು, ಮಿತ್ತಲ್, ಪ್ರೇಮ್‌ಜಿ, ರತನ್ ಟಾಟಾ, ಮುಂತಾದವರೇ ವಿನಾ ದೇಶದ ನಿರ್ಗತಿಕರಲ್ಲವೆಂಬುದನ್ನು ಮೊದಲು ಮನದಟ್ಟುಮಾಡಿಕೊಳ್ಳಬೇಕಾದವರು ಸ್ವತಃ ನಿರ್ಗತಿಕರು ಮತ್ತು ಅವರ ಹಿತವನ್ನು ಬಯಸಿ ಹೋರಾಟ ಮಾಡುವವರು.

* * *

ಮೈಸೂರು ವಿಶ್ವವಿದ್ಯಾನಿಲಯಕ್ಕೆ ಉಪಕುಲಪತಿಯನ್ನು ಆಯ್ಕೆಮಾಡುವ ಪ್ರಸಂಗದಲ್ಲಿ ಕುಲಾಧಿಪತಿಯಾದ ರಾಜ್ಯಪಾಲರು ಇತ್ತೀಚೆಗೆ ಒಂದು ವಿಕಟರೂಪದ ವಿಕ್ರಮವನ್ನು ಸ್ಥಾಪಿಸಿದರು. ಅದು ವಿಶ್ವವಿದ್ಯಾನಿಲಯಗಳ ಶಾಸನೋಕ್ತ ವಿಧಿಗಳನ್ನು ಸಂಪೂರ್ಣವಾಗಿ ಧಿಕ್ಕರಿಸುವಂಥದು. ಆಯ್ಕೆ ಸಮಿತಿಯು ಹೆಸರಿಸಿದ್ದ ಮೂವರು ವ್ಯಕ್ತಿಗಳ ''ಸಂದರ್ಶನ'' ನಡೆಸಿ ತೀರ್ಮಾನ ಕೈಗೊಳ್ಳುವ ಅವರ ವಿಧಾನಕ್ಕೆ ವಿವಿಧಾರ್ಥಗಳ ಕಲ್ಪನೆ ಸಾಧ್ಯವಿದೆ. ಅದೇನು ಪ್ರಶ್ನೆಗಳನ್ನು ಕೇಳಿ ''ಅಭ್ಯರ್ಥಿ''ಗಳ ಮಾಪನ ಮಾಡಲು ರಾಜ್ಯಪಾಲರು ಯತ್ನಿಸಿದರೆಂಬುದು ತಿಳಿದಿಲ್ಲ, ತಿಳಿಯಲೂ ಬೇಕಾಗಿಲ್ಲ. ಆದರೆ ಕುತೂಹಲದ ವಿಷಯವೇನೆಂದರೆ ಅವರ ಪ್ರಶ್ನೆಗಳಲ್ಲಿ ''ಉಪ ಕುಲಪತಿಯಾಗಿ ನೇಮಕವಾಗಲು ನೀವೆಷ್ಟು ನೀಡುತ್ತೀರಿ'' ಎಂಬುದು ಸೇರಿದ್ದಿತೆ, ಎಂಬುದು. ಆ ಪ್ರಶ್ನೆಯನ್ನು ಬಿಟ್ಟು ಬೇರೇನನ್ನೂ ಕೇಳುವಂತಹ ''ಅಧಿಕೃತ ಸಂದರ್ಶನ'' ನಡೆಸುವ ಹಕ್ಕು ರಾಜ್ಯಪಾಲರಿಗಿಲ್ಲ. ಶ್ಲಾಘನೀಯ ಸಂಗತಿ ಇದು: ''ಅಭ್ಯರ್ಥಿ''ಗಳ ಪೈಕಿ ಯಾರೂ ''ಸೂಟ್‌ಕೇಸ್'' ಹಿಡಿದು ಸಂದರ್ಶನಕ್ಕೆ ಹೋಗಲಿಲ್ಲ. ಅವರಿಗೆಲ್ಲ ಅಭಿನಂದನೆಗಳು ಸಲ್ಲುತ್ತವೆ. ''ಸಂದರ್ಶನ''ಕ್ಕೆ ಬರುವುದಿಲ್ಲವೆಂದು ಹೇಳಿ ರಾಜ್ಯಪಾಲರಿಗೆ ಕಾನೂನು ವಿಧಾನದ ಪರಿಚಯ ಮಾಡಿಕೊಟ್ಟಿದ್ದಿದ್ದರೆ ಇನ್ನೂ ಹೆಚ್ಚು ಸಮರ್ಪಕವಾಗಿರುತ್ತಿತ್ತು. ಅಂತೂ ಇಂತೂ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಉಪಕುಲಪತಿ ಇನ್ನೂ ದೊರೆತಿಲ್ಲ. ಅವರಿಲ್ಲದಿದ್ದರೂ ಉರುಳುವ ಚಕ್ರ ಉರುಳುತ್ತಿರುತ್ತದೆಂದು ಪ್ರಮಾಣೀಕರಿಸಲು ರಾಜ್ಯಪಾಲರು ಸಿದ್ಧತೆ ನಡೆಸಿದ್ದಾರೆನ್ನೋಣವೆ ?

* * *

ಪ್ರತಿ ತಿಂಗಳಿನಂತೆ ಈ ತಿಂಗಳು ಸಹ ಪತ್ರಿಕೆಯಲ್ಲಿ ಹಲವು ವಿಷಯಗಳನ್ನು ಪ್ರಸ್ತಾಪಿಸುವ ಲೇಖನಗಳಿವೆ. ಅವಕ್ಕೆ ಓದುಗರ ಪ್ರತಿಕ್ರಿಯೆಗಳನ್ನು ಸ್ವಾಗತಿಸುತ್ತೇವೆ. ಅಭಿಪ್ರಾಯಗಳು ಹಾಗೂ ವಿಮರ್ಶೆ ಸಂಕ್ಷಿಪ್ತವಾಗಿರಬೇಕೆಂದು ಬಯಸುತ್ತೇವೆ.



# ವಾತ್ಸಲ್ಯಪಥದಲ್ಲಿ ಬಂಡಾಯದ ಹೆಜ್ಜೆ ಗುರುತು



ಇತ್ತೀಚೆಗೆ ಸುಂದರ ಪ್ರಕಾಶನದಿಂದ ಬಂದ 'ಮುಂಬಯಿಯ ನಂಟು ಮತ್ತು ಕನ್ನಡ' ಕೃತಿಯಲ್ಲಿ ಬಲ್ಲಾಳರ ಕನ್ನಡ ಭಾಷೆಯ ಬೆಳವಣಿಗೆ ಕುರಿತ ಚಿಂತನೆಗಳಿವೆ. ಚರ್ಚಿಸಲು ಯೋಗ್ಯವಾದ ಚಿಂತನೆಗಳವು. 'ಮುಂಬಯಿ ದಿನಾಂಕ' ಕೂಡ ಅಂಥ ಗಂಭೀರವಾದ ವಿಷಯಗಳಿಂದ ಕೂಡಿದ ಕೃತಿ.

ಬಲ್ಲಾಳರ ಎಲ್ಲ ಬರಹಗಳ ಬಗ್ಗೆ ವಿವರವಾಗಿ ಚರ್ಚಿಸಲು ಇಲ್ಲಿ ಆಗದಿದ್ದರೂ ಅವರ ತಾತ್ತ್ವಿಕ ತಳಹದಿ, ವಾಸ್ತವದ ಹುಡುಕಾಟ, ಅನುಭವ ಸತ್ಯಗಳ ಹಾದಿಯನ್ನು ಕಂಡರಿಸಲು ಪ್ರಯತ್ನಿಸಿದ್ದೇನೆ. ಅವರಿಗೆ ಇದು, ನಮ್ಮ ಪುಟ್ಟ ಗೌರವ; ನಮನ.

– ವಿಜಯಾ

'ಈಚೆಗೆ ನೋಡಲೇ ಇಲ್ಲ, ಮಕ್ಕಳು ಹೇಗಿದ್ದಾರೆ? ಬರಲಿಲ್ಲವೆ?' ಎಂದು ಒಬ್ಬೊಬ್ಬರಾಗಿ ಎಲ್ಲರ ಹೆಸರನ್ನೂ ಹೇಳಿ ವಿಚಾರಿಸಿಕೊಂಡಾಗ ಇನ್ನೂ ಅವರ ಮೂಗಿಗೆ ಶುದ್ಧ ಗಾಳಿಯ ನಳಿಕೆ ತಗುಲಿಕೊಂಡೇ ಇತ್ತು. ಪ್ಲಾಸ್ಟಿಕ್ ಕವಚದಿಂದ ಮುಚ್ಚಿದ್ದ ಬಾಯಿಯಿಂದ ಹೊರಡುವ ಮಾತುಗಳು ಸ್ಪಷ್ಟವಾಗಿ ಕೇಳಿಸುತ್ತಿರಲಿಲ್ಲ. ''ಕಾದಂಬರಿಯ ಬರವಣಿಗೆ ಅರ್ಧಕ್ಕೆ ನಿಂತಿದೆ'' ಎಂದು ಹೇಳುವಾಗ ಅವರ ಕಣ್ಣಾಲಿ ತುಂಬಿ ಹೊರಕ್ಕೂ ತುಳುಕಿದ ಕಣ್ಣೀರನ್ನು ನಿಧಾನವಾಗಿ ಒರೆಸುತ್ತ ''ಮನೆಗೆ ಬಂದ ಮೇಲೆ ಮುಂದುವರಿಸಿದರಾಯಿತು ಬಿಡಿ'' ಅಂದಿದ್ದೆ. ಭಾರತಿ ನರ್ಸಿಂಗ್ ಹೋಂನಿಂದ ಮನೆಗೆ ಬಂದರು.

''ಪರಿಪೂರ್ಣತೆ ಜಗತ್ತಿನಲ್ಲಿ ವ್ಯಕ್ತಿಗೆ ನಿಲುಕದ ವಸ್ತುವೆಂದಾದ ಮೇಲೆ, ಭಾವಜೀವಿಯ ಕನಸು ನನಸಾಗಲಾರದೆಂದಾದ ಮೇಲೆ ಆತ ಶೂನ್ಯವಾದದಿಂದ ಮರಣವನ್ನು ಸ್ವಾಗತಿಸುವುದರಲ್ಲಿ ಗಾಂಭೀರ್ಯ ತುಂಬಿದ ಸ್ನಿಗ್ಧತೆಯಿದೆ... ಮರಣವನ್ನು ಸ್ವಾಗತಿಸಲು ಸಿದ್ಧವಾಗಿರುವ ವ್ಯಕ್ತಿಯ ಆಶಾವಾದಕ್ಕೆ ಚ್ಯುತಿಯಿಲ್ಲವೋ ಏನೊ, ಆದರೆ ಮರಣಕ್ಕಂಜುವ ವ್ಯಕ್ತಿಯ ಆಶಾವಾದಕ್ಕೆ ಚ್ಯುತಿಯಿದೆ. ಮರಣವು ಸುಂದರವೆ? ಜೀವನವು ಸುಂದರವೆ? ಪ್ರಶ್ನೆಯಲ್ಲೇ ಉತ್ತರಗಳಿವೆ. ಮರಣದಲ್ಲಿಯೂ ಚೇತನವಿದೆ. ಚೇತನವೇ ಸೌಂದರ್ಯ. ಸೀಮಾತೀತವಾದ ಸರ್ವವ್ಯಾಪಕ ಶಕ್ತಿ ಚೇತನ'' ಎಂದು ವ್ಯಾಖ್ಯಾನಿಸಿಕೊಳ್ಳುತ್ತಲೇ ಎದ್ದು ಹೋದ ಆ ಹಿರಿಯ ಚೇತನ ಹೋದದ್ದಾದರೂ ಎಲ್ಲಿಗೆ?

ಬಲ್ಲಾಳರದು ಮಗುವಿನ ಮನಸ್ಸು ಎನ್ನುತ್ತಾರೆ ಕವಿ ಸುಮತೀಂದ್ರ ನಾಡಿಗರು. ಆ ಮಗುತನದ ಹಿಂದಿನ ದರ್ಶನವನ್ನು ಕಂಡರಿಸುವ ಪ್ರಯತ್ನ ಮಾಡುತ್ತಾರೆ. ನಿಜ, ಬಲ್ಲಾಳರೊಳಗಿದ್ದ ಮಗು ಹಟಮಾಡುತ್ತಿತ್ತು, ಸಿಟ್ಟಾಗುತ್ತಿತ್ತು. ಅನ್ಯಾಯ, ಶೋಷಣೆ, ಅಸಮಾನತೆ, ಎಲ್ಲರಿಗೂ ಶಿಕ್ಷಣ ಕೊಡಲಾಗದ ವ್ಯವಸ್ಥೆಯ ಬಗ್ಗೆ ಅದು ವ್ಯಗ್ರವಾಗುತ್ತಿತ್ತು. ಈ ಹಾದಿಯಲ್ಲಿ ದರ್ಶನಕ್ಕೆ ಹಾತೊರೆಯುತ್ತಿತ್ತು ಎಂದು ಹತ್ತಿರದಿಂದ ಬಲ್ಲ ಯಾರಿಗೂ ತಿಳಿಯುತ್ತಿತ್ತು. ಅಲ್ಲೊಂದು ಹೆಂಗರುಳಿತ್ತು. ಅದು ಸ್ತ್ರೀಯರ, ಬಡಜನರ ಬಗ್ಗೆ ತುಡಿಯುತ್ತ ಸಮಸಮಾಜ ನಿರ್ಮಾಣಕ್ಕಾಗಿ ಗಾಂಧಿ, ರಾಯ್, ಲೋಹಿಯಾ ಮೊದಲಾದವರ ತತ್ತ್ವಗಳಲ್ಲಿ ಬೆಳಕು ಸಿಕ್ಕೀತೇ ಎಂದು ಹುಡುಕುತ್ತಲೇ ಇತ್ತು. ತನ್ನೆಲ್ಲ ಅಭಿವ್ಯಕ್ತಿಯಲ್ಲೂ ಈ ಕುರಿತು ಜಿಜ್ಞಾಸೆ ನಡೆಸಿತ್ತು. ಆ ದಿವ್ಯ ದರ್ಶನಕ್ಕಾಗಿ ಕಾತರದಿಂದ ಕಾಯುತ್ತಲೆ ಇದ್ದ ಚೇತನವದು.

* * *

''...ಸ್ವಭಾವ ಸಹಜ ಸಂಕೋಚ ಪ್ರವೃತ್ತಿ, ಕೆಳ ಮಧ್ಯಮ ವರ್ಗದ ಬಡತನದ ನಿಷ್ಠುರ ಆರ್ಥಿಕ ಸತ್ಯಗಳು ಉಂಟುಮಾಡಿದ ಒಂದು ರೀತಿಯ ಕೀಳರಿಮೆ, ಕೌಟುಂಬಿಕ ಪರಿಸರದಲ್ಲಿ ಕಾಣುತ್ತಿದ್ದ ತಾರತಮ್ಯಪ್ರವೃತ್ತಿ, ಸಂಪ್ರದಾಯನಿಷ್ಠ ಕೌಟುಂಬಿಕ ಆವರಣದಲ್ಲಿ ಸಾಮಾಜಿಕ ರೂಢಿಯ ಅರ್ಥವಾಗದ ಕೆಲವು ವಿಧಿ ನಿಷೇಧಗಳು...'' ಇವೆಲ್ಲ ನನ್ನನ್ನು ಬಹುಕಾಲ ಕಾಡಿದವು, ನನ್ನ ಪಾತ್ರಗಳಲ್ಲೂ ಇದು ಮುಖ್ಯವಾಗಿ ಕಾಡಿವೆ ಎನ್ನುವ ಬಲ್ಲಾಳರು ಇಂಥದೊಂದು ಹಿನ್ನೆಲೆ ಮತ್ತು ಸಾಮಾನ್ಯ ನೌಕರನಾಗಿ ದುಡಿದು ಕೌಟುಂಬಿಕ ಹಾಗೂ ಸಾಮಾಜಿಕ ಪರಿಸರದಲ್ಲಿ ಬೆಳೆಸಿಕೊಂಡ ಅತೃಪ್ತಿಯ ಕಾರಣದಿಂದಾಗಿ ಮುಂಬಯಿಯಲ್ಲಿ ಹೆಚ್ಚಿನ ಸಂಪಾದನೆಗೆ ದಾರಿಯಾಗುವಂಥ ಕೆಲಸ ಸಿಗಬಹುದೆಂಬ ಆಸೆ ಹಾಗೂ ತಾವು ಇಷ್ಟಪಡುವ ಪತ್ರಿಕೋದ್ಯಮದ ಅಧ್ಯಯನವನ್ನು ಅರಸಿ ಮುಂಬೈಗೆ ವಲಸೆ ಬಂದರು. ಬಲ್ಲಾಳರು ''...ಸಮ್ಮಿಶ್ರ ಜನಜೀವನದ ಮುಂಬಯಿ ಮಹಾನಗರ ನನ್ನೊಳಗೆ ಇದ್ದ ಪರಕೀಯತೆಯ ನೋವನ್ನು ಅಳಿಸಲು ಸಾಧನವಾಯಿತು ಹಾಗೂ ನನ್ನ ಸಾಹಿತ್ಯ ಅಭಿವ್ಯಕ್ತಿಯ ತುಡಿತವನ್ನು ಹೆಚ್ಚಿಸಲು ಕಾರಣವಾದ, ಆ ದಿನಗಳಲ್ಲಿಯ ಎಲ್ಲ ಪ್ರಗತಿಶೀಲ ಲೇಖಕರಿಗೂ ಅಲಭ್ಯವಾದ ಪರಿಸರವೊಂದು ನನಗೆ ದಕ್ಕಿತು'' ಎನ್ನುತ್ತಾರೆ.

ಬಲ್ಲಾಳರನ್ನು ಗಾಂಧೀವಾದಿ ಎಂತಲೊ, ಎಡಪಂಥೀಯರೆಂತಲೊ, ಪ್ರಗತಿಶೀಲ ಲೇಖಕರೆಂತಲೊ ಸಲೀಸಾಗಿ ಗುರುತಿಸುವುದರಲ್ಲಿ ಹುರುಳಿಲ್ಲ. ಅವರು ಅದೆಲ್ಲವೂ ಹೌದು; ಆದರೆ ಅಲ್ಲ. ಅವರದು ಯಾವ ಅವಲಂಬನವೂ ಇಲ್ಲದ ಸ್ವತಂತ್ರ ಚಿಂತನೆ, ಅಧ್ಯಯನ ಮತ್ತು ಅನುಭವಗಳ ವಿಸ್ತರಣೆ ಎನ್ನುವುದೇ ಸರಿ. ಬಲ್ಲಾಳರು ಶ್ರಮಿಕ ವರ್ಗದ ಬಗ್ಗೆ, ಸಂಘಟನೆ-ಹೋರಾಟಗಳ ಬಗ್ಗೆ ತಳೆಯುವ ನಿಲುವು ಅವರನ್ನು ಎಡಪಂಥೀಯರೆಂದು ಗುರುತಿಸುವಂತೆ ಮಾಡಿದ್ದರೆ, ಅವರ ಹಲವು ಚಿಂತನೆಗಳು, ಕೃತಿಯಲ್ಲಿ ನಿರ್ಮಾಣಗೊಳ್ಳುವ ವಾತಾವರಣ, ಪಾತ್ರಗಳು, ಸ್ವಾತಂತ್ರ್ಯ ಹೋರಾಟ,

ಡಾ|| ವಿಜಯಾ




*ವಿಶ್ವಕಥಾಕೋಶ ಪುಸ್ತಕ ಅನಾವರಣದಲ್ಲಿ: (ಎ.ಬ.) ನಿರಂಜನ, ನಿಸಾರ್ ಅಹಮದ್, ವ್ಯಾಸರಾಯ ಬಲ್ಲಾಳ. ಹಿಂಬದಿಯಲ್ಲಿ ಆರ್. ಎಸ್. ರಾಜಾರಾಮ್*

ದೇಶವಿಭಜನೆ ಮೊದಲಾದ ಸಂಗತಿಗಳಿಗೆ ಅವರು ಪ್ರತಿಕ್ರಿಯಿಸುವ ರೀತಿ ಅವರನ್ನು ಗಾಂಧೀವಾದಿ ಎಂದು ಗುರುತಿಸುವ ಹಾಗೆ ಮಾಡುತ್ತವೆ. ಕೆಲವೊಮ್ಮೆ ಅವರೂ ಅದನ್ನು ಒಪ್ಪಿದ್ದಾರೆ. ಇನ್ನು ಅವರ ಬರವಣಿಗೆಯ ಕಾಲದಲ್ಲಿ ಅವರ ಜೊತೆಗಿನವರು ಪ್ರಗತಿಶೀಲರಾಗಿದ್ದರು. ಆದರೆ, ''...ಶಿಕ್ಷಣವನ್ನು ಮುಂದುವರಿಸಲಾಗದ ನೋವಿನಲ್ಲಿ ಸಮುದಾಯದ ಕುರಿತ ನನ್ನ ಚಿಂತನೆಯ ಹುಟ್ಟನ್ನು ಗುರುತಿಸಬಹುದೇನೊ. ಸಾಮಾಜಿಕ ಸಮಸ್ಯೆಗಳಿಗೆ ಕಾರಣಗಳನ್ನು ಶೋಧಿಸುವ ಕುತೂಹಲ ಮೂಡಿದ್ದೂ ಇದೇ ಸಂದರ್ಭದಲ್ಲಿ, ಅಧ್ಯಯನದ ಆಸಕ್ತಿ ಹೆಚ್ಚಿದಂತೆಲ್ಲ, ಸ್ವಾತಂತ್ರ್ಯ ಹೋರಾಟದ ನಲವತ್ತರ ದಶಕದ ಆದಿಯಲ್ಲಿ ರಾಷ್ಟ್ರೀಯ ಜಾಗೃತಿಗೂ ಭಾವನಾತ್ಮಕವಾಗಿ ಸ್ಪಂದಿಸತೊಡಗಿದುದರಿಂದ ವ್ಯಕ್ತಿಯ ಅಂತರಂಗದ ಯಾತನೆ ಹಾಗೂ ಸಮುದಾಯದ ಒಳಿತಿಗಾಗಿ ದುಡಿಯಬೇಕು ಎಂಬ ನಿಲುವು ತಳೆದೆನೇನೊ'' ಎಂಬುದೇ ಅವರ ಸ್ವತಂತ್ರ ಚಿಂತನೆಯ ಮೂಲಗಳಾಗುತ್ತವೆ. ''ನಾನು ಸ್ವಾನುಭವಕ್ಕೂ, ನನ್ನ ಸುತ್ತಣ ಪರಿಸರದಲ್ಲಿ ದೊರಕಿಸಿಕೊಂಡ ಅನುಭವಕ್ಕೂ ತುಂಬ ಮಹತ್ವ ಕೊಡುತ್ತೇನೆ. ಯಾವುದೇ ಸೈದ್ಧಾಂತಿಕ ತತ್ತ್ವದ ಅಥವಾ ಸೂತ್ರದ ನೆಲೆಯಲ್ಲಿ ಅನುಭವ ವಿಶ್ಲೇಷಣೆಗೆ ತೊಡಗುವುದಿಲ್ಲ, ಆದರೆ ಬರೀ ಅನುಭವವೇ ಸಾಹಿತ್ಯಸೃಷ್ಟಿಗೆ ನೆರವಾಗುವುದಿಲ್ಲ. ಒಂದು ಅನುಭವ ಸಾರ್ವಕಾಲಿಕ ಹಾಗೂ ಸಾರ್ವತ್ರಿಕವೆನಿಸುವ ಆಯಾಮಗಳು ಬದುಕನ್ನು ಗ್ರಹಿಸುವ ನನ್ನ ಹಾಗೂ ಕೃತಿಯನ್ನು ಓದುವ ಓದುಗರ ವಿವೇಚನಾ ಶಕ್ತಿಯನ್ನು ಹದಗೊಳಿಸುವಂತಿರಬೇಕು...'' ಎಂಬ ಅವರ ನಿಲುವು ಇದನ್ನು ಮತ್ತಷ್ಟು ಸ್ಪಷ್ಟಪಡಿಸುತ್ತದೆ.

ಮುಂಬೈ ವಾಸ್ತವ್ಯದಲ್ಲಿ ಅವರನ್ನು ಕಡೆದು ಶಿಲ್ಪವಾಗಿಸಿದ್ದು 'ನುಡಿ' ಪತ್ರಿಕೆ. ಪತ್ರಿಕೆಯಲ್ಲಿ ಅವರ ಸಂಪಾದಕೀಯ ಬರಹ, ಅಗ್ರ ಲೇಖನಗಳು ವ್ಯವಸ್ಥೆಯನ್ನು ನಡುಗಿಸಿದವು. ಆ ಲೇಖನಗಳಲ್ಲಿದ್ದ ದೂರದೃಷ್ಟಿ ಯಾವುದೇ ವಿಷಯವನ್ನು ಹಲವು ಮಗ್ಗುಲುಗಳಿಂದ ನೋಡಿ ಚರ್ಚಿಸಿ ತೀರ್ಮಾನಕ್ಕೆ ಬರುವ ರೀತಿ ಎಂಥವರ ಗಮನವನ್ನೂ ಸೆಳೆಯುತ್ತಿತ್ತು. ಅದು ವೈಯಕ್ತಿಕವಾಗಿಯೂ ಅವರಿಗೆ ಹೆಚ್ಚಿನದನ್ನು ಕೊಟ್ಟಿತು.

''ಸಮಾಜವಾದಿ ಧೋರಣೆಯ 'ನುಡಿ' ಪತ್ರಿಕೆಯ ಸಂಪಾದಕೀಯ ಹೊಣೆಗಾರಿಕೆ ನನ್ನ ಸಾಹಿತ್ಯಕ ಜೀವನದಲ್ಲಿ ತುಂಬ ಖುಷಿ ಕೊಟ್ಟ ಒಂದು ತಿರುವು. ಆ ದಿನಗಳಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯದ ಪುಳಕವನ್ನನುಭವಿಸಿದೆ. ಎಲ್ಲ ಸಮಸ್ಯೆಗಳ ವಿಶ್ಲೇಷಣೆಗೆ ವೈಚಾರಿಕ ವಸ್ತುನಿಷ್ಠತೆ ಅಗತ್ಯವೆಂಬ ತಿಳಿವಳಿಕೆ, ಬರವಣಿಗೆಯ ಶಿಸ್ತನ್ನು ರೂಢಿಸಿಕೊಂಡದ್ದು ಇಲ್ಲಿ. ಅದು ಸ್ವಾತಂತ್ರ್ಯದ ಆದರ್ಶವನ್ನು ಮುಂದಿಟ್ಟುಕೊಂಡು ನಮ್ಮ ಎಲ್ಲ ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರ ಇಲ್ಲಿದೆ ಎಂಬ ಭ್ರಮೆ ಕಟ್ಟಿಕೊಂಡ ಕಾಲ... ಸೃಜನಶೀಲ ಸಾಹಿತ್ಯಕ ಅಭಿವ್ಯಕ್ತಿಗಾಗಿ ದುಡಿಯಬೇಕೆಂಬ ಆತ್ಮವಿಶ್ವಾಸ, ಉತ್ಸಾಹ ಮೂಡಿಸಿತು ಮತ್ತು ಮುಂದಿನ ಬರವಣಿಗೆಯ ರೀತಿಯನ್ನು ನಾನು ಸಂಪಾದಿಸಿದ ಅನುಭವಗಳಿಗೆ ಹೊಂದಿಸಲು 'ನುಡಿ'ಯು ನೆರವಾಯಿತು'' ಎನ್ನುತ್ತಾರೆ.

ಬಲ್ಲಾಳರು ಕತೆ, ಕಾದಂಬರಿಗಳನ್ನು, ವೈಚಾರಿಕ ಲೇಖನಗಳನ್ನು ಪ್ರವಾಸ ಸಾಹಿತ್ಯವೇ ಮೊದಲಾದ ಇತರ ಕೃತಿಗಳನ್ನು ರಚಿಸಿದ್ದಾರೆ. ಕನ್ನಡಕ್ಕಾಗಿ ಅವರು ಮಾಡಿರುವ ಕೆಲಸಗಳು ಅನನ್ಯ. ಮುಂಬೈನಲ್ಲಿದ್ದುಕೊಂಡು ರಾತ್ರಿಶಾಲೆಗಳ ಮೂಲಕ ಎಲ್ಲ ವರ್ಗದವರಿಗೂ ಶಿಕ್ಷಣ ನೀಡುವ ಕಾರ್ಯದಲ್ಲಿ ಅವರ ಪಾತ್ರ ಹಿರಿದು. ಅವರ ಮುಖ್ಯ ಗುರಿ ಸಾಮಾಜಿಕ ವಿಷಮತೆ ಅಳಿಯ ಬೇಕು ಎಂಬುದರತ್ತ. ಸಂಗ್ರಹ ಪ್ರವೃತ್ತಿ, ಸ್ವಾರ್ಥಗಳು ಈ ಸಾಮಾಜಿಕ ವಿಷಮತೆಯನ್ನು ಪೋಷಿಸುತ್ತವೆ ಮತ್ತು ತ್ಯಾಗ, ಸ್ನೇಹ, ಸಹಕಾರಗಳಿಗೆ ಹೆಚ್ಚು ಮಹತ್ವ ಕೊಡುವ ಪ್ರವೃತ್ತಿ ಬೆಳೆದಾಗಲೇ ಸಾಮುದಾಯಿಕ ಚಿಂತನೆ ಬೆಳೆಯುತ್ತದೆಯೆಂದೂ ಮುಖ್ಯವಾಗಿ ಶಿಕ್ಷಣವು ಸಾರ್ವತ್ರಿಕವಾಗಿಲ್ಲದ ಪ್ರಜಾಪ್ರಭುತ್ವದ ಈ ಸಾಮಾಜಿಕ ವ್ಯವಸ್ಥೆಗೆ ಸಮತಾವಾದವನ್ನು ಹೊಂದಿಸುವುದು ಕಷ್ಟದ ಕೆಲಸ ಎಂಬುದೂ ಅವರಿಗೆ ಚೆನ್ನಾಗಿ ತಿಳಿದಿತ್ತು.

ಭಾಷಾವಾರು ಪ್ರಾಂತ್ಯಗಳ ರಚನೆಯ ಬಗ್ಗೆ ಅವರ ಮುನ್ನೋಟಗಳು, ನಗರಕ್ಕೆ ವಲಸೆ ಬರುವ, ಹೋಗುವ ಜನರ ಬಗ್ಗೆ ಅವರ ಕಳಕಳಿ ಮತ್ತು ಕಾರ್ಯಕಾರಣ ಸಂಬಂಧದ ತರ್ಕ ಹಾಗೂ ಅನ್ನ, ಬಟ್ಟೆ, ಶಿಕ್ಷಣ, ವಿಚಾರ ಸ್ವಾತಂತ್ರ್ಯ, ಅನ್ಯಾಯ, ಶೋಷಣೆ ತೊಲಗಬೇಕು, ಭಾರತ ಬಲಿಷ್ಠ ವಾಗಬೇಕು ಎಂಬ ಅವರ ನಿಲುವು 'ನುಡಿ'ಯ ಮೂಲಕ ವಿಚಾರವಂತರನ್ನು ತಲುಪಿದವು. ಮುಂಬಯಿಯ ಆಕಾಶ ವಾಣಿಯಲ್ಲಿ ಕನ್ನಡ ಕಾರ್ಯಕ್ರಮ ನಿಲ್ಲಿಸುವ ಯೋಜನೆ ಬಂದಾಗ ಬಲ್ಲಾಳರು ಉಗ್ರವಾಗಿ ಟೀಕಿಸಿ ಬರೆದ ಅಗ್ರ ಲೇಖನ ಸರ್ಕಾರವನ್ನು ಮತ್ತೆಂದೂ ಅಂಥ ಯೋಜನೆ ಮಾಡಲಾರದಷ್ಟು ಅಲುಗಾಡಿಸಿತ್ತೆಂದೂ, ಕರ್ನಾಟಕ ಏಕೀಕರಣದ ಹೋರಾಟದ ಮುಂಚೂಣಿಯಲ್ಲಿದ್ದ ದಿವಾಕರರು ಕೇಂದ್ರ ಮಂತ್ರಿಗಳಾದಾಗ ಅಧಿಕಾರ ಅವರ ಹೋರಾಡುವ ಶಕ್ತಿಯನ್ನು ಕುಂದಿಸುತ್ತದೆಂಬ ವಿಚಾರದಿಂದ 'ಕೇಂದ್ರದ ಅಧಿಕಾರಕ್ಕೆ ಕರ್ನಾಟಕ ಏಕೀಕರಣದ ಬಲಿದಾನ' ಎಂಬ ಶೀರ್ಷಿಕೆಯಡಿ ಲೇಖನ ಬರೆದದ್ದು ಹೀಗೆ ಹತ್ತಾರು ಪ್ರಸಂಗಗಳನ್ನು ಅವರ ಒಡನಾಡಿ ಶ್ರೀನಿವಾಸ ಹಾವನೂರರು ಇಂದಿಗೂ ನೆನಪು ಮಾಡಿಕೊಳ್ಳುತ್ತಾರೆ. ಅನ್ಯಾಯದ ವಿರುದ್ಧ ದನಿ ಎತ್ತುವಾಗೆಲ್ಲ ಬಲ್ಲಾಳರ ಸೌಮ್ಯ ಮುಖ ಸರಿದು ಅವರ ವ್ಯಗ್ರಚಿತ್ತವೇ ಕಾಣುತ್ತಿತ್ತೆಂದು ಬಲ್ಲವರು ಹೇಳುತ್ತಾರೆ. ಈಚೆಗೆ ಕನ್ನಡ ಭಾಷೆಯ ಬಗ್ಗೆ, ಕೋಮುಗಲಭೆಗಳಲ್ಲಾಗುವ ಹಿಂಸಾಚಾರಗಳ ಬಗ್ಗೆ, ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆಯಾಗುವುದರ ಬಗ್ಗೆ ಅವರು ಸಿಡಿದೇಳುತ್ತಿದ್ದುದನ್ನು ಪ್ರತ್ಯಕ್ಷ ಕಂಡಿದ್ದೇವೆ.

ಬಲ್ಲಾಳರ ನೇರ ಮಾತುಗಳಿಗೆ ಅವರ ವೈಚಾರಿಕ ಬರಹಗಳನ್ನು ನೋಡಬೇಕು. ಅವರ 'ಕಟ್ಟುವೆವು ನಾವು' ಕೃತಿಯ ಲೇಖನಗಳಲ್ಲಿ ಅವರ ದೇಶಪ್ರೇಮ, ಗಾಂಧಿಯ ಆದರ್ಶಗಳನ್ನು ಕುರಿತ ಸೂಕ್ಷ್ಮ ವಿಶ್ಲೇಷಣೆಗಳನ್ನು ಕಾಣುತ್ತೇವೆ. ಮುಖ್ಯವಾಗಿ ದೇಶ ವಿಭಜನೆಯಿಂದಾಗಿ ಫೆಡರಲ್ ಕಲ್ಪನೆಗೆ ಒದಗಿದ ಅಪಾಯಗಳನ್ನು ಕುರಿತ ಗಂಭೀರವಾದ ಚಿಂತನೆಗಳಿವೆ. ಯಾವ ಮುಲಾಜೂ ಇಲ್ಲದೆ ಪಾಕಿಸ್ತಾನದ ಜಾತಿವಾದಿ ನೀತಿಗಳನ್ನು ಟೀಕಿಸುತ್ತಾರೆ. ೧೯೯೨-೯೩ರಲ್ಲಿ ಮುಂಬಯಿಯಲ್ಲಿ ಜಾತೀಯ ಹತ್ಯಾಕಾಂಡದ ದೃಶ್ಯ ಕಂಡಾಗ ವ್ಯಗ್ರಗೊಂಡ ಮನಸ್ಸು ಬರೆದ ಲೇಖನ 'ಬೆಂಕಿ ಬಿದ್ದಿದೆ ಮನೆಗೆ', ಅದು ಮುಂಬಯಿನಲ್ಲಿದ್ದು ಬರೆದ ಕೊನೆಯ ನೋವಿನ ಲೇಖನ ಕೂಡ. ಒಗ್ಗಟ್ಟಿನಿಂದಿದ್ದ ಜನ ಪೊಳ್ಳು ಕಾರಣಗಳನ್ನು ಹುಡುಕಿಕೊಂಡು ಬೇರೆಯಾಗುತ್ತ ದ್ವೀಪವಾಗಿ ಬದುಕಲು ನಿರ್ಧರಿಸುವ ಬಗ್ಗೆ ಅವರಿಗೆ ವಿಷಾದವಿದೆ. ಇದು ಮನುಷ್ಯನಲ್ಲಿ ದುರಾಸೆ, ಅಸಹನೆ ಹುಟ್ಟಿಸಿ ಹಿಂಸೆಗೆ ಪ್ರೇರಿಸುತ್ತದೆಯೆಂಬ ಆತಂಕ ತುಂಬಿದ ಧ್ವನಿಯದು.

ಅವರ 'ಸ್ವಾತಂತ್ರ್ಯಕ್ಕೆ ೫೦ ವರ್ಷ' ಕೃತಿಯಲ್ಲೂ ಭಾರತೀಯರ ರಾಷ್ಟ್ರನಿಷ್ಠೆಯ ಬಗ್ಗೆ ಚಿಕಿತ್ಸಕ ನೋಟವಿದೆ. ಪ್ರಗತಿಯನ್ನು ಅಳೆಯಲು ಕಾಯಕನಿಷ್ಠೆ ಮುಖ್ಯ ಎಂದು ಗುರುತಿಸುತ್ತ ನಾಗರಿಕ ಪ್ರಜ್ಞೆ, ಸಾಮಾಜಿಕ ನ್ಯಾಯ, ತುರ್ತು ಪರಿಸ್ಥಿತಿಯ ಅನಂತರದ ಸ್ಥಿತಿಗತಿಗಳು, ಭ್ರಷ್ಟ ವ್ಯವಸ್ಥೆ ಕುರಿತು ಮಾತನಾಡುತ್ತಾರೆ. ಮುಖ್ಯವಾಗಿ ಸ್ವಾತಂತ್ರ್ಯೋತ್ತರ ಭಾರತದ ವಸ್ತುಸ್ಥಿತಿ, ಸಾಮಾಜಿಕ ಸ್ಥಿತ್ಯಂತರಗಳು, ಸಾಮಾನ್ಯ ಮನುಷ್ಯನ ಜೀವನಕ್ರಮದಲ್ಲಾಗುತ್ತಿರುವ ಪಲ್ಲಟಗಳ ಬಗ್ಗೆ ಸೂಕ್ಷ್ಮಾವಲೋಕನವಿದೆ.

ಅವರನ್ನು ಸದಾ ಭಾರತೀಯತ್ವದ ಪರಿಕಲ್ಪನೆ ಕಾಡುತ್ತಿತ್ತು. ಯಾವುದು ಭಾರತೀಯತೆ? ನಾವೆಷ್ಟು ಭಾರತೀಯರು

# ಬಲ್ಲಾಳರೊಂದಿಗೆ ಆತ್ಮೀಯ ಕ್ಷಣಗಳು

ವ್ಯಾಸರಾಯ ಬಲ್ಲಾಳರೊಂದಿಗಿನ ಒಡನಾಟ ೩೦ ವರ್ಷಗಳಿಗೂ ಹಿಂದಿನದು; ಅವರ ಕತೆ-ಕಾದಂಬರಿಗಳ ಓದಿನ ಒಡನಾಟ ಅದಕ್ಕೂ ಹಿಂದಿನದು.

ಬಲ್ಲಾಳರ ವ್ಯಕ್ತಿತ್ವ-ಸಾಧನೆ ಕುರಿತಂತೆ ಹೆಚ್ಚಿನ ಮಾಹಿತಿ ನನಗೆ ತಿಳಿದದ್ದು ರಚನಾ ಜಾಹಿರಾತು ಸಂಸ್ಥೆಯ ಸಿ. ಆರ್. ರಾವ್ ಅವರಿಂದ. ರಾವ್ ಅವರೂ ಮುಂಬಯಿಯಲ್ಲಿ ಇದ್ದವರು. ಬಲ್ಲಾಳರು, ಹಾವನೂರರು, ಎಂ. ವಿ. ಕಾಮತರಾದಿಯಾಗಿ ಹಲವರೊಂದಿಗೆ ನಿಕಟ ಸಂಪರ್ಕ ಇದ್ದವರು. ಹೀಗಾಗಿ ಬಲ್ಲಾಳರ ಕಾದಂಬರಿಯ ಪಾತ್ರ-ಸನ್ನಿವೇಶಗಳನ್ನು ಯಾವುದಕ್ಕೆ , ಯಾರು ಪ್ರೇರಣೆಯವರೆಗೆ ಎಲ್ಲವನ್ನು ವಿವರಿಸಬಲ್ಲವರಾಗಿದ್ದರು. ಗಾಂಧಿ ತತ್ತ್ವಗಳಲ್ಲಿ ಒಲವು, ಎಂ. ಎನ್. ರಾಯ್ ಅವರ ಚಿಂತನೆಗಳಲ್ಲಿ ಆಸಕ್ತಿ , ಎಡಪಂಥೀಯ ನಿಲುವುಗಳು ಈ ಎಲ್ಲದರ ಮಿಶ್ರಣವಾಗಿತ್ತು ಈ ಗೆಳೆಯರ ಗುಂಪು. ಇವರೆಲ್ಲರನ್ನೂ ಮುಂಬಯಿ ವಾತಾವರಣ, ಸಾಹಿತ್ಯ, ಕನ್ನಡಪ್ರೀತಿ ಹಾಗೂ 'ನುಡಿ' ಪತ್ರಿಕೆಗಳು ಬೆಸೆದಿದ್ದವು.

ಬಲ್ಲಾಳರೊಂದಿಗೆ ನಾನು ಪತ್ರಕರ್ತೆಯಾಗಿ ಸಂಪರ್ಕವಿರಿಸಿಕೊಂಡಿದ್ದುದರ ಆಚೆಗೆ ಸಿ. ಆರ್. ರಾವ್ ಅವರಿಂದಾಗಿ ಅವರ ಕಾದಂಬರಿಯ ಪಾತ್ರಗಳ ಜೊತೆಗೂ ಗುರುತಿಸಿಕೊಳ್ಳುತ್ತ ಹೋದೆ. ಸಿ.ಆರ್. ರಾವ್ ಅವರು 'ಬಂಡಾಯ' ಕಾದಂಬರಿಯ ಯಾಮಿನಿಯ ಪಾತ್ರದ ಹಲವು ಭಾಗಗಳನ್ನು ಗುರುತುಹಾಕಿ ನನ್ನ ಜೊತೆ ಚರ್ಚಿಸುತ್ತಿದ್ದರು. ಪಾತ್ರದ ಕೆಲವು ತಾತ್ವಿಕ ಹಾಗೂ ಬಾಹ್ಯ ವಿವರಗಳೊಂದಿಗೆ ನನ್ನನ್ನು ಸಮೀಕರಿಸಿದ್ದೂ ಉಂಟು. 'ಹೇಮಂತಗಾನ', 'ಉತ್ತರಾಯಣ'ಗಳ ಮುಂದುವರಿದ ಭಾಗವಾಗಿ ಕಂಡ 'ಬಂಡಾಯ' ನಮ್ಮ ಆಸಕ್ತಿಯನ್ನು ಹೆಚ್ಚಿಸಿತ್ತು.

ಇದೇ ಹಂತದಲ್ಲಿ ಸಾಹಿತಿ ನಿರಂಜನರು ಬಲ್ಲಾಳರಿಗೊಂದು ಸನ್ಮಾನಮಾಡುವ ಯೋಜನೆ ಮುಂದಿಟ್ಟು, ಅದರ ಹೊಣೆ ನನಗೆ ವಹಿಸಿದರು. ನನ್ನ 'ಸ್ನೇಹ ವಲಯ' ಇಂಥ ಹಲವು ಕಾರ್ಯಗಳನ್ನು ಮಾಡುತ್ತ ಬಂದಿತ್ತು . ನಾನು ಚಿ. ಶ್ರೀನಿವಾಸರಾಜು ಅವರ ಜೊತೆಗೂಡಿ ಈ ಸಮಾರಂಭ ಹಮ್ಮಿಕೊಂಡೆ, ಅದು ೧೯೮೬ರಲ್ಲಿ, ಹನುಮಂತ ನಗರದ ಕಲಾಮಂದಿರದಲ್ಲಿ ನಡೆದ ಆ ಸಮಾರಂಭಕ್ಕೆ 'ಬಂಡಾಯ' ಕುರಿತು ಮಾತನಾಡಬೇಕಿದ್ದ ಇಂದೂಧರ ಹೊನ್ನಾಪುರ ಅವರೇ ಬರಲಿಲ್ಲ, ನಮ್ಮ ಉದ್ದೇಶ ವಿಫಲವಾಯಿತು. ಆದರೆ ಆ ಗೋಷ್ಠಿಗಳಲ್ಲಿ ಡಿ. ಆರ್. ನಾಗರಾಜ್, ಕಿ. ರಂ. ನಾಗರಾಜ, ಎಚ್. ಎಸ್. ರಾಘವೇಂದ್ರರಾವ್, ಎಚ್. ಎಸ್. ವೆಂಕಟೇಶಮೂರ್ತಿ, ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ, ಎಂ. ಎನ್. ವ್ಯಾಸರಾವ್, ಕ. ವೆಂ. ರಾಜಗೋಪಾಲ್ ಮೊದಲಾದವರಲ್ಲದೆ ಮುಂಬೈ, ಉಡುಪಿ, ಮಂಗಳೂರುಗಳಿಂದ 'ನುಡಿ' ಸಂಪಾದಕರಾಗಿದ್ದವರೂ ಸೇರಿದಂತೆ ವಿಖ್ಯಾತ ಲೇಖಕರು ಹಲವರು ಬಂದಿದ್ದರು. ಕಾರ್ಯಕ್ರಮದ ಉದ್ದಕ್ಕೂ ನಿರಂಜನ, ಹಂಪ ನಾಗರಾಜಯ್ಯ, ಅನುಪಮಾ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಜಿ. ವೆಂಕಟಸುಬ್ಬಯ್ಯನವರು, ಜಿ. ವಿ. ಅಯ್ಯರ್ ಮೊದಲಾದವರಿದ್ದು ನಡೆಸಿಕೊಟ್ಟಿದ್ದರು. ಬಿ. ಸುರೇಶ್ ಬಲ್ಲಾಳರ 'ಕಾಡು ಮಲ್ಲಿಗೆ' ಕತೆ ಆಧರಿಸಿ ನಾಟಕವನ್ನು ಆಡಿಸಿದ್ದರು. ಮುಂದೆ ಅದನ್ನು ದೂರದರ್ಶನದಲ್ಲಿ 'ಟೆಲಿಪ್ಲೇ' ಮಾಡಿ ಪದೇ ಪದೇ ಪ್ರದರ್ಶಿತವಾಗಿದ್ದು ವಿಶೇಷ. ಬಲ್ಲಾಳರಿಗೆ ಆ ಟೆಲಿಪ್ಲೇ ತುಂಬ ಇಷ್ಟವಾಗಿತ್ತು. ಪತ್ರ ಮುಖೇನ ಬಲ್ಲಾಳರು ಮುಂಬೈನಲ್ಲಿದ್ದರೂ ಬೆಂಗಳೂರಿನಲ್ಲಿದ್ದಷ್ಟೇ ಹತ್ತಿರವಾದರು. ಮುಂಬೈ ಕನ್ನಡ ಸಂಘದ ಸಭೆಗೂ ಆಹ್ವಾನಿತಳಾಗಿದ್ದು ಬಲ್ಲಾಳರ ಆತಿಥ್ಯ ಸ್ವೀಕರಿಸಿದ್ದೆ.

ಸ್ನೇಹಿತರ ಬಗ್ಗೆ, ಕಿರಿಯ ಬರಹಗಾರರ ಬಗ್ಗೆ ಬಲ್ಲಾಳರದು ಅಮಿತಪ್ರೀತಿ. ಮುಂಬೈನ ಬರಹಗಾರರಿಗೆಲ್ಲ ಅವರು ಮುದ್ದಿನ ಮಗು, ಹಿರಿಯಣ್ಣ, ಗೆಳೆಯ. ವ್ಯಾಸರಾಯ ನಿಂಜೂರರ ಕಾದಂಬರಿ 'ಚಾಮುಂಡೇಶ್ವರಿ ಭವನ' ನಾನೇ ಪ್ರಕಟಿಸಬೇಕೆಂದರು. ಅದು ಪ್ರಕಟವಾದಾಗ ಹಿಗ್ಗಿದ್ದರು. ಬರಹಗಾರ್ತಿ ಮಿತ್ರಾ ವೆಂಕಟ್ರಾಜರ ಬಗ್ಗೆ ಅಭಿಮಾನ. ಬಿ. ಎ. ಸನದಿ, ಮಣಿಮಾಲಿನಿ, ಗಿರಿಜಾಶಾಸ್ತ್ರಿ, ಸುವರ್ಣರು, ಜಯಂತ ಕಾಯ್ಕಿಣಿ, ಉಮಾರಾವ್ ಹೀಗೆ ಅವರು ಪ್ರೀತಿಸುತ್ತಿದ್ದ ಬಳಗ ದೊಡ್ಡದು.

ಮುಂದೆ ಕೆಲವೇ ದಿನಗಳಲ್ಲಿ ಬಲ್ಲಾಳರು ಅಸ್ವಸ್ಥರಾದರು. ನಿರಂಜನರು - ನಾನೂ ಕೆಲವು ಮಿತ್ರರೂ ಅಂದಿನ ಮುಖ್ಯಮಂತ್ರಿಗಳಾಗಿದ್ದ ರಾಮಕೃಷ್ಣ ಹೆಗಡೆ ಅವರಿಗೆ ಪತ್ರ ಬರೆದೆವು. ಅವರು ಕೂಡಲೇ ಬಲ್ಲಾಳರ ಶಸ್ತ್ರಕ್ರಿಯೆಗೆ ಕೊಂಚ ಧನಸಹಾಯ ಮಾಡಿದ್ದೂ ಉಂಟು. ಆ ಸಹಾಯದಿಂದ ಆರ್ಥಿಕ ಸಂಗತಿಗಿಂತ ಕರ್ನಾಟಕ ನನ್ನನ್ನು ಪ್ರೀತಿಸುತ್ತದೆ ಎಂಬ ಭಾವನೆ ಅವರಲ್ಲಿ ಮೂಡಲು ಕಾರಣವಾಗಿತ್ತು.



ಬೆಂಗಳೂರಿಗೆ ಬಲ್ಲಾಳರ ಸ್ವಾಗತ

ಬಲ್ಲಾಳರು ಬೆಂಗಳೂರಿಗೆ ಬರಲು ನಿರ್ಧರಿಸಿದಾಗ 'ಬೇಡ' ಎಂದಿದ್ದೆ. ಬೆಂಗಳೂರು ಸ್ನೇಹಿತರನ್ನು ಭೇಟಿಯಾಗಲೂ ನೆರವಾಗುವುದಿಲ್ಲ ಎಂಬುದು ನನ್ನ ನಂಬಿಕೆ. ಬಲ್ಲಾಳರು ಹುಸಿಮುನಿಸು ತೋರಿದರು. ಅವರು ಮನೆ ಕಟ್ಟಲು ಅಗತ್ಯವಾದ ಕೆಲವು ನೆರವುಗಳನ್ನು ಒದಗಿಸಿದೆ. ಬಲ್ಲಾಳರ 'ಉತ್ತರಾಯಣ' ಸಿದ್ಧವಾಯಿತು. ಬಲ್ಲಾಳರನ್ನು ಮುಂಬೈ ಕನ್ನಡಿಗರು ವಿಶೇಷವಾಗಿ ಗೌರವಿಸಿ ಬೀಳ್ಕೊಟ್ಟರು. ನಾವು ನವಕರ್ನಾಟಕದ ಮಿತ್ರರೆಲ್ಲ 'ಸಮಕಾಲೀನ ಅಧ್ಯಯನ ವೇದಿಕೆ'ಯಡಿ ಬಲ್ಲಾಳರನ್ನು ಸ್ವಾಗತಿಸುವ ಸಮಾರಂಭ ಮಾಡಿದೆವು. ಜಿ. ವೆಂಕಟಸುಬ್ಬಯ್ಯನವರ ಅಧ್ಯಕ್ಷತೆಯಲ್ಲಿ ಅನೇಕ ಹಿರಿಯ-ಕಿರಿಯರಿರುವ ಸಮಿತಿಯನ್ನು ರಚಿಸಿ ೧೯೯೯ರ ಡಿಸೆಂಬರ್ ೨೫-೨೬ ಎರಡೂ ದಿನ ವಿಚಾರಸಂಕಿರಣ, ಬಲ್ಲಾಳರೊಂದಿಗೆ ಸಂವಾದ, ಗೌರವಗಳು ನಡೆದವು. ಆ ಸಮಾರಂಭದಲ್ಲಿ 'ಅಕ್ಕರೆ' ಅಭಿನಂದನ ಗ್ರಂಥ ಅರ್ಪಿಸಿದೆವು. ಆ ಹೆಸರನ್ನು ಸೂಚಿಸಿದವರು ಚೆನ್ನವೀರ ಕಣವಿಯವರು. ಕೆ. ಕೆ. ಹೆಬ್ಬಾರರ ರಚನೆಯೊಂದರ ಅನುಕೃತಿಯನ್ನು ಶಿಲ್ಪಿ ಕನಕಾಮೂರ್ತಿ ಅವರಿಂದ ಸಿದ್ಧಪಡಿಸಿ ಸ್ಮರಣಿಕೆಯಾಗಿ ಕೊಟ್ಟೆವು. ಯಶವಂತ ಚಿತ್ತಾಲರೂ ಸೇರಿದಂತೆ ಮುಂಬಯಿಯ ಹಲವು ಮಿತ್ರರು ಆ ಸಮಾರಂಭದಲ್ಲಿ ಭಾಗವಹಿಸಿದ್ದರು. ಇದೇ ಸಂದರ್ಭದಲ್ಲಿ ಬಲ್ಲಾಳರು ಕೆ. ಕೆ. ಹೆಬ್ಬಾರರ ಕಲಾಕೃತಿಗಳನ್ನು ಕುರಿತು ಬರೆದ 'ಲಾವಣ್ಯರೇಖೆ' ಬಿಡುಗಡೆಯಾಗಿತ್ತು. ಅದೊಂದು ಒಳನೋಟಗಳುಳ್ಳ ಅಪರೂಪದ ಕೃತಿ. ಬಲ್ಲಾಳರಿಗೆ ಹೆಬ್ಬಾರರು ಬೀಗರು. ಬಲ್ಲಾಳರ ಮಗಳೂ ಕುಂಚ ಕಲಾವಿದೆಯೇ. ಗಿರೀಶ್ ಕಾಸರವಳ್ಳಿ ಅವರು ನಿರ್ಮಿಸಿದ ಕೆ. ಕೆ. ಹೆಬ್ಬಾರರನ್ನು ಕುರಿತ ಸಾಕ್ಷ್ಯಚಿತ್ರಕ್ಕೆ ವ್ಯಾಸರಾಯ ಬಲ್ಲಾಳರೇ ಧ್ವನಿ ನೀಡಿದ್ದರು. ಸಾಹಿತ್ಯ-ಸ್ವರ ಹೆಬ್ಬಾರರೇ ಮಾತನಾಡಿದ್ದಷ್ಟು ಚೆನ್ನಿತ್ತು.

ಪಿ. ವಿ. ನಾರಾಯಣರ 'ಧರ್ಮಕಾರಣ' ಕೃತಿಯ ನಿಷೇಧದ ಹಿನ್ನೆಲೆಯಲ್ಲಿ 'ಅಭಿವ್ಯಕ್ತಿ ಸ್ವಾತಂತ್ರ್ಯ ವೇದಿಕೆ' ರಚಿಸಿ ಹಲವು ಕಾರ್ಯಕ್ರಮಗಳು, ಸಂಕಿರಣಗಳು, ಸಂವಾದಗಳನ್ನು ನಡೆಸಿದಾಗಲೂ ಬಲ್ಲಾಳರು ಆಸಕ್ತಿಯಿಂದ ಸಮಿತಿಯಲ್ಲಿದ್ದು ಕಾರ್ಯ ನಿರ್ವಹಿಸಿದರು. ಸಭೆಯೊಂದರಲ್ಲಿ ಮೂಲಭೂತವಾದಿಗಳನ್ನು ರಕ್ಷಿಸುವ ವ್ಯವಸ್ಥೆಯನ್ನು ಪ್ರಬಲವಾಗಿ ಆಕ್ಷೇಪಿಸಿದ್ದು, ಅದಕ್ಕೆ ಉದಾಹರಣೆಯಾಗಿ ಮುಂಬೈನಲ್ಲೂ ಬಾಳಾ ಠಾಕ್ರೆ ಅವರಿಗೆ 'ಝಡ್' ಹಂತದ ರಕ್ಷಣೆ ಒದಗಿಸಿರುವುದರ ವಿವರ ನೀಡಿ, ಅದನ್ನು ಖಂಡಿಸಿದ ರೀತಿ ಇಂದಿಗೂ ಕಣ್ಣಿಗೆ ಕಟ್ಟುವಂತಿದೆ.

ಬಲ್ಲಾಳರು ಅವರ ಮನೆಯಲ್ಲೇ ಕರೆದು ಕೊಡುತ್ತಿದ್ದ ಆತಿಥ್ಯ, ಆಗ ನಡೆಯುತ್ತಿದ್ದ ಗಂಭೀರವಾದ ಸಾಹಿತ್ಯಕ ಚರ್ಚೆಗಳು, ರಾಜೀವಿಯವರ ಪ್ರೀತ್ಯಾದರಗಳು, ಬಲ್ಲಾಳರ ಮಕ್ಕಳು, ಮೊಮ್ಮಕ್ಕಳು ತುಂಬಿದಾಗಿನ ಮನೆಯ ಸಂಭ್ರಮ ಹೀಗೆ ಎಷ್ಟು ಹೇಳಿದರೂ ಕಡಿಮೆಯೇ. 'ಹೊಸತು' ಪತ್ರಿಕೆಯ ಸಭೆಗಳು, ವಿಶೇಷಾಂಕಗಳಿಗೆ ಅವರು ಸೂಚಿಸುತ್ತಿದ್ದ ವಿಷಯಗಳು, ಅವರೇ ಸಿದ್ಧಪಡಿಸುತ್ತಿದ್ದ ಬರಹಗಳು ಹೀಗೆ ಎಷ್ಟೋ ಮುಗಿಯದ ಸಂಗತಿಗಳಿವೆ. ನಮ್ಮ ಬದುಕಿನ ಒಂದು ಭಾಗವೇ ಆಗಿಹೋಗಿದ್ದ ಭಾವಜೀವಿ ಬಲ್ಲಾಳರು ಈ ಕ್ಷಣಕ್ಕೆ ದೈಹಿಕವಾಗಿ ನಮ್ಮೊಂದಿಗಿಲ್ಲ ಎನ್ನುವುದನ್ನು ಮನಸ್ಸು ಒಪ್ಪಿಕೊಳ್ಳುತ್ತಿಲ್ಲ. ಸತ್ಯ ಇಷ್ಟು ನಿಷ್ಠುರವಾಗುವುದೇಕೆ ?

ಬಲ್ಲಾಳರದು ಮಕ್ಕಳು, ಮೊಮ್ಮಕ್ಕಳು, ಸಹೋದರರು ಎಲ್ಲ ತುಂಬಿದ ದೊಡ್ಡ ಕುಟುಂಬ. ಅವರವರ ಕೆಲಸ ಅವರವರಿಗೆ. ಬಲ್ಲಾಳರು-ರಾಜೀವಿ ಮಾತ್ರ ಗಿಣಿ-ಗೊರವಂಕಗಳ ಹಾಗೆ ತಮ್ಮ 'ಉತ್ತರಾಯಣ'ದಲ್ಲಿ, ಬಿಡುವಿಲ್ಲದ ಬೆಂಗಳೂರಿನ ಸ್ನೇಹ ಬಳಗ ಹೆಚ್ಚಾಗಿ ಭೇಟಿಗೆ ಬರದಿದ್ದರೂ ಪ್ರೀತಿಯಿಂದ ಕಂಡಿತ್ತು.

ಬಲ್ಲಾಳರು ಕನ್ನಡದ ಪ್ರೀತಿಯ 'ಮಗು'ವಾಗಿದ್ದರು. ಅವರನ್ನು ಪ್ರಶಸ್ತಿ ಗೌರವಗಳು ಅರಸಿ ಬಂದವು. ಅದೊಂದು ಸಂತೃಪ್ತ ಬದುಕಾಗಿತ್ತು. ಅವರು ಇಂದೂ ಕನ್ನಡ ಮನಸ್ಸುಗಳಲ್ಲಿ, ಶ್ರಮಿಕವರ್ಗದ ಬದುಕಿನಲ್ಲಿ, ಸ್ತ್ರೀಯರ ಚೈತನ್ಯದಲ್ಲಿ ಇದಾರೆ ಇರುತ್ತಾರೆ

ಎಂಬ ಬಗ್ಗೆ ಪ್ರಶ್ನೆಗಳನ್ನು ಹಾಕಿಕೊಳ್ಳುತ್ತಿದ್ದರು. ಅವರ ಪ್ರವಾಸ ಕಥನದಲ್ಲೂ ಈ ಪ್ರಶ್ನೆಗಳಿಗೆ ಉತ್ತರ ಹುಡುಕಲು ಪ್ರಯತ್ನಿಸಿದ್ದಾರೆ. ವಲಸೆ ಹೋದ ಭಾರತೀಯರಲ್ಲಿ 'ಭಾರತೀಯತ್ವ'ದ ಹುಡುಕಾಟ, ತಹತಹಿಕೆ ಎಂಥದ್ದು? ಅತೃಪ್ತಿಗೆ ಕಾರಣಗಳೇನು? ಭಾರತದ ಬಗ್ಗೆ ಅತ್ತಲವರಿಗಿರುವ ಅಜ್ಞಾನ, ಎರಡು ಸಂಸ್ಕೃತಿಗಳ ಸಂಘರ್ಷ ಇತ್ಯಾದಿ ಚರ್ಚಿಸುತ್ತಾರೆ. ಅವರ ಪ್ರವಾಸಕಥನ ತಾವು ಕಂಡ ಪ್ರದೇಶಗಳ ಚಿತ್ರಣ – ಮೆಚ್ಚಿಕೆ ಮಾತ್ರ ಆಗಿರದೆ, ಅಲ್ಲಿಯ ಮನಸ್ಸುಗಳ, ಬದುಕಿನ ಒಳಹೊಕ್ಕು ಮಾತಾಡುತ್ತವೆಯೆಂಬುದೇ ಅದರ ವಿಶೇಷ.

ನಾನು ತುಂಬ ಮೆಚ್ಚಿಕೊಂಡ ಅವರ ವಿಡಂಬನಾತ್ಮಕ ಕೃತಿ 'ಸಂಗ್ರಹ ಭಾರತಾಯಣ' ಅಥವಾ 'ಆಧುನಿಕ ಮಿಳ್ಳಿ ಪುರಾಣ'. ತುರ್ತುಪರಿಸ್ಥಿತಿ, ಅನಂತರದ ರಾಜಕಾರಣ ಎಲ್ಲವನ್ನು ಅವರು ವಿಡಂಬಿಸುವ ಬಗೆಯೇ ವಿಶಿಷ್ಟ. ವೈಚಾರಿಕತೆಗೆ ಬೆಲೆ ಇಲ್ಲದ ದಿನಗಳವು. ಇಲ್ಲಿ ವಿಡಂಬನೆ ಸಹಾಯ ಮಾಡುತ್ತೆ ಮತ್ತು ವಿಡಂಬನೆ ಗೇಲಿಗೆ ಮಾತ್ರವಲ್ಲ, ನೋವು ತೋಡಿಕೊಳ್ಳಲೂ ನೆರವಾಗಬಲ್ಲುದು ಎಂಬ ಕಾರಣಕ್ಕೆ ಈ ಪ್ರಯೋಗ.

'ಮಿಳ್ಳಿ' ನಾಯಕಿ. ಸರ್ವಶಕ್ತೆ. ಅದನ್ನು ಒಪ್ಪದವರನ್ನು ಆಕೆ ಸೆರೆಗೆ ಹಾಕಿದಳು. ಇದಕ್ಕೆ ಜನ ಒಪ್ಪಲಿಲ್ಲ, ಗದ್ದಲ ಮಾಡಿತು. 'ಕುರುಕ್ಷೇತ್ರ'ಕ್ಕಿಳಿದು ಸೋತಳು. ಮತ್ತೆ ಜಾಣತನ ಮಾಡಿ ಗದ್ದುಗೆ ಏರಿದಳು. ಆಕಾಶದಲ್ಲಿ ಹಾರುತ್ತಿದ್ದ ಅವಳ ಮಗ ಬಿದ್ದು ಸತ್ತ, ಇನ್ನೊಬ್ಬ ನೆರಳಿನಲ್ಲಿದ್ದ ಕುಮಾರ ಬೆಳಕಿಗೆ ಬಂದ. ಇತರ ಸಮಸ್ತರ ಭಿನ್ನಾಭಿಪ್ರಾಯ, ಜಗಳ, ಕುಟುಂಬದಲ್ಲಿ ಜಗಳ ಹೀಗೆ ಹರಿಯುವ ವಿಡಂಬನೆಯ ಚುರುಕು. ಈ ಕೃತಿ ರಚಿಸಿದ 'ಹವ್ಯಾಸಮುನಿ'ಗೆ ಒಬ್ಬ ಬಕ್ಕತಲೆಯ, ಕನ್ನಡಕ ಧರಿಸಿ ಕೋಲು ಹಿಡಿದ ಅರೆಬೆತ್ತಲೆ ಮುದುಕ ಎದುರಾಗುತ್ತಾನೆ. 'ಗಾಂಧಿ' ಎಂದು ಕರೆದ ಹವ್ಯಾಸಮುನಿಗೆ ಆ ಮುದುಕ ''ನಾನಲ್ಲಪ್ಪ... ಬೇರೆ ಯಾರೋ ಆ ಹೆಸರಿನವರಿದ್ದಾರೆ. ಕಾರು ಮಾಡಿ, ದೇಶಕಟ್ಟಿ, ವಿಮಾನ ಹಾರಿಸಿದ ಹುತಾತ್ಮರು ಅವರನ್ನು ನೋಡು ಹೋಗು...'' ಅನ್ನುತ್ತಾನೆ. ಇಂಥ ಅನೇಕ ಸ್ವಾರಸ್ಯದ ಚಿತ್ರಣಗಳನ್ನು ಕಟ್ಟಿಕೊಡುವ ಮಿಳ್ಳಿ ಪುರಾಣದ ವಿಡಂಬನೆಯ ನಗುವಿನ ಹಿಂದೆ ಅಂಥ ವ್ಯವಸ್ಥೆಯ ಬಗ್ಗೆ ಸಿಟ್ಟು, ಅಸಹ್ಯಗಳು ಹುಟ್ಟುತ್ತವೆ. ಅದೊಂದು ಅಪರೂಪದ ಕೃತಿ, ತುರ್ತುಪರಿಸ್ಥಿಯಲ್ಲಿ ಅಭಿವ್ಯಕ್ತಿಗೆ ಕಂಡುಕೊಂಡ ಉಪಾಯ.

ಬಲ್ಲಾಳರನ್ನು ಕಾದಂಬರಿಕಾರರೆಂದೇ ಗುರುತಿಸಿಕೊಂಡಿದ್ದೇವೆ. ಅವರು ಸಣ್ಣ ಕತೆಗಾರರೂ ಹೌದು. ಅವರ ನೂರಕ್ಕೂ ಹೆಚ್ಚು ಕತೆಗಳ ಸಂಕಲನಗಳು, ಸಮಗ್ರ ಕಥಾಸಂಕಲನ ಕೂಡ ಪ್ರಕಟವಾಗಿವೆ. ''ನಾನು ನನ್ನ ಸೃಜನಶೀಲ ಶಕ್ತಿಯನ್ನು ಬಳಸಿ ಬೆಳೆಸಿಕೊಂಡದ್ದು ಸಣ್ಣಕಥೆಯ ಮಾಧ್ಯಮದ ಮೂಲಕವೇ... ಸಣ್ಣಕತೆಯ ಬರವಣಿಗೆ ಸಮಯ, ಭಾಷೆ, ಬಂಧಗಳಲ್ಲಿ ಹೆಚ್ಚಿನ ಶಿಸ್ತನ್ನು ನಿರೀಕ್ಷಿಸುತ್ತದೆ... ತುಸು ನಿಧಾನ ಗತಿಯಿಂದ ಬರವಣಿಗೆ ಮುಂದುವರಿಯಬಹುದಾದ ಕಾದಂಬರಿ ಮಾಧ್ಯಮವನ್ನು ಹೆಚ್ಚು ನೆಚ್ಚಿಕೊಂಡಿದ್ದೇನೆ'' ಎನ್ನುತ್ತಾರೆ ಬಲ್ಲಾಳರು. ಇವರ ಬಹುತೇಕ ಕತೆಗಳು ಮುಂಬೈ ಕೇಂದ್ರಿತ. ಅವರು ನಡೆಸುತ್ತಿದ್ದ ರಾತ್ರಿ ಶಾಲೆಗಳೂ, ಅಲ್ಲಿ ಕಲಿಯುತ್ತಿದ್ದ ಶ್ರಮಿಕ ವರ್ಗ ಅದೂ ಹೋಟೆಲ್ ಮಾಣಿಗಳೇ ಮೊದಲಾದವರ ಸುತ್ತ ಹೆಣೆದ ಕತೆಗಳು ಹೆಚ್ಚು. ಮಾನವ ಸಂಬಂಧಗಳು, ಅಂತರಂಗದ ತುಡಿತಗಳನ್ನು ಚಿತ್ರಿಸುವ ಇವರ ಕತೆಗಳ ಪ್ರಧಾನ ಗುಣವೆಂದರೆ ಅವರವರ ಸಾಮಾಜಿಕ, ಆರ್ಥಿಕ ಹಿನ್ನೆಲೆಯಲ್ಲಿ ಆ ಸಮಸ್ಯೆಗಳನ್ನು ಪರಿಶೀಲಿಸುವುದು ಮತ್ತು ಕೇವಲ ಆದರ್ಶ-ಅನುಕಂಪವಾಗುಳಿಯದೆ ಅಂಥ ಶೋಷಿತರಲ್ಲೂ ಇರಬಹುದಾದ ದೋಷಗಳನ್ನು ಕಾಣುವ ಪ್ರಯತ್ನ ಮಾಡುತ್ತವೆ. ವಾಸ್ತವಕ್ಕೆ ಹತ್ತಿರವಾಗುವ, ಮಾನವೀಯ ಸಂಬಂಧಗಳ ಸೂಕ್ಷ್ಮ ಶೋಧನೆಯ ಕತೆಗಳವು.

ಬಲ್ಲಾಳರ ಪ್ರಾರಂಭದ ಕಾದಂಬರಿಗಳನ್ನು ಪ್ರಗತಿಶೀಲ ಬರಹಗಾರರ ನೆಲೆಯಲ್ಲೇ ನೋಡುವ ಪರಿಪಾಠವಿತ್ತು ಮತ್ತು ಅವರ ಕೃತಿಗಳು ಭಾವನಾತ್ಮಕವಾದವು ಎಂಬ ಹಣೆಪಟ್ಟಿಯೂ ಇತ್ತು. ಅನಂತರದ ನವ್ಯ ಪಂಥವೂ ಅವರನ್ನು ಗಾಢವಾಗಿ ತಟ್ಟಲಿಲ್ಲವೇಕೆ ಎಂಬ ಪ್ರಶ್ನೆಗಳಿದ್ದವು. ಆದರೆ ಬಲ್ಲಾಳರನ್ನು ಹಾಗೆ ಯಾವುದೊ ಒಂದು ಸಾಹಿತ್ಯಕ ಪಂಥದ ಗೆರೆಯಮೇಲೆ ನಿಲ್ಲಿಸಲು ಆಗುವುದಿಲ್ಲ. ಅವರು ಅದನ್ನೂ ಇದನ್ನೂ ಕಾಣುತ್ತಲೇ ಹೊಸದು ಮತ್ತು ತನ್ನದೇ ಆದ ಜಾಡು ರೂಪಿಸಿಕೊಳ್ಳುತ್ತಾ ಹೊರಟರು ಮತ್ತು ಅಂಥ ತಿರುವಿಗೆ ಅವರ ಮುಂಬಯಿ ವಾಸ್ತವ್ಯವೂ ಕಾರಣವಾಗಿರಬಹುದು. ''...ಪ್ರಗತಿಶೀಲ ವಾಸ್ತವವಾದದಿಂದ ನವ್ಯದ ಕಡೆಗೆ ಹೊರಳಿದ ಸ್ಥಿತ್ಯಂತರವು ಎಲ್ಲ ಲೇಖಕರ ಮೇಲೂ ಕೆಲವು ಸವಾಲುಗಳನ್ನು ಒಡ್ಡಿದೆ. ಮುಂಬಯಿಯ ಸಾಹಿತ್ಯಕ, ಸಾಂಸ್ಕೃತಿಕ ಪರಿಸರ ಹಾಗೂ ಅಲ್ಲಿಯ ಜೀವನ ಕ್ರಮದ ಮಾನದಂಡಗಳಿಂದಲೇ ಕನ್ನಡದ 'ಮಹತ್ವದ' ಕೃತಿಗಳನ್ನು ಗುರುತಿಸುವುದು ನಮಗೆ ಸಹಜ. ಹೀಗಾಗಿ ಪ್ರಗತಿಪರ, ನವ್ಯ ಕೃತಿಗಳ ಪ್ರಭಾವ ಮುಂಬಯಿ ಲೇಖಕರ ಮೇಲೆ ಅಷ್ಟಾಗಿ ಆಗಿದೆ ಅನ್ನಿಸುವುದಿಲ್ಲ... ಆದರೆ ಬದುಕನ್ನ ಅದರ ಸಮಗ್ರತೆಯಲ್ಲಿ ಗ್ರಹಿಸುವ ಎಲ್ಲ ಕಲಾಕೃತಿಗಳಲ್ಲೂ ಒಂದಲ್ಲ ಒಂದು ರೀತಿಯ ಜೀವನದರ್ಶನ ಕಾಣಬೇಕು ಎಂಬ ನಿಲುವನ್ನು ನೆಚ್ಚಿಕೊಂಡವ ನಾನು. ಈ ದೃಷ್ಟಿಯಿಂದ ನವ್ಯ ತಂದ ಸ್ಥಿತ್ಯಂತರಗಳನ್ನು ನಾನು ಸ್ವಾಗತಿಸಿದ್ದೇನೆ. ಆದರೆ ಅವು ನನ್ನ ಬರವಣಿಗೆಗೆ ಸವಾಲುಗಳೇನಾಗಿಲ್ಲ...'' ಎಂದು ಅವರೇ ಸ್ಪಷ್ಟಪಡಿಸುತ್ತಾರೆ. ಅವರ ಕೃತಿಗಳಿಗೆ ಭಾವಾತಿರೇಕದ ಪಟ್ಟಿ ಹಾಕಿದವರಿಗೂ ಅವರ ಉತ್ತರವಿದೆ. ''...ಕಾದಂಬರಿ, ಸಣ್ಣಕತೆಗಳಲ್ಲಿ ಭಾವಾತಿರೇಕತೆಯನ್ನ ಉದ್ದೇಶಪೂರ್ವಕವಾಗಿ ಬಳಸಿಲ್ಲ... ಹೃದಯವನ್ನು ಗಂಭೀರವಾಗಿ ತಟ್ಟುವ ಯಾವ ಸನ್ನಿವೇಶವೂ ಉಂಟುಮಾಡುವ ನೋವು ಕಣ್ಣೀರು ತರಿಸಲು ಕಾರಣವಾಗುವುದಿದೆ. ಜಗತ್ತಿನ ಶ್ರೇಷ್ಠ ಕೃತಿಗಳಲ್ಲಿಯೂ ನಮಗೆ ಇಂಥ ಸನ್ನಿವೇಶಗಳು ದೊರಕುತ್ತವೆ...'' ಎನ್ನುತ್ತ ಹಲವು ಕೃತಿಗಳು ಹಾಗೂ ತಮ್ಮ ಕೃತಿ ಓದಿದ ಹಲವರ ಅನುಭವದ ಉದಾಹರಣೆಯನ್ನು ಕೊಡುತ್ತಾರೆ. ಹಾಗೆ ಅವರ ಕೃತಿ ಓದಿ ಸಂಪರ್ಕಿಸಿದ ಮಹಿಳೆಯೊಬ್ಬಳ ಕಷ್ಟಕ್ಕೆ ನೆರವಾದ ದೃಷ್ಟಾಂತವೂ ಇದೆ.

ಬಲ್ಲಾಳರ 'ಅನುರಕ್ತೆ', 'ವಾತ್ಸಲ್ಯಪಥ' ಕಾದಂಬರಿಗಳು ಚಲನಚಿತ್ರವಾಗಿಯೂ ಯಶಸ್ಸು ಕಂಡಿವೆ. ಅವರ 'ಬಂಡಾಯ' ಕಾದಂಬರಿ ದೂರದರ್ಶನದಲ್ಲಿ ಧಾರಾವಾಹಿಯಾಗಿ ಯಶಸ್ವಿಯಾಗಿತ್ತು. ಬಲ್ಲಾಳರ ಕಾದಂಬರಿಗಳನ್ನು ಭಾವನಾತ್ಮಕ ಎಂದು ಗುರುತಿಸುವವರಿಗೂ ಕೂಡ ಆ ಕೃತಿಗಳನ್ನು ಪ್ರಗತಿಶೀಲರ ಕಾದಂಬರಿಗಳ ಜೊತೆಗಿಟ್ಟು ನೋಡುವುದು ಸಾಧ್ಯವಾಗಿಲ್ಲ. ಬಲ್ಲಾಳರ ಕಾದಂಬರಿಗಳಲ್ಲಿಯ ವರ್ಗ ಸಂಘರ್ಷವನ್ನು ಸಿದ್ದನಗೌಡ ಪಾಟೀಲರು ತುಂಬ ಸರಿಯಾಗಿ ಗುರುತಿಸುತ್ತಾರೆ. ಬಲ್ಲಾಳರಿಗೆ ಕಾರ್ಮಿಕ ವರ್ಗದ ಸಮಸ್ಯೆಗಳು ಕೇವಲ ಆದರ್ಶವಲ್ಲ; ಅದು ಅವರು ಪ್ರತಿನಿತ್ಯ ಕಾಣುತ್ತಿದ್ದ ಮುಂಬೈ ನಗರದ ಬದಕಿನಲ್ಲಿಯ ಸತ್ಯ ಮತ್ತು ಶೋಷಣೆಯ ವಿವಿಧ ಮುಖಗಳ ದರ್ಶನ. ಹೀಗಾಗಿ ಅವರ ಕಾದಂಬರಿಗಳೆಲ್ಲ ಮುಂಬೈ ಕೇಂದ್ರಿತ, ಮುಂಬೈ ವರ್ಣನೆ ಎಂಬ ಹೇಳಿಕೆಯಾಚೆಗೆ ಮಧ್ಯಮ ವರ್ಗ ಹಾಗೂ ಕೂಲಿ ಕಾರ್ಮಿಕರ ಬದುಕಿನ ವಾಸ್ತವಕ್ಕೆ ಕನ್ನಡಿ ಹಿಡಿಯುತ್ತಲೇ ಆ ಬವಣೆಯ ಕಾರ್ಯ-ಕಾರಣ ಸಂಬಂಧಗಳನ್ನೂ ಗ್ರಹಿಸಲು ಪ್ರಯತ್ನಿಸುತ್ತವೆ. ಹೀಗಾಗಿ ಬಲ್ಲಾಳರ ಕಾದಂಬರಿಗಳು ಅವಕ್ಕವೇ ಪ್ರತ್ಯೇಕ ಮತ್ತು ಒಂದು ಮತ್ತೊಂದರ ಮುಂದುವರಿಕೆಯೂ ಹೌದು. 'ಹೇಮಂತಗಾನ', 'ಉತ್ತರಾಯಣ'ದ ಮುಂದಿನ ಭಾಗವಾಗಿ 'ಬಂಡಾಯ' ವಿಸ್ತರಿಸಿಕೊಂಡಿದೆ ಅನ್ನಿಸಿದರೆ ಆಶ್ಚರ್ಯವಿಲ್ಲ. ಬಲ್ಲಾಳರ ವಿಚಾರಧಾರೆಗೆ ಪಾತ್ರ-ಸನ್ನಿವೇಶಗಳು ಸೃಷ್ಟಿಗೊಂಡಿವೆ ಮತ್ತು ಆ ವಿಚಾರಧಾರೆ ವಿಸ್ತರಿಸಿದಂತೆಲ್ಲ ಮತ್ತೊಂದು ಮಗದೊಂದು ಕಾದಂಬರಿಯಲ್ಲಿ ಚರ್ಚೆಯಾಗುತ್ತ ನಡೆದಿದೆ.

'ಹೇಮಂತಗಾನ' ಚಾರಿತ್ರಿಕ ಸತ್ಯಗಳನ್ನು ಹೇಳುತ್ತಿದೆ. ಸ್ವಾತಂತ್ರ್ಯ ಹೋರಾಟ, ಅನಂತರವೂ ಮುಂದುವರಿದ ಹೋರಾಟಗಳನ್ನು ಕುರಿತು ಹೇಳುತ್ತಿದೆ. ಇವತ್ತಿಗೂ ಪ್ರಸ್ತುತ



ಬಲ್ಲಾಳರ 'ಹೆಜ್ಜೆ ಗುರುತು' ಸೇರಿದಂತೆ ನವಕರ್ನಾಟಕ ಪ್ರಕಾಶನದ ಆರು ಪುಸ್ತಕಗಳ ಅನಾವರಣದ ಸಮಾರಂಭದಲ್ಲಿ

ವಾಗುವ ಸಂಗತಿಗಳಿವು. ಬಲ್ಲಾಳರು ಅದೇ ಇತಿಹಾಸದ ಸತ್ಯವನ್ನು 'ಹೆಜ್ಜೆ'ಯವರೆಗೂ ವಿವರ ವಿವರವಾಗಿ ಕಟ್ಟಿ ಕೊಡುತ್ತಿಲ್ಲವೆ? ಹಲವರ ತ್ಯಾಗ ಬಲಿದಾನಗಳಿಂದ ಪಡೆದ ಸ್ವಾತಂತ್ರ್ಯವನ್ನು ಮತ್ತೆ ಧಾರ್ಮಿಕ ಗುಲಾಮಗಿರಿಗೆ ಕೊಂಡೊಯ್ಯುತ್ತಿದ್ದೇವೆ. ಇದು ಮಾನವ ಜಗತ್ತು ತಂದುಕೊಳ್ಳುತ್ತಿರುವ ದೊಡ್ಡ ಅಪಾಯ ಎಂಬ ಎಚ್ಚರಿಕೆ ಕೊಡುತ್ತ ಬಂದರು. ಅವರ ಕೃತಿಗಳಲ್ಲಿ ಕಾಂಗ್ರೆಸ್, ಲೋಹಿಯಾರ ಸಮಾಜವಾದಗಳು ಕೂಡ ಅಧಿಕಾರಕ್ಕಾಗಿ ಫ್ಯಾಸಿಸ್ಟ್ ಪಕ್ಷಗಳನ್ನು ಅಪ್ಪಿಕೊಳ್ಳತೊಡಗಿದ್ದಕ್ಕಾಗಿ ವಿಷಾದವಿದೆ. ಇದು ಇವತ್ತಿಗೂ ಪ್ರಸ್ತುತವೆನ್ನಿಸಿದ ಸಂಗತಿಯೇ ಆಗಿದೆ. ಇವೆಲ್ಲ ಆ ಮಟ್ಟಿಗೆ ಅವರು ಬೀಜಾಂಕುರವಾಗುವಾಗಲೇ ಕಂಡುಕೊಂಡ ಭವಿಷ್ಯದ ಫಸಲು ಅಥವಾ ಮುನ್ನೋಟ!

ಬಲ್ಲಾಳರು ಕಾದಂಬರಿಗಳಲ್ಲಿ ಕುಟುಂಬ ವ್ಯವಸ್ಥೆಯ ಬಗ್ಗೆ ಮಾತನಾಡುತ್ತಾರೆ. ಆ ಬಗ್ಗೆ ಅವರಿಗೆ ಗೌರವ ಇದೆ. ಕುಟುಂಬಗಳಲ್ಲಿಯ ವಿಘಟನೆಯನ್ನು ವಿಷಾದದಿಂದ ಗುರುತಿಸುತ್ತಾರೆ. ಇಂಥಲ್ಲಿ ಸಮರ್ಥನೀಯ ತರ್ಕಗಳನ್ನು ಕಟ್ಟುವ ಪ್ರಯತ್ನವೂ ಇದೆ. 'ಬಂಡಾಯ', 'ಹೇಮಂತ ಗಾನ'ದ ಮುಂದುವರಿಕೆಯೆ? ಎಂದಾಗ ಇರಬಹುದು ಎಂದು ಮುಗುಳ್ನಗುತ್ತಿದ್ದ ಬಲ್ಲಾಳರು, ಬಂಡಾಯದ ಟ್ರೇಡ್ ಯೂನಿಯನ್‌ಗಳು, ಅಲ್ಲಿಯ ನಾಯಕರು ಮತ್ತು ಮುಂಬಯಿಯಲ್ಲಿ ನಡೆದ ಪ್ರಮುಖ ಘಟನೆಗಳನ್ನು ದತ್ತಾ ಸಾಮಂತ್, ಎಸ್. ವೆಂಕಟ್ರಾಮ್, ರಾಯ್‌ವಾದಿಗಳು ಮೊದಲಾದ ಕೆಲವು ವ್ಯಕ್ತಿಗಳೊಂದಿಗೆ ಸಮೀಕರಿಸುತ್ತಿದ್ದ ಗೆಳೆಯ ಸಿ.ಆರ್. ರಾವ್ ಅವರ ಮಾತನ್ನು ಎಂದೂ ನಿರಾಕರಿಸುತ್ತಲೂ ಇರಲಿಲ್ಲ.

ಹಣ ಪ್ರಧಾನವಾದ ಇಂದಿನ ಸಮಾಜದಲ್ಲಿ ಆದರ್ಶವಾದ, ಸಮತಾವಾದದ ಸಾಧ್ಯತೆಯ ಬಗ್ಗೆ ಅವರಲ್ಲಿ ''ಆದರ್ಶದ ಪರಿಕಲ್ಪನೆ ಸೂಚಿಸುವುದು ಶ್ರೇಷ್ಠತೆ, ಉದಾತ್ತತೆಗಳನ್ನು. ವಾಸ್ತವ ಇದಕ್ಕೆ ವಿರುದ್ಧ ಸ್ಥಿತಿಯನ್ನು ಬಿಂಬಿಸುತ್ತದೆ. ಸಮಾಜ ವ್ಯವಸ್ಥೆಯ ಕುರಿತ ನೋವೇ ಸಮತಾವಾದದ ಪರಿಕಲ್ಪನೆ ಬೆಳೆಯಲು ಕಾರಣ'' ಎಂಬ ಸ್ಪಷ್ಟ ನಿಲುವುಗಳಿದ್ದುವು.

ಹಿಂಸೆಯಿಲ್ಲದೆ ಬದಲಾವಣೆ ಸಾಧ್ಯವಿಲ್ಲ, ಅಥವಾ ಈ ಸಮತಾವಾದದ ಉದ್ದೇಶದ ಸಾಮಾಜಿಕ ವ್ಯವಸ್ಥೆ ಸಾಮಾಜಿಕ ಕ್ರಾಂತಿಯ ಯಶಸ್ಸನ್ನು ಕಾಣಬೇಕಾದರೆ ದಂಡಶಕ್ತಿಯು ಅಗತ್ಯ ಎಂಬುದು ಅವರಿಗೆ ಹೊಸ ಸಂಗತಿಯಲ್ಲ. ಆದ್ದರಿಂದಲೇ ಅವರ 'ಬಂಡಾಯ' ಅನವಶ್ಯಕ ಹಿಂಸೆಯನ್ನು ವಿರೋಧಿಸಿದರೂ ''ಹಿಂಸಾಮುಕ್ತ ಬದುಕು, ಹಿಂಸೆಯಿಲ್ಲದ ಜಗತ್ತು ಒಂದು ಅಸಾಧ್ಯಾದರ್ಶ'' ಎಂಬ ಅರಿವನ್ನೂ ಜೊತೆಗಿಟ್ಟುಕೊಂಡೇ ಇದೆ.

ಮುಂಬಯಿವಾಸಿಗಳೂ ಪ್ರತಿದಿನ ಎಲ್ಲ ಸಂಗತಿಗಳನ್ನು ಚರ್ಚಿಸುವ ಮಿತ್ರರೂ ಆಗಿದ್ದೂ ಬಲ್ಲಾಳರ ಬರಹಕ್ಕೂ ಚಿತ್ತಾಲರ ಬರಹಗಳಿಗೂ ತುಂಬಾ ವ್ಯತ್ಯಾಸವಿದೆ. ಈ ಮಾತಿಗೆ ಬಂದರೆ ಬಲ್ಲಾಳರದೇ ಆದ ಉತ್ತರವೂ ಇದೆ.

''ನನ್ನ ಅನುಭವ ಪ್ರಪಂಚದ ಪರಿಧಿಯಲ್ಲಿ ಸಾಮಾಜಿಕ ಸತ್ಯಗಳು ಬದುಕನ್ನು ತಟ್ಟುವ ಬಗೆಯನ್ನು ಶೋಧಿಸುವಾಗ ಅವುಗಳ ಸಮಗ್ರ ಸ್ವರೂಪವನ್ನು ಗಮನಕ್ಕೆ ತಂದುಕೊಳ್ಳಲು ನಾನು ಪ್ರಯತ್ನಿಸುತ್ತೇನೆ; ಚಿತ್ತಾಲರು ತಮ್ಮ ಸತ್ಯಶೋಧನೆಯ ಕಾಯಕದಲ್ಲಿ ವೈಜ್ಞಾನಿಕವೆನಿಸುವ ದೃಷ್ಟಿಕೋನಕ್ಕೆ ಮಹತ್ವ ಕೊಟ್ಟು ಆ ಮೂಲಕ ಬದುಕನ್ನು

[illegible]

ನಿಮ್ಮ ಸೋದರ

ಡಾ|| ವಿಜಯಾ ಅವರಿಗೆ ೧೯.೪.೧೯೮೬ರಂದು ಮುಂಬಯಿಯಿಂದ ಶ್ರೀ ವ್ಯಾಸರಾಯ ಬಲ್ಲಾಳರು ಬರೆದಿದ್ದ ಪತ್ರದ ಒಂದು ಭಾಗ

ಗ್ರಹಿಸಬಹುದಾದ ದಾರ್ಶನಿಕವೆನಿಸುವ ನಿಷ್ಪತ್ತಿಯ ಕಡೆ ಗಮನಹರಿಸುತ್ತಾರೆ.''

ಬಲ್ಲಾಳರ 'ಆಕಾಶಕ್ಕೊಂದು ಕಂದೀಲು' ಅಂಥ ಒಂದು ಹೊಸ ಪ್ರಯೋಗವೇ ಆಗಿದೆ. ಬಲ್ಲಾಳರು ನಿರೀಕ್ಷಿಸಿದ ಪ್ರತಿಕ್ರಿಯೆ ಅದಕ್ಕೆ ಸಿಗಲಿಲ್ಲವಾದರೂ ಅದೊಂದು ವಿಶೇಷ ರಚನೆ. ಕಾದಂಬರಿಗೊಂದು ಗೊತ್ತಾದ ಚೌಕಟ್ಟು, ಕಥಾವಸ್ತು ಇಲ್ಲ. ಹುಟ್ಟು, ಸಾವು, ಬದುಕಿನ ಬಗ್ಗೆ ಪ್ರಶ್ನೆಗಳನ್ನೆತ್ತುತ್ತ ತನ್ನನ್ನೆ ತಾನು ಯಾರೆಂದು ಹುಡುಕುವ, ಆ ಹುಡುಕಾಟಕ್ಕೆ ನೆರವಾಗಲು ಪ್ರತಿಸೃಷ್ಟಿಯಾಗಿ 'ನೀನು' ಬೇಕೆನ್ನುವ, ಗಂಭೀರವಾಗಿ ಬದುಕನ್ನು ನೋಡುವ ಬಗೆಯನ್ನು ಇಲ್ಲಿ ಕಾಣುತ್ತೇವೆ. ಬಲ್ಲಾಳರು ತಮ್ಮ ೨೪ರ ಪ್ರಾಯದಲ್ಲಿ (ಮುಂಬೈನಲ್ಲಿ) ಬರೆದ 'ಜೀವನಾವಲೋಕನ' ಎಂಬ ಮೀಮಾಂಸೆಯನ್ನು ಅನಂತರದ ಜೀವನಾನುಭವದ ಪಾಕದೊಂದಿಗೆ ಹೊಂದಿಸಿಕೊಳ್ಳುತ್ತ ಮತ್ತಷ್ಟು ವಿಸ್ತರಿಸಿದ ಚಿಂತನೆ ಅಥವಾ ದಾರ್ಶನಿಕತೆ ಇಲ್ಲಿದೆ ಎನ್ನಬಹುದೇನೊ!

ಬಲ್ಲಾಳರ ಕಾದಂಬರಿಗಳಲ್ಲಿ ಬರುವ ಸ್ತ್ರೀ ಪಾತ್ರಗಳ ಬಗ್ಗೆ ಸಾಕಷ್ಟು ಚರ್ಚೆಗಳಾಗಿವೆ. ಅವರು ಗಾಂಧಿ ತತ್ವಗಳನ್ನು ನಂಬಿದವರು. ಹಾಗೇ ಸ್ತ್ರೀಯರ ಸುಧಾರಣೆಯಲ್ಲಿ ಬಿಡುಗಡೆಯಲ್ಲಿ ಒಲವಿದೆ. ಆದರೆ ಆ ಹಂತಕ್ಕೆ ಬಂದಾಗ ಏನೋ ಒಂದು ತಡೆ. ಕೌಟುಂಬಿಕ ಪರಿಸರದ, ಸಾಂಪ್ರದಾಯಿಕ ಎನ್ನಬಹುದಾದ ಕೆಲವು ಚೌಕಟ್ಟನ್ನು ಬಿಟ್ಟುಕೊಡಲಾಗದ ಬಲ್ಲಾಳರು ವಿಧವೆಯರಿಗೆ ವಿವಾಹದವರೆಗೆ ವಿಚಾರಗಳನ್ನು ತಂದರೂ ಅದು ಕ್ರಿಯೆಯಾಗಲು ಬಿಡುವುದಿಲ್ಲ. ವಿವಾಹೇತರ ಸಂಬಂಧಗಳೂ, ಶೀಲಸಂಬಂಧಿ ಸಂಗತಿಗಳೂ ಅವರಲ್ಲಿ ವಿಚಾರಗಳಾಗಿ ಗಂಭೀರವಾಗಿವೆ. ಆದರೆ ಬಹಳ ಜಾಣತನದಿಂದ ಅವನ್ನು ನಿವಾರಿಸಿಕೊಂಡುಬಿಡುತ್ತಾರೆ. ಕುಟುಂಬ-ಜವಾಬ್ದಾರಿಗಳ ಸಂಗತಿಯಲ್ಲೂ ಹಾಗೇ ಆಗುತ್ತದೆ. ಅವೆಲ್ಲವೂ ಭಾರತೀಯರ ಮೌಲ್ಯಗಳು ಎನ್ನುವುದಾದರೆ ಅವೆಲ್ಲವನ್ನೂ ಉಳಿಸಿಕೊಂಡೂ ಸ್ತ್ರೀ ಹೋರಾಟಗಾರ್ತಿಯಾಗಿ, ಪುರುಷನಿಗೆ ಸಮಾನಳಾಗಿ ಮುನ್ನುಗ್ಗುವುದನ್ನು ಅವರಲ್ಲಿ ಕಾಣಬಹುದು.

ಬಲ್ಲಾಳರು ಅವರ ಪಾತ್ರಗಳ ಮೇಲೆ ಎಲ್ಲಿಯೂ ಪುರುಷಾಧಿಕಾರವನ್ನು ಹೇರುವುದಿಲ್ಲ. ಎಲ್ಲವನ್ನೂ ಸಾನ್ನಿವೇಶಿಕ ಅನುಕೂಲದಲ್ಲಿ ನಿವಾರಿಸಿಕೊಳ್ಳುವ ಜಾಣ್ಮೆ ತೋರಿ, ಪ್ರಶ್ನಿಸುವ ಮನಸ್ಸನ್ನು ತೆಪ್ಪಗಾಗಿಸಬಲ್ಲರು. ಭಾರತೀಯ ನಾರಿಯ ಪರಿಕಲ್ಪನೆಯ ಚೌಕಟ್ಟನ್ನು ದಾಟಬೇಡಿ ಅನ್ನುವುದಿಲ್ಲ, ಆದರೆ ದಾಟಿಸುವುದಿಲ್ಲ. ಆ ನಾರಿಯರು ಹೋರಾಟಗಾರ್ತಿಯರು, ದಿಟ್ಟೆಯರು – ಅಲ್ಲಿ ಯಶಸ್ವಿಯಾಗುತ್ತಾರೆ ಎಂಬುದೇ ಅವರ ರಚನೆಯ ವೈಶಿಷ್ಟ್ಯ. 'ಅನುರಕ್ತೆ'ಯ ಸುಮಿತ್ರಾ, 'ಉತ್ತರಾಯಣ'ದ ಹೇಮಾ, 'ಹೇಮಂತಗಾನ'ದ ಭಾರತಿ, 'ವಾತ್ಸಲ್ಯಪಥ'ದ ಮಾಲತಿ ಮೊದಲಾದವರಿಗಿಂತ 'ಬಂಡಾಯ'ದ ಯಾಮಿನಿ, 'ಹೆಜ್ಜೆ', 'ಹೆಜ್ಜೆ ಗುರುತು'ವಿನ ನಾಯಕಿಯರು ಕೊಂಚ ಮುನ್ನಡೆದಿದ್ದಾರೆ. ಆದರೆ ಅವರೂ ಯಾರೂ ಲಕ್ಷ್ಮಣರೇಖೆ ದಾಟಿಲ್ಲ ಎಂಬುದೂ ಅಷ್ಟೇ ಸತ್ಯ. ಅದು ಅನಿವಾರ್ಯವೂ ಅಲ್ಲ. ಬಲ್ಲಾಳರು ಕಾಣಬೇಕೆಂದುಕೊಳ್ಳುವ ವಾಸ್ತವ ಅದೇ ಇರಬಹುದು. ಆ ಮಟ್ಟಿಗೆ ಬಲ್ಲಾಳರು ಗಾಂಧೀಜಿ ಅವರ ಸ್ತ್ರೀಸ್ವಾತಂತ್ರ್ಯದ ಪರಿಕಲ್ಪನೆಯನ್ನು ಇನ್ನಷ್ಟು ವಿಸ್ತರಿಸಿ ಕ್ರಿಯಾಮಾರ್ಗದಲ್ಲಿ ತಂದು ಅವರನ್ನು ಗಟ್ಟಿಗೊಳಿಸುವುದನ್ನು ಕಾಣಬಹುದಾಗಿದೆ.

ಇತ್ತೀಚೆಗೆ ಸುಂದರ ಪ್ರಕಾಶನದಿಂದ ಬಂದ 'ಮುಂಬಯಿಯ ನಂಟು ಮತ್ತು ಕನ್ನಡ' ಕೃತಿಯಲ್ಲಿ ಬಲ್ಲಾಳರ ಕನ್ನಡ ಭಾಷೆಯ ಬೆಳವಣಿಗೆ ಕುರಿತ ಚಿಂತನೆಗಳಿವೆ. ಚರ್ಚಿಸಲು ಯೋಗ್ಯವಾದ ಚಿಂತನೆಗಳವು. 'ಮುಂಬಯಿ ದಿನಾಂಕ' ಕೂಡ ಅಂಥ ಗಂಭೀರವಾದ ವಿಷಯಗಳಿಂದ ಕೂಡಿದ ಕೃತಿ.

ಬಲ್ಲಾಳರ ಎಲ್ಲ ಬರಹಗಳ ಬಗ್ಗೆ ವಿವರವಾಗಿ ಚರ್ಚಿಸಲು ಇಲ್ಲಿ ಆಗದಿದ್ದರೂ ಅವರ ತಾತ್ತ್ವಿಕ ತಳಹದಿ, ವಾಸ್ತವದ ಹುಡುಕಾಟ, ಅನುಭವ ಸತ್ಯಗಳ ಹಾದಿಯನ್ನು ಕಂಡರಿಸಲು ಪ್ರಯತ್ನಿಸಿದ್ದೇನೆ. ಅವರಿಗೆ ಇದು, ನಮ್ಮ ಪುಟ್ಟ ಗೌರವ; ನಮನ

ಡಾ|| ವಿಜಯಾ
ನಂ. ೩೭, ರಾಘವನಗರ, ಮುನೇಶ್ವರ ಬ್ಲಾಕ್, ಟಿಂಬರ್‌ಯಾರ್ಡ್ ಲೇಔಟ್, ಬೆಂಗಳೂರು - [illegible]

ಸರೋಜಿನಿ ನಾಯ್ಡು ನಮ್ಮ ದೇಶದ ಮೊದಲ ಮಹಿಳಾ ರಾಜ್ಯಪಾಲರು. ಸುಚೇತಾ ಕೃಪಲಾನಿ ದೇಶದಲ್ಲಿ ಮೊದಲ ಮಹಿಳಾ ಮುಖ್ಯಮಂತ್ರಿ. ಮೊದಲಗಿತ್ತಿಯರಾದ ಈ ಮಹಿಳಾಮಣಿಗಳನ್ನು ಪಡೆಯುವ ಭಾಗ್ಯ ಉತ್ತರ ಪ್ರದೇಶಕ್ಕೆ ಸಂದಿದೆ. ಅಷ್ಟೇ ಅಲ್ಲ, ಇದರೊಂದಿಗೆ ನಾಲ್ಕು ಬಾರಿ ರಾಜ್ಯದ ಮುಖ್ಯಮಂತ್ರಿಯಾಗಿ ಮೆರೆಯುವ ಭಾಗ್ಯ ಪಡೆದ ಮಾಯಾವತಿಯ ನಾಡಿದು. ಈ ಹಿನ್ನೆಲೆಯ ಲಕ್ನೋದಲ್ಲಿ ಇತ್ತೀಚೆಗೆ (ಫೆಬ್ರವರಿ ೭ರಿಂದ ೧೦) ರಾಷ್ಟ್ರೀಯ ಮಹಿಳಾ ಸಮಾವೇಶವೊಂದು ನಡೆದದ್ದು ಕಾಕತಾಳೀಯವೆನ್ನಬಹುದೆ ?

ಭಾರತದ ಮಹಿಳಾ ಚಳುವಳಿಯಲ್ಲಿ ಕ್ರಿಯೆ ಮತ್ತು ತತ್ವ ಒಟ್ಟೊಟ್ಟಿಗೆ ಸಾಗಿವೆ. ಕ್ರಿಯೆಗೆ ತಾತ್ವಿಕ ರೂಪ ಕೊಡುವ, ಶಿಕ್ಷಣದ ಭಾಗವಾಗಿಸುವ ಪ್ರಕ್ರಿಯೆಯಲ್ಲಿ ಹಲವಾರು ಹಂತಗಳನ್ನು ದಾಟಿ ಭಾರತದ ಮಹಿಳಾ ಚಳುವಳಿ ತನ್ನ ಹಾದಿಯನ್ನು ವಿಸ್ತರಿಸಿಕೊಳ್ಳುತ್ತಾ ಮುನ್ನಡೆದಿದೆ. ಈ ಹಾದಿಯಲ್ಲಿ ಗುರುತಿಸಬಹುದಾದ ಎರಡು ಪ್ರಮುಖ ಮೈಲಿಗಲ್ಲುಗಳೆಂದರೆ ಮೊದಲನೆಯದು ಪ್ರಖ್ಯಾತ ಸಂಸತ್ ಸದಸ್ಯೆಯಾಗಿದ್ದ ಫುಲರೇಣು ಗುಹಾ ನೇತೃತ್ವದ 'ಮಹಿಳೆಯರ ಸ್ಥಾನಮಾನವನ್ನು ಕುರಿತ ಸಮಿತಿ'ಯು ೧೯೭೪ರಲ್ಲಿ ನೀಡಿದ 'ಸಮಾನತೆಯತ್ತ' ಎಂಬ ವರದಿ ಮತ್ತೊಂದು ೧೯೮೨ರಲ್ಲಿ ಆರಂಭವಾದ ಭಾರತೀಯ ಮಹಿಳಾ ಅಧ್ಯಯನದ ಸಂಸ್ಥೆ



# ಬೆಳ್ಳಿ ಬೆಳಕಲ್ಲಿ ವಿಸ್ತರಿಸಿದ ಹಾದಿ

ಮಾರ್ಚ್ ೮ ಅಂತರರಾಷ್ಟ್ರೀಯ ಮಹಿಳಾ ದಿನ. 'ಹೊಸತು' ಓದುಗರಿಗೆ ಆ ದಿನದ ಶುಭಾಶಯಗಳು. ಆ ದಿನವು ಪ್ರತಿನಿಧಿಸುವ ಮಹತ್ತರ ಆಶಯಗಳಿಗೆ ಇಂಬುಗೊಡುವಂತೆ ಇತ್ತೀಚೆಗೆ ಒಂದು ರಾಷ್ಟ್ರೀಯ ಸಮಾವೇಶ ಜರುಗಿತು. ಅದರಲ್ಲಿ ಭಾಗವಹಿಸಿ ಪ್ರಬಂಧವನ್ನೊಂದು ಮಂಡಿಸಿದ ಡಾ॥ ಗಾಯತ್ರಿಯವರು ಪ್ರಬಂಧದ ಮೇಲಿನ ದೀರ್ಘವಾದ ಚರ್ಚೆಗೆ ಉತ್ತರ ನೀಡಿ ಸಮಾವೇಶದ ಆಕಾಂಕ್ಷೆಗಳಿಗೆ ವಿಶಾಲವಾದ ನೆಲೆ ಒದಗಿಸಿದರು. ಸಮಾವೇಶದ ಬಗ್ಗೆ ಒಂದು ಸಂಕ್ಷಿಪ್ತ ವರದಿ ಇಲ್ಲಿದೆ.

ಡಾ॥ ಎನ್. ಗಾಯತ್ರಿ

**ಸಮಾನತೆಯತ್ತ**

ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿನ ಮಹಿಳೆಯರ ಭಾಗವಹಿಸುವಿಕೆ ಮತ್ತು ನಂತರದ ದಿನಗಳಲ್ಲಿ ಸಂವಿಧಾನದತ್ತ ಹಕ್ಕುಗಳು ಮಹಿಳೆಯರ ಬದುಕಿನ ಮೇಲೆ ಬೀರಿದ ಪ್ರಭಾವವನ್ನು ಕುರಿತಂತೆ ಅಧಿಕೃತ ಅಧ್ಯಯನಗಳು ಹೆಚ್ಚು ನಡೆದಿರದ ಸಂದರ್ಭದಲ್ಲಿ 'ಸಮಾನತೆಯತ್ತ' ವರದಿಯು ನಮಗೆ ಉಪಯುಕ್ತ ದಾಖಲೆಯಾಗಿ ಕಾಣಿಸುತ್ತದೆ. ೧೯೭೨ರಲ್ಲಿ ಕೇಂದ್ರ ಶಿಕ್ಷಣ ಮತ್ತು ಸಮಾಜ ಕಲ್ಯಾಣ ಇಲಾಖೆಯು ಮಹಿಳೆಯರ ಸ್ಥಾನಮಾನವನ್ನು ಕುರಿತು ಅಧ್ಯಯನ ಮಾಡಿ ವರದಿಯನ್ನು ಒಪ್ಪಿಸಲು ಫುಲರೇಣು ಗುಹಾ ನೇತೃತ್ವದಲ್ಲಿ ರಾಷ್ಟ್ರೀಯ ಸಮಿತಿಯೊಂದನ್ನು ನೇಮಕ ಮಾಡಿತು. ಈ ಸಮಿತಿಯು ನೀಡಿದ ವಿಸ್ತೃತವಾದ ವರದಿಯು ಹೆಣ್ಣಿನ ಸ್ಥಾನಮಾನವನ್ನು ಅಭಿವೃದ್ಧಿಪಡಿಸುವ ದಿಕ್ಕಿನಲ್ಲಿ ನಡೆದಿರುವ ಪ್ರಯತ್ನಗಳು ತುಂಬ ಕಡಿಮೆಯವು ಎಂಬ ಅಂಶವನ್ನು ಹೊರಚೆಲ್ಲಿತು. ಆದ್ದರಿಂದಲೇ ೧೯೭೪ರಲ್ಲಿ ಪ್ರಕಟವಾದ 'ಸಮಾನತೆಯತ್ತ' ವರದಿಯನ್ನು ಭಾರತದ ಮಹಿಳಾ ಚಳುವಳಿಯ ಇತಿಹಾಸದಲ್ಲಿ ಮಹತ್ವದ ಘಟನೆಯನ್ನಾಗಿ ಗುರುತಿಸಲಾಗುತ್ತದೆ. ಅದು ಪ್ರಕಟಪಡಿಸಿದ ಅಂಕಿ ಸಂಖ್ಯೆಗಳು, ವಾಸ್ತವಾಂಶಗಳು ಮತ್ತು ಸಲಹೆಗಳು ಮಹಿಳೆಯರನ್ನು ಕುರಿತಂತೆ ಅಧ್ಯಯನ ನಡೆಸಲು ಸಮರ್ಥ ಸಾಧನವನ್ನು ಒದಗಿಸಿವೆ. ಈ ಸಮಿತಿಯಲ್ಲಿ ಕೆಲಸ ಮಾಡಿದ ಬಹುಪಾಲು ಸದಸ್ಯೆಯರೇ ಮುಂದೆ ಭಾರತೀಯ ಮಹಿಳಾ ಅಧ್ಯಯನ ಸಂಸ್ಥೆಯ ಹುಟ್ಟಿಗೆ ಕಾರಣವಾದದ್ದು ಗಮನಾರ್ಹವಾಗಿದೆ.

೧೯೭೦ರಿಂದ ೧೯೮೦ರ ಕಾಲಾವಧಿ ಭಾರತದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಸಂದರ್ಭದ ಉತ್ಕರ್ಷದ ಕಾಲವೂ ಹೌದು. ಮಹಿಳಾ ಅಧ್ಯಯನದ ಬೀಜ ಮೊಳೆತದ್ದು ಈ ಕಾಲಾವಧಿಯಲ್ಲಿ. ಆರಂಭದ ದಿನಗಳಲ್ಲಿ 'ಮಹಿಳಾ ಅಧ್ಯಯನ'ವನ್ನು ಶೈಕ್ಷಣಿಕ ಶಿಸ್ತನ್ನಾಗಿ ರೂಪಿಸಿ, ಬೆಳೆಸಿದವರಲ್ಲಿ ವಿದ್ವಾಂಸರು, ಕಾರ್ಯಕರ್ತರು ಮತ್ತು ನೀತಿ ನಿರೂಪಕರು – ಎಲ್ಲರೂ ಸೇರಿದ್ದರು. ಸ್ವಾತಂತ್ರ್ಯಾನಂತರವೂ ಬಹುಪಾಲು ಮಹಿಳಾ ಸಮುದಾಯವು ಅಭಿವೃದ್ಧಿ ಮತ್ತು ಪ್ರಗತಿಯ ಚೌಕಟ್ಟಿನಿಂದ ದೂರವೇ ಉಳಿದದ್ದು ಮತ್ತು ಅವರ ಸ್ಥಿತಿ ಇನ್ನೂ ಅಧೋಗತಿಗೆ ಇಳಿದಿರುವುದು ಈ ಎಲ್ಲ ಮಹಿಳಾಪರ ಮನಸ್ಸುಗಳಿಗೆ ಆಘಾತವುಂಟುಮಾಡಿತ್ತು. ಈ ಸಂದರ್ಭದಲ್ಲಿಯೇ ವಿಶ್ವಸಂಸ್ಥೆಯು ಘೋಷಿಸಿದ ಅಂತರ ರಾಷ್ಟ್ರೀಯ ಮಹಿಳಾ ವರ್ಷವೂ ಮಹಿಳಾಪರ ಚಟುವಟಿಕೆಗಳಿಗೆ ಒತ್ತುಕೊಟ್ಟಿತು. ಮಹಿಳಾ ಅಧ್ಯಯನದ ಆರಂಭದ ವಿದ್ವಾಂಸರು ಸಂವಿಧಾನದತ್ತ ಹಕ್ಕುಗಳ ಪ್ರಾಯೋಗಿಕತೆಯನ್ನು ಪ್ರಶ್ನಿಸಲು ಆರಂಭಿಸಿದರು. ಸಾಮಾಜಿಕ, ಸಾರ್ವಜನಿಕ ಜೀವನದಲ್ಲಿ ಮಹಿಳೆ ಅಗೋಚರಳಾಗಿರುವಂತೆ ಮಾಡಿರುವ ಸಾಂಸ್ಥಿಕ ರಚನೆಗಳನ್ನು ಪ್ರಶ್ನಿಸಿದರು.

**ಭಾರತೀಯ ಮಹಿಳಾ ಅಧ್ಯಯನ ಸಂಸ್ಥೆ**

ಶೈಕ್ಷಣಿಕ ಸಂಶೋಧನೆ ಮತ್ತು ಶಿಕ್ಷಣ – ಈ ಎರಡೂ ಕ್ಷೇತ್ರಗಳಲ್ಲಿ ಮಹಿಳೆಯರ ಹಿತಾಸಕ್ತಿಗಳನ್ನು ಗುರುತಿಸುವ ಮತ್ತು ಅಳವಡಿಸಿಕೊಳ್ಳಬೇಕೆಂಬ ಕಾಳಜಿಯ ಹಿಂದೆ ಭಾರತದ ಮಹಿಳಾ ಹೋರಾಟದ ಪರಿಶ್ರಮವು ಕೆಲಸ ಮಾಡಿದೆ. ಭಾರತೀಯ ಮಹಿಳಾ ಅಧ್ಯಯನ ಸಂಸ್ಥೆಯ ಉಗಮದ ಚಾರಿತ್ರಿಕತೆಯನ್ನು ೧೯೮೦ರ ಡಿಸೆಂಬರ್ ತಿಂಗಳಿನಲ್ಲೇ ಕಾಣಬಹುದಾಗಿದೆ. ಶ್ರೀಮತಿ ಮಾಧುರಿ ಶಾರವರು ಎಸ್.ಎನ್.ಡಿ.ಟಿ. ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದಾಗ ೧೯೮೦ರ ಡಿಸೆಂಬರ್‌ನಲ್ಲಿ ವೀಣಾ ಮಜುಂದಾರ್ ಮತ್ತು ಹೇಮಲತಾ ಸ್ವರೂಪ್‌ರವರು ಅವರನ್ನು ಸಂಪರ್ಕಿಸಿ ಮಹಿಳಾ ಅಧ್ಯಯನದ ವಿಷಯವನ್ನು ಶೈಕ್ಷಣಿಕ ಶಿಸ್ತನ್ನಾಗಿ ಪರಿಗಣಿಸುವಂತೆ ಒತ್ತಾಯಿಸಲು ಸಂಘಟನಾತ್ಮಕ ಪ್ರಯತ್ನವನ್ನು ನಡೆಸಿದರು. ಆ ವೇಳೆಗಾಗಲೇ ಮುಂಬೈಯ ಎಸ್.ಎನ್.ಡಿ.ಟಿ. ವಿಶ್ವವಿದ್ಯಾಲಯದಲ್ಲಿ ಮಹಿಳಾ ಅಧ್ಯಯನ ಕೇಂದ್ರವು ಆರಂಭವಾಗಿ ಕಾರ್ಯ ನಿರ್ವಹಿಸುತ್ತಿತ್ತು. ಇವೆಲ್ಲದರ ಅನುಭವದ ಆಧಾರದ ಮೇಲೆ ಮಹಿಳಾ ಅಧ್ಯಯನದ ರೂಪುರೇಷೆಗಳನ್ನು ಕುರಿತು ಚರ್ಚಿಸಲು ೧೯೮೧ರಲ್ಲಿ ಒಂದು ರಾಷ್ಟ್ರೀಯ ಸಮಾವೇಶವನ್ನು ಎಸ್.ಎನ್.ಡಿ.ಟಿ. ವಿಶ್ವವಿದ್ಯಾಲಯದ ಆವರಣದಲ್ಲಿಯೇ ನಡೆಸಲಾಯಿತು. ಸುಮಾರು ೪೦೦ ಮಂದಿ ಪ್ರತಿನಿಧಿಗಳು ಭಾಗವಹಿಸಿದ್ದ ಈ ಸಮಾವೇಶದಲ್ಲಿ ವಿಸ್ತಾರವಾದ ಚರ್ಚೆಯ ನಂತರ ರಾಷ್ಟ್ರೀಯ ಮಹಿಳಾ ಅಧ್ಯಯನ ಸಂಸ್ಥೆಯನ್ನು ಸ್ಥಾಪಿಸಬೇಕೆಂಬ ನಿರ್ಣಯವನ್ನು ಕೈಗೊಂಡ ಪರಿಣಾಮವಾಗಿ ೧೯೮೨ರಲ್ಲಿ ಅಖಿಲ ಭಾರತ ಮಟ್ಟದಲ್ಲಿ ಸದಸ್ಯತ್ವ ಹೊಂದಿದ ಸಂಸ್ಥೆಯಾಗಿ ಈ ಸಂಸ್ಥೆ ನೋಂದಾಯಿತವಾಯಿತು. ಮಹಿಳಾ ಅಧ್ಯಯನ ಮತ್ತು ಮಹಿಳಾ ಹೋರಾಟಗಳಲ್ಲಿ ಮುಂಚೂಣಿಯಲ್ಲಿದ್ದ ಮಹಿಳಾ ವಿದ್ವಾಂಸರು ಈ ಸಂಸ್ಥೆಯ ಆರಂಭದ ತಳಪಾಯವನ್ನು ನಿರ್ಮಿಸಿದ್ದಾರೆ. ಮಾಧುರಿ ಶಾ, ಹೇಮಲತಾ ಸ್ವರೂಪ್, ಜ್ಯೋತಿ ತ್ರಿವೇದಿ,

ಫುಲರೇಣು ಗುಹಾ, ಲೋತಿಕಾ ಸರ್ಕಾರ್, ದೇವಕಿ ಜೈನ್, ನೀರಾ ದೇಸಾಯಿ ಮತ್ತು ವೀಣಾ ಮಜುಂದಾರ್‌ರವರು ಆರಂಭದ ಮಹಿಳಾ ಅಧ್ಯಯನ ಸಂಸ್ಥೆಯ ಸಂಸ್ಥಾಪಕ ಸದಸ್ಯೆಯರಾದರು. ಎಸ್.ಎನ್.ಡಿ.ಟಿ. ವಿಶ್ವವಿದ್ಯಾಲಯದ ಅಂದಿನ ಕುಲಪತಿಗಳಾಗಿದ್ದ ಡಾ॥ ಮಾಧುರಿ ಶಾರವರೇ ಈ ಸಂಸ್ಥೆಯ ಆರಂಭದ ಅಧ್ಯಕ್ಷರಾಗಿದ್ದರು. ಈ ಸಂಸ್ಥೆಯು ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಹನ್ನೊಂದು ರಾಷ್ಟ್ರೀಯ ಸಮ್ಮೇಳನಗಳನ್ನು ನಡೆಸಿರುವುದಲ್ಲದೆ ರಾಷ್ಟ್ರದ ಹಲವಾರು ಭಾಗಗಳಲ್ಲಿ ವಿಚಾರ ಸಂಕಿರಣಗಳನ್ನು ಏರ್ಪಡಿಸಿ ಮಹಿಳಾ ಅಧ್ಯಯನದ ಶೈಕ್ಷಣಿಕ ಶಿಸ್ತನ್ನು ಬಲಪಡಿಸಲು ಶ್ರಮಿಸಿದೆ.

ಭಾರತೀಯ ಮಹಿಳಾ ಅಧ್ಯಯನ ಸಂಸ್ಥೆಯು ವೃತ್ತಿಪರ ಸಂಸ್ಥೆಯಾಗಿದ್ದು ಮಹಿಳಾ ಅಧ್ಯಯನವನ್ನು ಶೈಕ್ಷಣಿಕ ಸಂಸ್ಥೆಗಳೊಳಗೆ ಬಲಪಡಿಸುತ್ತಲೇ ಅದರ ಆಚೆಗೂ ಒಯ್ಯುತ್ತಾ ವಿಸ್ತಾರವಾಗಿ ಬೆಳೆಯಬೇಕೆಂಬ ಆಶಯ ಹೊಂದಿದೆ. ಮಹಿಳಾ ಸಮಾನತೆಯ ಆಶಯದೊಂದಿಗೆ ಮಹಿಳಾ ಚಳುವಳಿಯನ್ನು ಬಲಪಡಿಸಲು ಸಂಶೋಧನೆ, ಕಾರ್ಯಾಗಾರ, ಸಮ್ಮೇಳನಗಳನ್ನು ನಡೆಸುತ್ತಾ, ಅಂತಹುದೇ ಆಶಯವನ್ನು ಹೊಂದಿರುವ ಸಂಘ-ಸಂಸ್ಥೆಗಳೊಂದಿಗೆ ಸಂಬಂಧ ಸೇತುವನ್ನು ನಿರ್ಮಿಸಿಕೊಳ್ಳುತ್ತಾ ಕಾರ್ಯ ನಿರ್ವಹಿಸುತ್ತಿದೆ. ವಿವಿಧ ಕ್ಷೇತ್ರಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ವಿದ್ಯಾರ್ಥಿಗಳು, ಸಂಶೋಧಕರು, ವಿದ್ವಾಂಸರು, ಕಾರ್ಯಕರ್ತರು ಆಗಿರುವ ಸ್ತ್ರೀ ಪುರುಷರನ್ನೊಳಗೊಂಡ ಈ ಸಂಸ್ಥೆಗೆ ೨೦೦೭ರಲ್ಲಿ ಇಪ್ಪತ್ತೈದು ತುಂಬಿದ ಸಂಭ್ರಮ. ಈ ರಜತ ಮಹೋತ್ಸವದ ಸಂಭ್ರಮವನ್ನು ಆಚರಿಸಲು ನೆರೆದಿದ್ದು ಲಕ್ನೋದಲ್ಲಿ ನಾಲ್ಕು ದಿನಗಳ ಕಾಲ ನಡೆದ ರಾಷ್ಟ್ರೀಯ ಮಹಿಳಾ ಸಮಾವೇಶವು ಉತ್ಸವಕ್ಕೆ ವಿಶೇಷ ಮೆರುಗನ್ನು ನೀಡಿತ್ತು.

ಬೆಳ್ಳಿಹಬ್ಬದಲ್ಲಿ ಸಂಸ್ಥೆಯ ಸ್ಥಾಪಕರಾದ ಹಿರಿಯ ವಿದ್ವಾಂಸರನ್ನು ಸನ್ಮಾನಿಸಲಾಯಿತು. ಇವರೆಲ್ಲರೂ 'ಸಮಾನತೆಯೆಡೆಗೆ' ವರದಿಯ ಸದಸ್ಯರುಗಳಲ್ಲದೆ ಭಾರತೀಯ ಮಹಿಳಾ ಅಧ್ಯಯನ ಸಂಸ್ಥೆಯ ಸಂಸ್ಥಾಪಕರೂ ಆಗಿದ್ದವರೆನ್ನುವುದು ವಿಶೇಷ. ಕಾನ್ಪುರ ವಿಶ್ವವಿದ್ಯಾಲಯದ ಉಪಕುಲಪತಿಯಾಗಿದ್ದ ಡಾ॥ ಹೇಮಲತಾ ಸ್ವರೂಪ್, ದೆಹಲಿಯ ಭಾರತೀಯ ಸಾಮಾಜಿಕ ಸಂಸ್ಥೆಯ ಟ್ರಸ್ಟ್‌ನ ಸ್ಥಾಪಕ ನಿರ್ದೇಶಕರಾಗಿದ್ದ ಡಾ॥ ದೇವಕಿ ಜೈನ್, ದೆಹಲಿಯ ಸೆಂಟ್ರಲ್ ಡೆವಲಪ್‌ಮೆಂಟ್ ಸ್ಟಡೀಸ್‌ನ ಸ್ಥಾಪಕ ನಿರ್ದೇಶಕರಾಗಿದ್ದ ಡಾ॥ ವೀಣಾ ಮಜುಂದಾರ್‌ರವರುಗಳು ಈ ಸನ್ಮಾನಕ್ಕೆ ಪಾತ್ರರಾದವರು. ಲಕ್ನೋದ ಕೊರೆಯುವ ಚಳಿಯಲ್ಲಿ ಎಂಭತ್ತರ ಹರೆಯವನ್ನು ದಾಟಿದ ಈ ಮೂವರೂ ಸನ್ಮಾನಿತರು ವೇದಿಕೆಯೇರಿದಾಗ ಗಡಚಿಕ್ಕುವ ಚಪ್ಪಾಳೆಗಳೊಂದಿಗೆ ಸಭಾಂಗಣದಲ್ಲಿ ನೆರೆದಿದ್ದ ಬೃಹತ್ ಜನಸ್ತೋಮ ಅವರನ್ನು ಸ್ವಾಗತಿಸಿ ತನ್ನ ಹರ್ಷವನ್ನು ವ್ಯಕ್ತಪಡಿಸಿತು. ಎನ್.ಸಿ.ಆರ್.ಟಿ.ಯ ನಿರ್ದೇಶಕರಾದ ಪ್ರೊ॥ ಕೃಷ್ಣಕುಮಾರ್‌ರವರು 'ಮಕ್ಕಳಾಗಿ ಹುಡುಗಿಯರು' ಎಂಬ ವಿಷಯವನ್ನು ಕುರಿತಂತೆ ಉಪನ್ಯಾಸ ನೀಡಿದರು. ಸಂಸ್ಥೆಯ ಸಂಸ್ಥಾಪಕ ಅಧ್ಯಕ್ಷೆಯಾಗಿದ್ದ ಮಾಧುರಿ ಶಾ ನೆನಪಿನ ದತ್ತಿ ಉಪನ್ಯಾಸವಿದು.

ಇಂದು ಮಹಿಳಾ ಅಧ್ಯಯನದ ಚಳುವಳಿಯು ಎದುರಿಸುತ್ತಿರುವ ಸವಾಲುಗಳನ್ನು ಚರ್ಚಿಸುವ ಅವಕಾಶವನ್ನು ಈ ಸಮ್ಮೇಳನ ತನ್ನ ನಾಲ್ಕು ದಿನದ ವಿಚಾರಸಂಕಿರಣ ಮತ್ತು ಆಯ್ದ ವಿಷಯಗಳ ಚರ್ಚೆಯಲ್ಲಿ ನಡೆಸಿತು. ವಿವಿಧ ಸಂಸ್ಥೆ, ಸಂದರ್ಭಗಳಲ್ಲಿ ಉತ್ಪತ್ತಿಯಾಗುವ ವಿವಿಧ ಕ್ಷೇತ್ರಗಳ ಜ್ಞಾನರಾಶಿಯ ಮೇಲೆ ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಯಾವ ರೀತಿಯ




*(ಎ-ಬ) ಲಕ್ನೋ ವಿ. ವಿ. ಕುಲಪತಿ, ದೇವಕಿ ಜೈನ್, ವೀಣಾ ಮಜುಂದಾರ್ ಮತ್ತು ಹೇಮಲತಾ ಸ್ವರೂಪ್*

ಮಧ್ಯಪ್ರವೇಶ ಮಾಡಿ ಸಮಾಜ ಪರಿವರ್ತನೆಗೆ ಸಾಧನವಾಗಬಲ್ಲುದು ಎಂಬುದು ಈ ಸಮ್ಮೇಳನ ಚರ್ಚಿಸಬಯಸಿದ ಮುಖ್ಯ ವಿಷಯವಾಗಿತ್ತು. ಮಹಿಳಾ ಅಧ್ಯಯನ ಮತ್ತು ಚಳುವಳಿಗಳು ಶಿಕ್ಷಣ ಕ್ಷೇತ್ರವನ್ನು ಅದು ಔಪಚಾರಿಕವಿರಲಿ, ಅನೌಪಚಾರಿಕವಾಗಿರಲಿ, ಪ್ರಾಥಮಿಕ ಹಂತದಿಂದ ಉನ್ನತ ಶಿಕ್ಷಣದವರೆಗೂ ತೀಕ್ಷ್ಣವಾಗಿ ವಿಮರ್ಶಿಸುತ್ತಲೇ ಬಂದಿದೆ. ಇಂದು ಸ್ಥಳೀಯ ಮತ್ತು ಜಾಗತಿಕ ಬೆಳವಣಿಗೆಗಳು ಶೈಕ್ಷಣಿಕ ರಚನೆಗಳಲ್ಲಿ ಮತ್ತು ನೀತಿಗಳಲ್ಲಿ ಆಗುತ್ತಿರುವ ಬದಲಾವಣೆಯನ್ನು ಮತ್ತು ಅವು ಮಹಿಳಾ ಅಧ್ಯಯನದ ಭವಿಷ್ಯದ ಮೇಲೆ ಬೀರಲಿರುವ ಪರಿಣಾಮವನ್ನು ಗಂಭೀರವಾಗಿ ಪರಿಗಣಿಸುವಂತೆ ಒತ್ತಾಯಿಸುತ್ತದೆ. ಇಂತಹ ಸಂದರ್ಭದಲ್ಲಿ ಮಹಿಳೆಯರ ಇಲ್ಲಿಯವರೆಗಿನ ಸಾಧನೆಗಳನ್ನು ವಿಮರ್ಶಿಸುತ್ತಲೇ ಹೊಸ ಸಾಧ್ಯತೆಗಳನ್ನು ಶೋಧಿಸುವ ವಿವಿಧ ಪ್ರಕ್ರಿಯೆಗಳ ಬಗ್ಗೆ ವಿಸ್ತೃತವಾದ ಚರ್ಚೆ ನಡೆಯಿತು. ಈ ಚರ್ಚೆಗಳಲ್ಲಿ ಮಹಿಳಾ ಅಧ್ಯಯನ ಕ್ಷೇತ್ರದಲ್ಲಿ ವ್ಯಾಪಕವಾದ ಸಂಶೋಧನಾ ಕಾರ್ಯ ನಡೆಸಿರುವ ವಿದ್ವಾಂಸರಾದ ಉಮಾ ಚಕ್ರವರ್ತಿ, ತೇಜಸ್ವಿನಿ ನಿರಂಜನ, ಜಾನಕಿ ನಾಯರ್, ಸೂಸಿ ಥಾರು, ಮೈತ್ರೇಯಿ ಕೃಷ್ಣರಾಜು ಮುಂತಾದವರು ತಮ್ಮ ಪ್ರಬಂಧಗಳನ್ನು ಮಂಡಿಸಿ ಚರ್ಚೆಯಲ್ಲಿ ಭಾಗವಹಿಸಿದರು. ಈ ಸಮ್ಮೇಳನದ ವಿಶೇಷವಾಗಿ ಉತ್ತರ ಪ್ರದೇಶದಲ್ಲಿ ಮಹಿಳೆಯರ ಸ್ಥಿತಿಗತಿಯನ್ನು ಕುರಿತಂತೆ ವಿಚಾರ ಸಂಕಿರಣವಿತ್ತು. ಲಕ್ನೋ ವಿಶ್ವವಿದ್ಯಾಲಯದ ವಿದ್ವಾಂಸರುಗಳು ಮತ್ತು ಮಹಿಳಾ ನಾಯಕಿ ಸುಭಾಷಿಣಿ ಆಲಿಯವರು ಮಾತನಾಡಿ ಉತ್ತರ ಪ್ರದೇಶದ ಮಹಿಳೆಯರ ಸ್ಥಾನಮಾನದ ಒಟ್ಟು ಚಿತ್ರವನ್ನು ಸಭೆಯ ಮುಂದಿಟ್ಟರು. ಅಧಿಕಾರದ ಉನ್ನತ ಸ್ಥಾನಗಳನ್ನು ಇಲ್ಲಿನ ಮಹಿಳೆಯರು ಅಲಂಕರಿಸಿದ್ದರೂ, ಬೇರೆ ರಾಜ್ಯಗಳಿಗಿಂತಲೂ ಇಲ್ಲಿನ ಮಹಿಳೆಯರ ಸ್ಥಿತಿ ಶೋಚನೀಯವಾಗಿರುವುದು ಇಲ್ಲಿನ ಚರ್ಚೆಗಳಲ್ಲಿ ವ್ಯಕ್ತವಾಯಿತು.

ಸುಮಾರು ೫೦೦ ಪ್ರತಿನಿಧಿಗಳನ್ನೊಳಗೊಂಡ ಈ ಸಮಾವೇಶದಲ್ಲಿ ನೆರೆಯ ಬಾಂಗ್ಲಾ ಮತ್ತು ಶ್ರೀಲಂಕಾದ ಪ್ರತಿನಿಧಿಗಳಲ್ಲದೆ, ಇಂಗ್ಲೆಂಡಿನಿಂದಲೂ ಪ್ರತಿನಿಧಿಗಳು ಆಗಮಿಸಿದ್ದರು. ಸುಮಾರು ಒಂಬತ್ತು ವಿವಿಧ ವಿಷಯಗಳಿಗೆ ಸಂಬಂಧಪಟ್ಟಂತೆ ಸಮಾನಾಂತರವಾಗಿ ನಡೆದ ವಿಚಾರಗೋಷ್ಠಿಗಳಲ್ಲಿ ಸುಮಾರು ನೂರು ಭಾಷಣಕಾರರು ಭಾಗವಹಿಸಿದ್ದು, ಚರ್ಚೆಗಳು ಅತ್ಯಂತ ಗಂಭೀರವಾಗಿ, ಕೆಲವೊಮ್ಮೆ ತೀಕ್ಷ್ಣವಾದ ವಾದ-ಸಂವಾದಗಳಲ್ಲಿ ನಡೆದದ್ದು ಸಮ್ಮೇಳನದ ಮುಖ್ಯ ಅಂಶವಾಗಿತ್ತು. ಮಹಿಳೆಯ ಅಭಿವೃದ್ಧಿ ಮಾದರಿಗಳು, ಅವರ ಮೇಲೆ ನಡೆಯುವ ಹಿಂಸೆಯ ವಿವಿಧ ಸ್ವರೂಪಗಳು, ಜಾತಿ, ಬುಡಕಟ್ಟು ಮತ್ತು ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದ ಮಹಿಳೆಯರ ವಿಶೇಷ ಸಮಸ್ಯೆಗಳು – ಇವುಗಳ ಚರ್ಚೆ ಚಳುವಳಿಯ ಹಿನ್ನೆಲೆಯಲ್ಲಿ ಬಹುಮುಖ್ಯವೆನಿಸಿದವು. ಮಹಿಳಾ ಅಧ್ಯಯನದ ಪಠ್ಯ, ವಿಧಾನ ಮುಂತಾದ ಅಕೆಡೆಮಿಕ್ ಚರ್ಚೆಗಳಲ್ಲದೆ, ಸಾಹಿತ್ಯ, ಕಲೆ ಮತ್ತು ರಾಜಕೀಯ ಬರವಣಿಗೆಗಳಲ್ಲಿ ಮೂರ್ತಗೊಳ್ಳುವ ಹೆಣ್ಣಿನ ಪ್ರತಿನಿಧೀಕರಣವನ್ನು ಕುರಿತಂತೆಯೂ ವ್ಯಾಪಕ ಚಿಂತನ ಮಂಥನ ಇಲ್ಲಿ ನಡೆದಿತ್ತು. ವಿಜ್ಞಾನ ಮತ್ತು ತಾಂತ್ರಿಕತೆಯು ಹೆಣ್ಣಿನ ಮೇಲೆ ಬೀರಿರುವ ಪರಿಣಾಮ ಗಂಭೀರವಾದ ಚರ್ಚೆಗೆ ಎಡೆಮಾಡಿಕೊಟ್ಟಿತು. ಲೈಂಗಿಕತೆಯ ಸಮಸ್ಯೆಗಳನ್ನು ಹೊಸ ಅರ್ಥದಲ್ಲಿ ಶೋಧಿಸುವ ಮತ್ತು ಸಲಿಂಗಕಾಮಿಗಳ ಬದುಕಿನ ಪ್ರಶ್ನೆಗಳನ್ನು ಇಲ್ಲಿ ಚರ್ಚಿಸಲಾಯಿತು. ಎಲ್ಲಕ್ಕಿಂತ ಮುಖ್ಯವಾಗಿ ಸಿದ್ಧಾಂತ ಮತ್ತು ಕ್ರಿಯೆ – ಈ ಎರಡರ ಬೆಸುಗೆಯ ಪ್ರಕ್ರಿಯೆಯನ್ನು ವ್ಯಾಪಕವಾಗಿ ಚರ್ಚೆಗೆ ಒಳಗುಮಾಡಲಾಯಿತು. ದೇಶದ ಬಹುಭಿನ್ನ ಪ್ರಾತಿನಿಧ್ಯವಿದ್ದ ಈ ಸಮಾವೇಶದಲ್ಲಿ ಶಿಕ್ಷಣ ಕ್ಷೇತ್ರದ ವಿದ್ವಾಂಸರುಗಳಲ್ಲದೆ ವಿದ್ಯಾರ್ಥಿಗಳು, ಕಾರ್ಯಕರ್ತರು, ಹೋರಾಟಗಾರರು ಭಾಗವಹಿಸಿದ್ದುದು ಇಂದು ಮಹಿಳೆಯನ್ನು ಕುರಿತ ಆರೋಗ್ಯಕರ ಚಿಂತನೆ ಮತ್ತು ಕ್ರಿಯೆ ಮನುಕುಲದ ಉಳಿವಿಗೆ ಅಗತ್ಯ ಎಂಬುದನ್ನು ಸಾರಿ ಹೇಳಿತು.

ಡಾ॥ ಎನ್. ಗಾಯತ್ರಿ
[illegible]

ಸಿನಿಮಾದ ಶಕ್ತಿ ಅಪರಿಮಿತವಾದುದು. ಜನರನ್ನು ತಲುಪುವ ಮತ್ತು ಜನರ ಮೇಲೆ ಪರಿಣಾಮವನ್ನು ಉಂಟು ಮಾಡುವ ದೃಷ್ಟಿಯಿಂದ ಈ ಮಾತನ್ನು ಹೇಳುತ್ತಿದ್ದೇನೆ. ಜನ ಸಮುದಾಯದ ಜೊತೆಗಿನ ಸಂಬಂಧವನ್ನು ಗಮನಿಸಿದಾಗ ಸಿನಿಮಾ, ನಿಜವಾದ ಅರ್ಥದಲ್ಲಿ ಸಮೂಹ ಮಾಧ್ಯಮ. ಆದ್ದರಿಂದ ಸಿನಿಮಾವನ್ನು ಸಮೂಹ ಸನ್ನಿಯ ಮಾಧ್ಯಮ ವಾಗದಂತೆ ಎಚ್ಚರವಹಿಸುವ, ಸಮೂಹ ಪ್ರಜ್ಞೆಯ ಮಾಧ್ಯಮ ವಾಗುವಂತೆ ಕ್ರಿಯಾಶೀಲರಾಗುವ ಜವಾಬ್ದಾರಿ ನಮ್ಮ ಮೇಲಿದೆ. ಬುದ್ಧಿಜೀವಿಗಳು ಮತ್ತು ವಿವಿಧ ಸೃಜನಶೀಲ ಮಾಧ್ಯಮಗಳಲ್ಲಿ ಮಗ್ನರಾದ ಕ್ರಿಯಾಶೀಲರು ಸಿನಿಮಾವನ್ನು ಗಂಭೀರವಾಗಿ ಪರಿಗಣಿಸುವ ಅಗತ್ಯವಿದೆ. ಹಾಗೆ ನೋಡಿದರೆ, ಆರಂಭದ ದಿನಗಳಲ್ಲಿ ಸಿನಿಮಾವನ್ನು 'ಕಲೆ'ಯೆಂದು ಒಪ್ಪಿಕೊಂಡಿರಲಿಲ್ಲ. ಸಿನಿಮಾವು ಕೇವಲ ನಕಲು ಮಾಡುತ್ತದೆಯೆಂದೂ, ಅದು ತಂತ್ರಜ್ಞಾನ ಪ್ರಧಾನ ವೆಂದೂ ಕಾರಣ ಕೊಡುತ್ತ ಕಲೆಯ ಪಟ್ಟಿಯಿಂದ ದೂರ ಇಡಲಾಗಿತ್ತು! ಕಾಲ ಕಳೆದಂತೆ ಸಿನಿಮಾದ ಸೃಜನಶೀಲತೆಯ ಅರಿವಾಗಿ, ಅದು ಸಹ ಒಂದು ಕಲಾ ಪ್ರಕಾರವೆಂದು ಪರಿಗಣಿತವಾಯಿತು. ಆಗ – ೧೯೪೦ರಲ್ಲಿ ಆಂಡ್ರ್ಯೂರ ಬ್ರೆಜಿನ್ ತನ್ನ ''ದಿ ಎವಲ್ಯೂಶನ್ ಆಫ್ ದಿ ಲ್ಯಾಂಗ್ವೇಜ್ ಆಫ್ ಸಿನೆಮಾ'' ಎಂಬ ಪುಸ್ತಕದಲ್ಲಿ 'ಕಡೆಗೂ ಚಲನಚಿತ್ರ ನಿರ್ದೇಶಕ, ಕಾದಂಬರಿಕಾರರಿಗೆ ಸಮಾನವೆಂದು ಪರಿಗಣಿತನಾದ' ಎಂದು ಸಮಾಧಾನದ ನಿಟ್ಟುಸಿರು ಬಿಡುತ್ತಾನೆ. ಇದು ಹಳೆಯ ಕತೆ. ತೀರಾ ಇತ್ತೀಚಿನ ಕತೆ ಕೇಳಿ : ಕನ್ನಡ ಚಿತ್ರರಂಗದ ಮೇಲೆ ಪರಭಾಷಾ ಚಿತ್ರಗಳ ಹಾವಳಿ ಜಾಸ್ತಿಯಾಗಿದೆಯೆಂದೂ ಪ್ರದರ್ಶಕರು ಕನ್ನಡ ಚಿತ್ರಗಳಿಗೆ ಆದ್ಯತೆ ಕೊಡಬೇಕೆಂದೂ ಆಗ್ರಹಿಸಿ, ೨೦೦೪ರಲ್ಲಿ ಕನ್ನಡ ಚಿತ್ರರಂಗದ ಅನೇಕರು ಪ್ರತಿಭಟನೆಗೆ ಇಳಿದಾಗ ವಾದ ವಿವಾದಗಳು ನಡೆದವು. ಆಗ ಆಂಗ್ಲ ಪತ್ರಿಕೆ ಯೊಂದರಲ್ಲಿ ಪ್ರತಿಕ್ರಿಯಿಸಿದ ಕನ್ನಡದ ಕೆಲವು 'ಪ್ರತಿಷ್ಠಿತ ಸಾಹಿತ್ಯ ವಿಮರ್ಶಕರು' ಸಿನಿಮಾ ಎನ್ನುವುದು ಸಂಸ್ಕೃತಿಯ ಭಾಗವಲ್ಲ ಎಂದು ಅಭಿಪ್ರಾಯ ಮಂಡಿಸಿ ಸಿನಿಮಾವನ್ನು ಒಂದು ಸಂಸ್ಕೃತಿ ಎಂದು ಕರೆಯಲಾಗದು ಎಂಬ ನಿರ್ಣಯಾತ್ಮಕ ಹೇಳಿಕೆ ನೀಡಿದರು. ಬೌದ್ಧಿಕ ವಲಯದ ಕೆಲವರು ಸಿನಿಮಾದ ಬಗ್ಗೆ ತಳೆದಿರುವ ತಪ್ಪು ನಿಲುವು ಮತ್ತು ತಪ್ಪುಗ್ರಹಿಕೆಗೆ ಇದೊಂದು ನಿದರ್ಶನ. ನಮ್ಮ ಬೌದ್ಧಿಕ ವಲಯವು 'ಜನಪ್ರಿಯ ಸಂಸ್ಕೃತಿ'ಯ ಬಗ್ಗೆ ತಳೆಯುತ್ತ ಬಂದ ಅನಾದರಕ್ಕೂ ಇದೊಂದು ಉದಾಹರಣೆಯಾಗಬಲ್ಲದು.

ನಿಜ; ಸಿನಿಮಾ ಒಂದು ಉದ್ಯಮವೂ ಆಗಿದೆ. ಆದ್ದರಿಂದ ಅದನ್ನು ಸಂಸ್ಕೃತಿಯಲ್ಲ, ಸಂಸ್ಕೃತಿಯ ಭಾಗವಲ್ಲ ಎಂದು ಹೇಳಲಾಗದು. ಅಸಂಖ್ಯಾತ ಜನಸಾಮಾನ್ಯರು ಪ್ರೀತಿಸುವ ಕಾರಣಕ್ಕಾಗಿ ಜನಪ್ರಿಯ ಸಂಸ್ಕೃತಿಯ ಭಾಗವಾದ ಸಿನಿಮಾವನ್ನು 'ಜನಪ್ರಿಯ' ಎಂಬ ಕಾರಣ ಕ್ಕಾಗಿಯೇ ಅಗ್ಗದ ಪ್ರಕಾರವೆಂದು ತುಚ್ಛೀಕರಿಸಲಾಗದು. ಜನಪ್ರಿಯ ಸಂಸ್ಕೃತಿಯನ್ನು ಗಂಭೀರವಾಗಿ ಪರಿಗಣಿಸಿ ಅದನ್ನು ಜನಪರ ಸಂಸ್ಕೃತಿಯಾಗಿ ಜೀವಂತವಾಗಿಡುವ ಹೊಣೆಗಾರಿಕೆಯು ಬೌದ್ಧಿಕ ವಲಯದ ಮೇಲಿದೆ ಎಂಬುದನ್ನು ಮರೆಯಬಾರದು. ಯಾಕೆಂದರೆ ಜನ ಸಾಮಾನ್ಯರು ಮತ್ತು ಜನಪ್ರಿಯ ಸಂಸ್ಕೃತಿಯನ್ನು ಸಮೀಪಿಸದೆ ಸಾಮಾಜಿಕ ಚಲನಶೀಲತೆ ಸಾಧ್ಯವಾಗುವುದಿಲ್ಲ. ಆದ್ದರಿಂದ ಸಿನಿಮಾ ಮಾಧ್ಯಮವನ್ನು ಬಂಡವಳಿಗರ ಉದ್ಯಮ ಮಾತ್ರವಾಗಿ ಉಳಿಸಲು ನಮ್ಮ ಅನಾದರ ಅವಕಾಶ ಕೊಡಬಾರದು. ಜಾಗತೀಕರಣದ ಈ ಸನ್ನಿವೇಶದಲ್ಲಿ ನಮ್ಮ ಜವಾಬ್ದಾರಿ ಮತ್ತಷ್ಟು ಗುರುತರವಾದುದು.

ಜಾಗತೀಕರಣವು ಮೂಲತಃ ಬಂಡವಾಳೀಕರಣ. ಇದರ ಫಲವಾಗಿ ಸಾಮಾಜಿಕ-ಸಾಂಸ್ಕೃತಿಕ ಆದ್ಯತೆಗಳು ಪಲ್ಲಟಗೊಳ್ಳುತ್ತವೆ. ಬಂಡವಾಳವಿಲ್ಲದೆ ಸೃಷ್ಟಿ ಸಾಧ್ಯವಿಲ್ಲದ ಸಿನಿಮಾದ ಸ್ವರೂಪ ಮತ್ತು ಆದ್ಯತೆಗಳ ಮೇಲೆ ಜಾಗತೀ ಕರಣದ ಸೂಕ್ಷ್ಮಗಳು ಪ್ರಭಾವ ಬೀರುತ್ತವೆ. ಈ ಚರ್ಚೆ ಯನ್ನು ಮುಂದುವರೆಸುವುದಕ್ಕೆ ಮುಂಚೆ ಜಾಗತೀಕರಣದ ಮೂಲ ನೆಲೆಯನ್ನು ಕುರಿತಂತೆ ಸ್ಪಷ್ಟ ತಿಳುವಳಿಕೆಯನ್ನು ಪಡೆಯಬೇಕು. ಯಾಕೆಂದರೆ ನಾನು ಗಮನಿಸಿದಂತೆ ಬೌದ್ಧಿಕ ವಲಯದ ಕೆಲವರು ಕೈಗಾರಿಕೀಕರಣ ಮತ್ತು ಜಾಗತೀಕರಣಗಳ ನಡುವೆ ವ್ಯತ್ಯಾಸವಿಲ್ಲವೆಂಬಂತೆ ಅಥವಾ ವ್ಯತ್ಯಾಸದ ಅರಿವಿಲ್ಲದೆ ಮಾತನಾಡುವುದನ್ನು ಕೇಳಿದ್ದೇನೆ. ಈ ಹಿನ್ನೆಲೆಯಲ್ಲಿ ನನ್ನ ನಮ್ರ ತಿಳುವಳಿಕೆಗೆ ದಕ್ಕಿದಷ್ಟು ವಿಷಯಗಳನ್ನು ವಿನಯದಿಂದ ಸಾದರಪಡಿಸುತ್ತೇನೆ.

ನಾನು ಚರ್ಚಿಸಿದ ಅಥವಾ ಮಾತನಾಡಿದ ಸಂದರ್ಭ ದಲ್ಲಿ ಕೆಲವರು ಭಾವಿಸಿರುವುದು ಹೀಗೆಂದು ಅನ್ನಿಸಿತು: ಜಾಗತೀಕರಣ ಬಂದು ನಮ್ಮ ಗುಡಿ ಕೈಗಾರಿಕೆಗಳು ಹಾಳಾದವು; ಕುಲಕಸುಬುಗಳು ನಾಶವಾದವು. ಯಂತ್ರಗಳು ಮೇಲುಗೈ ಪಡೆದವು. ಬೆಸ್ತರಿಗೆ ದೋಣಿಯ ಬದಲು ಯಂತ್ರಚಾಲಿತ ವಾಹನಗಳು ಬೇಕಾಗಿ ಬಡ ಬೆಸ್ತನ ಬದುಕು ದುಸ್ತರವಾಯಿತು; ಕುಂಬಾರನ ಮಡಕೆ ಮಾಡುವ ಕಾಯಕಕ್ಕೆ ಧಕ್ಕೆಯಾಯಿತು. ಬುಟ್ಟಿ

# ಜಾಗತೀಕರಣ ಮತ್ತು ಸಿನಿಮಾ

ಪ್ರೊ॥ ಬರಗೂರು ರಾಮಚಂದ್ರಪ್ಪ

ಸಮಾಜದಲ್ಲಿ ವಿವಿಧ ವರ್ಗಗಳು, ವಿವಿಧ ಅಭಿರುಚಿಗಳು ಇರುವು ದರಿಂದ ಅದಕ್ಕನುಗುಣವಾದ ಸಿನಿಮಾಗಳು ನಿರ್ಮಾಣವಾಗುವುದು ಸಹಜ. ಇದರ ಫಲವಾಗಿ ಜನವಿರೋಧಿಯಾದ ವಸ್ತುವುಳ್ಳ ಸಿನಿಮಾಗಳು ಬರಬಹುದು; ಪ್ರತಿಗಾಮಿ ಪ್ರತಿಪಾದನೆಯ ಸಿನಿಮಾಗಳು ನಿರ್ಮಾಣವಾಗಬಹುದು. ಸಾಮಾಜಿಕ ಚಲನಶೀಲತೆಗೆ ವಿರುದ್ಧವಾದ ಜಡಸಂಪ್ರದಾಯ ಹಾಗೂ ಹಿಂಸೆಯನ್ನು ವೈಭವೀಕರಿಸುವ ಚಿತ್ರಗಳು ತಯಾರಾಗಬಹುದು. ನಾವು ಇವುಗಳ ನಿರ್ಮಾಣವನ್ನು ತಡೆಯಲಿಕ್ಕಾಗದು. ಆದರೆ ಇಂತಹ ಚಿತ್ರಗಳನ್ನು ಸೂಕ್ತ ವಿಮರ್ಶೆಗೆ ಒಳಪಡಿಸಿ ಜನರನ್ನು ಚಲನಶೀಲ ಚಿಂತನೆಗೆ ತೊಡಗಿಸುವ ಕೆಲಸವನ್ನು – ಸಿನಿಮಾ ಚಿಂತಕರು, ವಿಮರ್ಶಕರು, ಪತ್ರಕರ್ತರು, ಲೇಖಕರು – ಒಟ್ಟಾರೆ ಸಾಧ್ಯವಾದ ಎಲ್ಲರೂ ಮಾಡಬೇಕಾಗಿದೆ.



ಹೆಣೆಯುವವರ ಕಸುಬು ಕೈತಪ್ಪಿತು. ಕೃಷಿಯಲ್ಲಿ ಯಂತ್ರಗಳ ಬಳಕೆ ಪ್ರಧಾನವಾದಂತೆ ಬಡರೈತನಿಗೆ ಬದುಕು ಕಷ್ಟವಾಯಿತು – ಇತ್ಯಾದಿ. ಈ ಎಲ್ಲ ಸ್ಥಿತ್ಯಂತರಗಳು ಆಗಿರುವುದು, ಆಗುತ್ತಿರುವುದು ನಿಜ. ಆದರೆ ಇವು ಜಾಗತೀಕರಣವೆಂದು ಕರೆಯಲ್ಪಡುವ ಆರ್ಥಿಕ ಉದಾರೀಕರಣದ ಫಲವಾಗಿ ಸಂಭವಿಸಲಿಲ್ಲ. ಈ ಸ್ಥಿತ್ಯಂತರವು ಕೈಗಾರಿಕೀಕರಣದ ಸಂದರ್ಭದಲ್ಲೇ ಶುರುವಾಯಿತು. ಆದ್ದರಿಂದ ಕೈಗಾರಿಕೀಕರಣದ ಫಲಿತಗಳನ್ನು ಜಾಗತೀಕರಣಕ್ಕೆ ಆರೋಪಿಸುವ ಗ್ರಹಿಕೆ ಸರಿಯಲ್ಲ. ಆದರೆ ಕೆಲವರು ಈ ಅಂಶಗಳನ್ನು ಜಾಗತೀಕರಣದ ಫಲವೆಂಬಂತೆ ಬಿಂಬಿಸುವ ಸಿನಿಮಾ ಮತ್ತು ಸಾಹಿತ್ಯ ಸೃಷ್ಟಿ ಮಾಡಿರುವುದೂ ಉಂಟು. ಹೀಗಾಗಿ ಜಾಗತೀಕರಣ ಮತ್ತು ಕೈಗಾರಿಕೀಕರಣಗಳ ನಡುವಿನ ವ್ಯತ್ಯಾಸವನ್ನು ಅರ್ಥಮಾಡಿಕೊಳ್ಳುವುದು ಅಗತ್ಯ. (ನಾನು ಹೀಗೆ ಹೇಳುವಾಗ ಸ್ಥಿತ್ಯಂತರದ ಸ್ಥಿತಿಯನ್ನು ಅಸತ್ಯವೆಂದು ಪ್ರತಿಪಾದಿಸುತ್ತಿಲ್ಲ. ಈ ಸ್ಥಿತಿಗೆ ಕಾರಣವಾದದ್ದು ಕೈಗಾರಿಕೀಕರಣವೇ ಹೊರತು ಜಾಗತೀಕರಣವಲ್ಲವೆಂದು ತಿಳಿಸುವುದು ನನ್ನ ಅಪೇಕ್ಷೆ. ಜೊತೆಗೆ ಕೈಗಾರಿಕೀಕರಣವು ಜಾಗತೀಕರಣದಷ್ಟು ಅಪಾಯಕಾರಿಯಲ್ಲ ಎನ್ನುವುದು ನನ್ನ ಅಭಿಪ್ರಾಯ.)


**Statement about ownership and other particulars about newspaper**

**FORM IV**

| | | |
|---|---|---|
| 1. Place of publication | : | Bangalore |
| 2. Periodicity of its publication | : | Monthly |
| 3. Printer's Name | : | R. S. Rajaram |
| Nationality | : | Indian |
| Address | : | Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001 |
| 4. Publisher's Name | : | R. S. Rajaram |
| Nationality | : | Indian |
| Address | : | Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001 |
| 5. Editor's Name | : | G. Ramakrishna |
| Nationality | : | Indian |
| Address | : | Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001 |
| 6. Name and address of individuals who own the newspaper and partners and shareholders holding more than one percent of the total capital | : | Navakarnataka Publications (P) Ltd., Embassy Centre Crescent Road P. B. No. 5159 Bangalore - 560 001 (Sole Proprietors) |

I, R. S. Rajaram, hereby declare that the particulars given above are true to the best of my knowledge and belief.

Sd/-
R. S. Rajaram
Publisher

Date : 29-2-2008


ನಿಜ; ಕೈಗಾರಿಕೀಕರಣ ಮತ್ತು ಜಾಗತೀಕರಣ – ಈ ಎರಡೂ ನೆಲೆಗಳಿಗೆ ಬಂಡವಾಳ ತೊಡಗಿಸುವಿಕೆಯು ಒಂದು ಮುಖ್ಯ ಕ್ರಿಯೆ. ಆದರೆ ಒಟ್ಟು ಸ್ವರೂಪ ಮತ್ತು ಪರಿಣಾಮದಲ್ಲಿ ಸಾಕಷ್ಟು ಅಂತರವಿರುವುದನ್ನು ಕಾಣಬಹುದು. ಕೈಗಾರಿಕೀಕರಣವು ಗುಡಿ ಕೈಗಾರಿಕೆಗಳಿಗೆ ಹಿನ್ನಡೆಯುಂಟುಮಾಡಿತೆಂಬುದು ಸತ್ಯವಾದರೂ ಕುಲಮೂಲ ಕಸುಬಿನ ಕಲ್ಪನೆಯನ್ನು ದೊಡ್ಡ ಪ್ರಮಾಣದಲ್ಲಿ ಉಲ್ಲಂಘಿಸಲು ಕಾರಣವಾದದ್ದು ಒಂದು ಸಕಾರಾತ್ಮಕ ಬೆಳವಣಿಗೆ. ಜಾತಿವ್ಯವಸ್ಥೆಯ ಭಾಗವಾಗಿ ಬೆಳೆದ ಉತ್ಪಾದನಾ ವಿಧಾನಕ್ಕೆ ಕೈಗಾರಿಕೀಕರಣದಿಂದ ಧಕ್ಕೆಯಾದ್ದರಿಂದ ಜಾತಿ ವ್ಯವಸ್ಥೆಗೂ ಪೆಟ್ಟುಬಿದ್ದಿತು. ಜೊತೆಗೆ ಕೈಗಾರಿಕೀಕರಣದ ಫಲವಾಗಿ ಬಂದ 'ಸಾಮೂಹಿಕ ಉತ್ಪಾದನಾ ವಿಧಾನ'ವು ವಿವಿಧ ಸಾಮಾಜಿಕ ಮೂಲದವರು ಒಂದೇ ಸೂರಿನಡಿ ಕೆಲಸಮಾಡುವ ಅನಿವಾರ್ಯತೆಯನ್ನು ತಂದೊಡ್ಡಿತು. ಕೆಲಸದ ಸಮಯದಲ್ಲಾದರೂ ಅಸ್ಪೃಶ್ಯತೆಯ ಆಚರಣೆ ಸಾಧ್ಯವಿಲ್ಲವಾಯಿತು. ಮಧ್ಯಮ ವರ್ಗದ ಹುಟ್ಟಿಗೆ ಕಾರಣವಾಯಿತು. ಮುಖ್ಯವಾಗಿ, ಕೈಗಾರಿಕೀಕರಣವು ಮುಕ್ತ ಆರ್ಥಿಕ ಪದ್ಧತಿಯ ಸಿದ್ಧಾಂತವನ್ನು ಹೊತ್ತು ಬರಲಿಲ್ಲ. ನಮ್ಮ ದೇಶದಲ್ಲಿ ಮಿಶ್ರ ಆರ್ಥಿಕ ಪದ್ಧತಿ ಜಾರಿಗೆ ಬಂತು. ಆರ್ಥಿಕ ಕ್ಷೇತ್ರ ಹಾಗೂ ಉತ್ಪಾದನಾ ವಲಯದಲ್ಲಿ ಖಾಸಗಿ ಸರ್ವಾಧಿಕಾರಕ್ಕೆ ಅವಕಾಶವಿರಲಿಲ್ಲ. ಆದರೆ ಜಾಗತೀಕರಣದಲ್ಲಿ ಅಂತಹ ಸ್ಥಿತಿಯಿಲ್ಲ. ಇಲ್ಲಿ ಖಾಸಗಿಯವರದೇ ಮೇಲುಗೈ. ಕೈಗಾರಿಕೀಕರಣದ ಸಂದರ್ಭದಲ್ಲಿ ದುಡಿಯುವ ಜನರ ಸಂಘಟನೆಗೆ ಮುಕ್ತ ಅವಕಾಶವಿದ್ದರೆ, ಜಾಗತೀಕರಣದ ಸಂದರ್ಭದಲ್ಲಿ ಬಂಡವಾಳಿಗರ ಸಂಘಟನೆಗೆ ಮುಕ್ತ ಅವಕಾಶವಿದೆ. ಮಿಶ್ರ ಆರ್ಥಿಕ ಪದ್ಧತಿಯ ಬದಲು ಮುಕ್ತ ಆರ್ಥಿಕ ಪದ್ಧತಿ ಜಾರಿಯಲ್ಲಿದೆ. ಈ ಪದ್ಧತಿಯ ಸ್ವರೂಪವನ್ನು ಕುರಿತು ಹರ್ಬರ್ಟ್ ಅಪ್ತೇಕರ್ ಅವರು ತಮ್ಮ ''ದಿ ನೇಚರ್ ಆಫ್ ಡೆಮಾಕ್ರಸಿ : ಫ್ರೀಡಂ ಅಂಡ್ ರೆವಲ್ಯೂಶನ್'' ಎಂಬ ಪುಸ್ತಕದಲ್ಲಿ ತುಂಬಾ ಸ್ಪಷ್ಟವಾಗಿ ವಿವರಿಸಿದ್ದಾರೆ. ಅವರು ಸರಿಯಾಗಿ ಗುರುತಿಸಿರುವಂತೆ (ಜಾಗತೀಕರಣದ ಫಲವಾದ) ಮುಕ್ತ ಆರ್ಥಿಕ ಪದ್ಧತಿಯ ಉದ್ದೇಶ ಮತ್ತು ನೀತಿ ಹೀಗಿದೆ: 'ಸರ್ಕಾರವು ಬಂಡವಾಳಶಾಹಿಯನ್ನು ನಿಯಂತ್ರಿಸಬಾರದು. ಆದರೆ ಬಂಡವಾಳಶಾಹಿಯು ಸರ್ಕಾರವನ್ನು ನಿಯಂತ್ರಿಸಬಹುದು. ಆರ್ಥಿಕ ಅಸಮಾನತೆಯು ಸಮಾಜದ ಸಹಜ-ಸ್ವಾಭಾವಿಕ ಅಂಶ; ಸ್ವಾತಂತ್ರ್ಯವೆನ್ನುವುದು ರಾಜಕೀಯಕ್ಕೆ ಮಾತ್ರ ಸಂಬಂಧಿಸಿದ್ದು, ಆರ್ಥಿಕ ವಿಚಾರಗಳಿಗಲ್ಲ.'

ಹರ್ಬರ್ಟ್ ಅಪ್ತೇಕರ್ ಅವರು ಪ್ರಸ್ತಾಪಿಸಿದ ಅಂಶಗಳ ಅನುಭವ ನಮಗೀಗ ಆಗುತ್ತಿದೆ. ಜಾಗತೀಕರಣದ ಫಲವಾಗಿ ಸ್ವಾತಂತ್ರ್ಯ ಮತ್ತು ಸಮಾನತೆಯ ಕಲ್ಪನೆ ಪಲ್ಲಟಗೊಂಡಿದೆ. ಮೂಲತಃ ಆರ್ಥಿಕ ಕೇಂದ್ರಿತ ಜಾಗತೀಕರಣವು ಒಟ್ಟು ರಾಜಕೀಯ ವ್ಯವಸ್ಥೆಯನ್ನು ಬಂಡವಾಳಶಾಹಿ ಪರವಾಗಿ ತಿರುಗಿಸುತ್ತದೆ. ಮುಕ್ತ ಆರ್ಥಿಕತೆ, ಮುಕ್ತ ಮಾರುಕಟ್ಟೆಗಳ ಪರಿಣಾಮದಿಂದ ಸ್ಥಳೀಯ ಉತ್ಪನ್ನಗಳು ನಿರ್ಲಕ್ಷ್ಯಕ್ಕೆ ಒಳಗಾಗುತ್ತವೆ. ಇದರ ಫಲವಾಗಿ ರೈತರು, ಬೆಸ್ತರು, ಕರಕುಶಲಿಗರು ತಕ್ಕ ಮಾರುಕಟ್ಟೆಯಿಲ್ಲದೆ ಅಥವಾ ಮುಕ್ತ ಮಾರುಕಟ್ಟೆಯಲ್ಲಿ ಸ್ಪರ್ಧಿಸಲಾಗದೆ ನರಳುತ್ತಾರೆ. ಕೈಗಾರಿಕೀಕರಣದ ಫಲವಾಗಿ ಬಂದ ಯಂತ್ರನಾಗರಿಕತೆಗೆ ಒಗ್ಗಿಕೊಂಡಿದ್ದರೂ ಜಾಗತೀಕರಣದ ಫಲವಾಗಿ ಬಂದ ಮುಕ್ತ ಆರ್ಥಿಕ ನೀತಿಗೆ 'ಶ್ರಮ ಸಮುದಾಯಗಳು' ಬಲಿಪಶುಗಳಾಗುತ್ತಾರೆ. ಇದು ಜಾಗತೀಕರಣದ ನೇರ ದುಷ್ಪರಿಣಾಮ. ಆರ್ಥಿಕ ಸುಧಾರಣೆಯ ಹೆಸರಿನಲ್ಲಿ ಭೂಸುಧಾರಣೆ, ರಾಷ್ಟ್ರೀಕರಣದಂತ ಕಲ್ಪನೆಗಳು ನೆಲಕಚ್ಚಿ ಖಾಸಗೀಕರಣವು ಮುಕ್ತವಾಗಿ ವಿಜೃಂಭಿಸತೊಡಗಿದಂತೆ ಖಾಸಗಿ ಬದುಕು ಸಹ 'ಮುಕ್ತ'ವಾಗುತ್ತ ತನ್ನದೇ ಸಾಮಾಜಿಕ-ಸಾಂಸ್ಕೃತಿಕ ಪರಿಣಾಮಗಳಿಗೆ ಕಾರಣವಾಗುತ್ತದೆ. ಬದುಕಿನ ಆದರ್ಶಗಳು ಪಲ್ಲಟಗೊಳ್ಳುತ್ತವೆ. ಇದು ವಿಶೇಷವಾಗಿ ಸಿನಿಮಾದಂತಹ ಸಮೂಹ ಮಾಧ್ಯಮಗಳಲ್ಲಿ ಬೇಗ ಪ್ರತಿಫಲಿತವಾಗುತ್ತದೆ.

ಸಿನಿಮಾಗಳಲ್ಲಿ ಕಾಣಿಸಿಕೊಳ್ಳುವ ಹೊಸ ತಾಂತ್ರಿಕ ಸಾಧ್ಯತೆಗಳಿಗೆ ಜಾಗತೀಕರಣವು ಕಾರಣವಲ್ಲ; ಮುಂದುವರಿದ ಕೈಗಾರಿಕೀಕರಣದ ಶೋಧನಾತ್ಮಕತೆ ಕಾರಣ. ಆದರೆ ಜಾಗತೀಕರಣವು ಸಿನಿಮಾದ ಆತ್ಮಕ್ಕೆ ಲಗ್ಗೆ ಹಾಕುತ್ತದೆ. ಸಂವೇದನೆಗಳನ್ನು ಬದಲಾಯಿಸುತ್ತದೆ. ಜಾಗತೀಕರಣಕ್ಕೆ ಮುಂಚೆಯೇ ಸಿನಿಮಾದಲ್ಲಿ ಸಂವೇದನೆ ವರ್ಸಸ್ ಸಂಪಾದನೆಯ ಅಂಶ ಇತ್ತು. ಸಿನಿಮಾವನ್ನು ಮಾಧ್ಯಮ ಪ್ರಧಾನವಾಗಿ ಪರಿಗಣಿಸಿದವರು ಸಂವೇದನೆಗೂ ಉದ್ಯಮ ಪ್ರಧಾನವಾಗಿ ಪರಿಗಣಿಸಿದವರು ಸಂಪಾದನೆಗೂ ಆದ್ಯತೆ ನೀಡುತ್ತ ಬಂದಿದ್ದಾರೆ. ಈ ತಿಕ್ಕಾಟದ ನಡುವೆ ಮುಖ್ಯವಾಹಿನಿ ಚಿತ್ರಗಳು ಉದ್ಯಮ ಪ್ರಧಾನವಾಗಿದ್ದು ಸಹ ಕೆಲವು ಸಾರಿ ಸಂವೇದನೆಯನ್ನು ಕಾಪಾಡಿಕೊಳ್ಳುತ್ತ ಬಂದಿವೆ. ಅಷ್ಟರಮಟ್ಟಿಗೆ ಆರೋಗ್ಯಕರ ಸ್ಪರ್ಧೆಯಲ್ಲಿ ಚಿತ್ರರಂಗ ಬೆಳೆಯುತ್ತ ಬಂದಿದೆ. ಹಾಗೆ ನೋಡಿದರೆ ಉದ್ಯಮ ಪ್ರಧಾನವಾದ ಅನೇಕ ಮುಖ್ಯವಾಹಿನಿ ಚಿತ್ರಗಳು ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸಿವೆ. ವಿಧವಾ ವಿವಾಹ, ಅಂತರ್ಜಾತೀಯ ವಿವಾಹ, ವರದಕ್ಷಿಣೆ ವಿರೋಧ ಮುಂತಾದ ವಸ್ತುಗಳಲ್ಲದೆ ಸಾಮಾಜಿಕ

ಸಾಮರಸ್ಯ ಮತ್ತು ಸಮಾನತೆಗಳನ್ನು ಪ್ರತಿಪಾದಿಸಿವೆ. ಈ ಅಂಶಗಳು ನಮ್ಮ ಸಮಾಜದಲ್ಲಿ ಜಾಗೃತ ಪ್ರಜ್ಞೆಯಾಗಿ ಕೆಲಸ ಮಾಡುತ್ತ ಬಂದದ್ದರ ಫಲವಾಗಿಯೂ ಮುಖ್ಯ ವಾಹಿನಿ ಚಿತ್ರಗಳು ಸಾಮಾಜಿಕ ಕಾಳಜಿಯ ಕಥಾವಸ್ತುಗಳನ್ನು ಸ್ವೀಕರಿಸಿರಬಹುದು. ಆದರೆ ಮುಕ್ತ ಆರ್ಥಿಕತೆ, ಮುಕ್ತ ಮಾರುಕಟ್ಟೆಗಳ ಫಲವಾಗಿ ರೂಪುಗೊಳ್ಳುವ 'ಮುಕ್ತ ಸಂವೇದನೆಗಳು' ಸಾಮಾಜಿಕ ಕಾಳಜಿಯ ಕಥಾವಸ್ತುವನ್ನು ಕಡೆಗಣ್ಣಿಂದ ನೋಡುತ್ತವೆ. 'ಮುಕ್ತ ನಡವಳಿಕೆ'ಯ ಜೀವನ ಶೈಲಿಯನ್ನು ಆದರ್ಶವಾಗಿ ಸ್ವೀಕರಿಸುತ್ತವೆ. ಅವುಗಳನ್ನು ರೋಚಕವಾಗಿ, ನವಿರಾಗಿ, ಚಿತ್ರಿಸುವುದರ ಮೂಲಕ 'ಹೊಸ ಮಾದರಿ'ಗಳಾಗತೊಡಗುತ್ತವೆ. ಈ 'ಹೊಸ ಮಾದರಿ'ಗೆ ಸಾಮಾಜಿಕ-ನೈತಿಕ ಆಶಯಗಳು ಅಪ್ರಸ್ತುತವಾಗುತ್ತವೆ. ನಮ್ಮ ಸಿನಿಮಾಗಳಲ್ಲಿನ ಪ್ರೇಮಿಗಳಿಗೆ ಪಾರ್ಕುಗಳ ಬದಲು ಪಬ್‌ಗಳು ಪ್ರಿಯವಾಗುತ್ತವೆ. ಫ್ಯೂಡಲ್ ಕುಟುಂಬದ ವಿವಾಹೇತರ ಸಂಬಂಧದಲ್ಲೂ ಅಚಲ ಪ್ರೇಮ ನಿಷ್ಠೆ ತೋರುತ್ತ ಕುಡುಕನಾದ ಶರಚ್ಚಂದ್ರ ಚಟರ್ಜಿಯವರ ದೇವದಾಸ್ ಬದಲು ಚಟದ ದೇವದಾಸರು ಮುಖ್ಯರಾಗುತ್ತಾರೆ. ಆರ್ಥಿಕ ಖಾಸಗೀಕರಣದಲ್ಲಿ ಖಾಸಗಿಯಾದದ್ದೆಲ್ಲ ಸಾರ್ವಜನಿಕ ಸ್ಥಾನಕ್ಕೆ ಬಂದಂತೆ ವ್ಯಕ್ತಿಯ ಖಾಸಗಿತನವೆಲ್ಲ ಸಾರ್ವಜನಿಕವಾಗುತ್ತದೆ. ಮುಕ್ತ ಆರ್ಥಿಕತೆಯಂತೆ ಮುಕ್ತ ಮೈ ಬಯಲಾಗುತ್ತದೆ. ಮುಕ್ತ ಮಾರುಕಟ್ಟೆಯಲ್ಲಿ ಸ್ಪರ್ಧೆಯೇ ಮುಖ್ಯವಾಗಿ ಮನುಷ್ಯ ಮನಸ್ಸು ಸಂಕುಚಿತವಾಗುತ್ತದೆ. ಕೆಳ ಮಧ್ಯಮವರ್ಗ ಮತ್ತು ಕೆಳವರ್ಗಗಳ ಹತಾಶೆಯನ್ನು ತಣಿಸುವ ಉಪಾಯವಾಗಿ 'ಹಿಂಸೆ' ತೆರೆಯನ್ನು ತುಂಬುತ್ತದೆ. ಕ್ಲಬ್‌ನಲ್ಲಿ ಮಾತ್ರ ನಡೆಯುತ್ತಿದ್ದ ಕ್ಯಾಬರೆ ನೃತ್ಯ ಬೀದಿಯಲ್ಲಿ ನಡೆಯಲಾರಂಭಿಸುತ್ತದೆ. ಕ್ಯಾಬರೆ ನರ್ತಕಿಯರ ಸ್ಥಾನ ಚ್ಯುತಿಯಾಗಿ ನಾಯಕಿಯರೇ ಆ ಸ್ಥಾನವನ್ನು ತುಂಬುತ್ತಾರೆ. ಊಟಕ್ಕೆ ಪಲ್ಯದಂತಿದ್ದ ಅಂಶಗಳೆಲ್ಲ ಊಟವೇ ಆಗುತ್ತವೆ. ಕೊಲ್ಲುವ ಕ್ರೌರ್ಯದಲ್ಲಿ ಖುಷಿ ಪಡುವ, ಕಂಡವರ ಹೆಣ್ಣಿನ ಕಾಮದಲ್ಲಿ ಸುಖಿಸುವ ವಿಕೃತಿಗಳು ಆದರ್ಶ ಆಕೃತಿಗಳಾಗಿ ನೋಡುಗರ ಉತ್ಸಾಹ ಉಕ್ಕುತ್ತದೆ. ಬೇರೆಯವರ ಹೆಂಡತಿಯನ್ನೊ ಬೇರೆಯವರಿಗೆ ನಿಶ್ಚಿತಾರ್ಥವಾದ ಹೆಣ್ಣನ್ನೊ ಪ್ರೇಮಿಸಿ ಪರಿತಪಿಸುವ ನಾಯಕರು ತಾವೇ ಆದಂತೆ ಆನಂದಿಸುವ ಪ್ರವೃತ್ತಿ ಕಾಣುತ್ತದೆ. ಹಿಂಸೆ, ಕ್ರೌರ್ಯಗಳನ್ನು ಖಂಡಿಸಿದರೂ ಪ್ರೇಮದ ಹೆಸರಲ್ಲಿ ಕಾಮವನ್ನು ಕಟ್ಟಿಕೊಡುವ ನವಿರುತನಕ್ಕೆ ನವಿಲಾಗುವ ವಿಮರ್ಶೆಯ ವಿಲಾಸ ಕುಣಿಯುತ್ತದೆ.

ಈ ಎಲ್ಲ ವಿಲಾಸ ವಿಭ್ರಮಗಳ ಮಧ್ಯೆ ಸ್ಪಷ್ಟ ಸಾಮಾಜಿಕ ಕಾಳಜಿಯ ಸಿನಿಮಾಗಳಿಗೆ ಸಿನಿಕ ನೋಟ ಎದುರಾಗುತ್ತದೆ. ಮನಸ್ಸಿಗೆ ಮೋಸ ಮಾಡುವ ಮಾದರಿಗಳು ಮೇಲುಗೈ ಪಡೆದು ಚಿಂತನಶೀಲ, ಸೃಜನಶೀಲ ಸಿನಿಮಾಗಳು ನಿರ್ಲಕ್ಷ್ಯಕ್ಕೆ ಒಳಗಾಗುತ್ತವೆ. ಇದು ಜಾಗತೀಕರಣದ ಆರ್ಥಿಕ ರಾಜಕೀಯದ ಫಲವಾದರೆ ಸಿನಿಮೇತರ ಕಾರಣಗಳಿಗಾಗಿ ಕೆಲವು ಸಿನಿಮಾಗಳನ್ನು ಮೆಚ್ಚುವ, ಕೆಲವು ಸಿನಿಮಾಗಳನ್ನು ಕೊಚ್ಚುವ 'ಸಾಂಸ್ಕೃತಿಕ ರಾಜಕೀಯ'ವು ಮೊದಲಿಂದಲೂ ಸಂಪ್ರದಾಯಬದ್ಧವಾಗಿ ನಡೆದುಕೊಂಡುಬಂದಿದೆ. 'ಪೂರ್ವಾಗ್ರಹ ಪ್ರಭುಗಳು' ತಮಗೆ ಇಷ್ಟವಾದ ವ್ಯಕ್ತಿ ಮತ್ತು ವಸ್ತುಗಳ ಸಿನಿಮಾಗಳಲ್ಲಿ ಮಾತ್ರ ಶ್ರೇಷ್ಠತೆಯನ್ನು ಕಾಣುವ ಕ್ಷುಲ್ಲಕ ರಾಜಕೀಯಕ್ಕೇನೂ ಇಲ್ಲಿ ಕಡಿಮೆಯಿಲ್ಲ. ಈ ಮಧ್ಯೆ ನಿಜವಾದ ರಾಜಕೀಯ ಪ್ರಜ್ಞೆ ಮತ್ತು ಸಾಮಾಜಿಕ ಪ್ರಜ್ಞೆಯ ಸಿನಿಮಾಗಳು ಬದುಕಬೇಕಾಗಿದೆ. ಸಿನಿಮಾ ರಾಜಕೀಯ ಮತ್ತು ಸಿನಿಮಾದಲ್ಲಿ ರಾಜಕೀಯ – ಎರಡೂ ನೆಲೆಗಳು ಸಿನಿಮಾ ಮಾಧ್ಯಮದ ಭಾಗವಾಗಿವೆ. ನೇರವಾಗಿ ರಾಜಕೀಯ ವಸ್ತುವನ್ನು ಪಡೆಯದಿದ್ದರೂ ವಿಶಾಲಾರ್ಥದಲ್ಲಿ ಸಿನಿಮಾದ್ದೇ ಒಂದು ರಾಜಕೀಯ ಇರುತ್ತದೆ – ಸಿನಿಮಾಕ್ಕೆ ಒಂದು ಎಕನಾಮಿಕ್ಸ್ ಇದ್ದ ಹಾಗೆ. ಈ ಅಂಶವನ್ನು ಜೇಮ್ಸ್ ಮೊನೇಕೊ ಅವರು ''ಹೌ ಟು ರೀಡ್ ಎ ಫಿಲ್ಮ್'' ಎಂಬ ಗ್ರಂಥದಲ್ಲಿ ಹೀಗೆ ವಿವರಿಸುತ್ತಾರೆ : ''ಸಿನಿಮಾದ ಆರ್ಥಿಕತೆಯು ಅದರ ಮೂಲ ದ್ರವ್ಯವನ್ನು – ಅದರ ಅಭಿಪ್ರಾಯವನ್ನು – ನಿರ್ಧರಿಸುತ್ತದೆ; ಅದರಿಂದಾಗಿ ಆ ಸಿನಿಮಾದ ಸಂಭಾವ್ಯತೆಯನ್ನು ಸಹ. ಸಿನಿಮಾದ ರಾಜಕೀಯವು ಅದರ ವಿನ್ಯಾಸವನ್ನು ನಿರ್ಧರಿಸುತ್ತದೆ: ಪ್ರಪಂಚದೊಡನೆ ಅದು ಸಂಬಂಧ ಬೆಳೆಸಿಕೊಳ್ಳುವುದೇ ಹಾಗೆ. ನಾವು ಚಲನಚಿತ್ರವನ್ನು ಅರ್ಥೈಸಿಕೊಳ್ಳುತ್ತೇವೆ, ಅನುಭವಿಸುತ್ತೇವೆ ಮತ್ತು ಎರಡು ವಿಭಿನ್ನ ಪರಿಪ್ರೇಕ್ಷ್ಯಗಳಿಂದ ಅದರಲ್ಲಿ ಮಗ್ನರಾಗುತ್ತೇವೆ. ಮಾನವನ ಅನುಭವವನ್ನು ಚಲನಚಿತ್ರವು ಹೇಗೆ ಪ್ರತಿಫಲಿಸುತ್ತದೆ ಮತ್ತು ಅದರೊಡನೆ ಹೇಗೆ ಸಮ್ಮಿಳಿತವಾಗುತ್ತದೆ ಎಂಬುದನ್ನು ಚಲನಚಿತ್ರದ 'ಸಾಮಾಜಿಕ-ರಾಜಕೀಯ' ಅಂಶವು ಸಾಮಾನ್ಯೀಕರಿಸಿ ವಿವರಿಸುತ್ತದೆ. ಅದೇ, ನಾವು ಅದರೊಡನೆ ವೈಯಕ್ತಿಕವಾಗಿ ಮತ್ತು ನಿರ್ದಿಷ್ಟವಾಗಿ ಹೇಗೆ ಗುರುತಿಸಿಕೊಳ್ಳುತ್ತೇವೆ ಎಂಬುದನ್ನು ಚಲನಚಿತ್ರದ ರಾಜಕೀಯ ಮನೋಭೂಮಿಕೆಯು ತಿಳಿಸುತ್ತದೆ.'' (ಪುಟ ೨೬೧)

ಇಲ್ಲಿ, ಜೇಮ್ಸ್ ಮೊನೇಕೊ ಅವರು 'ಸಿನಿಮಾದ ರಾಜಕೀಯ'ವನ್ನು ಅದು ಜಗತ್ತಿನ ಜೊತೆ ಪಡೆದ ಸಂಬಂಧದ ಮೂಲಕ ಕಾಣಬಯಸುತ್ತಾರೆ. ಅಂದರೆ ಒಂದು ಸಿನಿಮಾ ಮಾನವನ ಅನುಭವಗಳನ್ನು ಹೇಗೆ ಒಳಗೊಳ್ಳುತ್ತದೆ ಮತ್ತು ಹೇಗೆ ಪ್ರತಿಫಲಿಸುತ್ತದೆ ಎಂಬ ನೆಲೆಯಲ್ಲಿ ಅದರ 'ಸಮಾಜೋರಾಜಕೀಯ' ಕಂಡುಬರುತ್ತದೆ ಅಥವಾ ಸಿನಿಮಾದ 'ಸಮಾಜೋರಾಜಕೀಯ'ವು ಮಾನವನ ಅನುಭವಗಳನ್ನು ಒಳಗೊಂಡ ಮತ್ತು ಪ್ರತಿಫಲಿಸಿದ ರೀತಿಯನ್ನು ವಿವರಿಸುತ್ತದೆ. ವೈಯಕ್ತಿಕ ಹಾಗೂ ನಿರ್ದಿಷ್ಟ ಸಂಬಂಧವನ್ನು ಸಿನಿಮಾದ 'ಮನೋರಾಜಕೀಯ'ವು ವಿವರಿಸುತ್ತದೆ.

ನನಗನ್ನಿಸುತ್ತದೆ: ಎಷ್ಟೋ ಸಿನಿಮಾಗಳು 'ಸಮಾಜೋ ರಾಜಕೀಯ'ವನ್ನು ಪ್ರಧಾನವಾಗಿ ಪರಿಗಣಿಸದೆ ಇರಬಹುದು ಅಥವಾ ತಮ್ಮ ದೃಷ್ಟಿ ಅದಲ್ಲ ಎಂದು ನಿರ್ದೇಶಕರು ಹೇಳಬಹುದು. ಹೀಗೆ, ಸಮಾಜೋರಾಜಕೀಯದ ಸಂಬಂಧಕ್ಕೆ ದೂರವಾಗಿರುವುದೇ ಒಂದು 'ಸಮಾಜೋರಾಜಕೀಯ' – ಎಂದು ನನಗನ್ನಿಸುತ್ತದೆ. ಯಾಕೆಂದರೆ, ಮನುಷ್ಯನ ಅನುಭವಗಳು ರೂಪುಗೊಳ್ಳುವುದು ಒಂದು ನಿರ್ದಿಷ್ಟ ಸಮಾಜದಲ್ಲಿ ಮತ್ತು ಆ ನಿರ್ದಿಷ್ಟ ಸಮಾಜ ರೂಪುಗೊಳ್ಳುವುದು ನಿರ್ದಿಷ್ಟ ರಾಜಕೀಯ ಸಂರಚನೆಯ ಒತ್ತಾಸೆಯಲ್ಲಿ. ಸಮಾಜ, ಸಮಾಜ ಸಂರಚನೆಯ ರಾಜಕೀಯ, ಅದರ ಆರ್ಥಿಕ ಆಯಾಮ ಇವೆಲ್ಲವೂ ಪರಸ್ಪರ ಸಂಬಂಧವುಳ್ಳ ಅಂಗಗಳು. ತನಗೆ ಮತ್ತು ತನ್ನ ಸಿನಿಮಾಕ್ಕೆ ಯಾವುದೇ ಸಾಮಾಜಿಕ ನಿಲುವಿಲ್ಲ, ಯಾವುದೇ ರಾಜಕೀಯ ನಿಲುವಿಲ್ಲ, ತಾನು ನಿರ್ಲಿಪ್ತ ಎಂದು ಹೇಳುವ ನಿರ್ದೇಶಕನದೂ ಒಂದು ರಾಜಕೀಯವೇ ಆಗಿರುತ್ತದೆ. ನಿರ್ದಿಷ್ಟ ನಿಲುವನ್ನು ನಿರೀಕ್ಷಿಸುವ ಸಿನಿಮಾಗಳಲ್ಲೂ ತಾನು ನಿರ್ಲಿಪ್ತ ಎಂದು ಹೇಳುವ ಮೂಲಕ ಜಾಣತನದ ನಿಲುವನ್ನು ತಳೆದಂತಾಗುವುದರಿಂದ, ಸೂಕ್ಷ್ಮತೆಯ ಸೋಗಿನಲ್ಲಿ ಸರ್ವಮಾನ್ಯತೆ ಪಡೆಯುವ ರಾಜಕೀಯ ತಂತ್ರವಾಗಿ 'ನಿರ್ಲಿಪ್ತತೆ'ಯು ಬಳಕೆಯಾಗುತ್ತದೆ. ನಿರ್ಲಿಪ್ತತೆ ನಪುಂಸಕತ್ವವಾಗಬಾರದು. ಪೂರ್ವನಿಶ್ಚಿತ ನಿಲುವುಗಳ ಮೂಲಕವೇ ವಸ್ತುವೊಂದನ್ನು ಪ್ರವೇಶಿಸುವ ಬದಲು ನಿರ್ಲಿಪ್ತವಾಗಿ ಪ್ರವೇಶಿಸಿ, ಪರಿಶೀಲಿಸಿ ಅನಂತರ ನಿಲುವೊಂದನ್ನು ತಳೆಯುವುದು, ಪ್ರತಿಫಲಿಸುವುದು ಸರಿಯಾದ ಪ್ರಕ್ರಿಯೆ ಮತ್ತು ನಿರ್ಲಿಪ್ತತೆಯ ಪರಿಕಲ್ಪನೆಯು ವಸ್ತು ಪ್ರವೇಶಕ್ಕೆ ಅನ್ವಯಿಸುವ ಅಂಶವಾಗಿ ಮಾನ್ಯವಾದುದು. ಯಾವುದೇ ನಿಲುವನ್ನು ತಳೆಯದೆ ನಿರ್ಲಿಪ್ತನಾಗಿದ್ದೇನೆಂದು ಭಾವಿಸುವುದು ಮತ್ತು ಅದನ್ನೇ ಪ್ರತಿಪಾದಿಸುವುದು ಸಮಾಜ ವಿಮುಖತೆಯೂ ಆಗಬಹುದಾದ ಅಪಾಯವಿದೆಯಲ್ಲವೆ ? ಸಮಾಜದ ಅನಾರೋಗ್ಯಕರ ನಿಲುವುಗಳಿಗೆ ಪ್ರತಿ ನಿಲುವು ತಳೆಯದೆ ಹೋದರೆ ಮೌನ ಸಮ್ಮತಿಯ ರಾಜಕೀಯವಾಗುವುದಿಲ್ಲವೆ ? ಈ ಪ್ರಶ್ನೆಗಳು ಪ್ರಬಲ ಸಮೂಹ ಮಾಧ್ಯಮವಾದ ಸಿನಿಮಾ ಸಂಬಂಧದಲ್ಲಿ ಹೆಚ್ಚು ಪ್ರಸ್ತುತವಾಗುತ್ತವೆ. ನನ್ನ ಮಾತಿಗೆ ಪೂರಕವಾಗಿ ಮತ್ತೆ ಜೇಮ್ಸ್ ಮೊನೇಕೊ ಅವರ ವ್ಯಾಖ್ಯಾನವನ್ನು ಉಲ್ಲೇಖಿಸುತ್ತೇನೆ : ''ಚಲನಚಿತ್ರವು ಎಷ್ಟು ವಿಶಾಲವಾಗಿ ಹರಡಿರುವ ಜನಪ್ರಿಯ ಸಂಗತಿಯೆಂದರೆ ಅದು ಆಧುನಿಕ ಸಂಸ್ಕೃತಿಯ ಸಾಮಾಜಿಕ-ರಾಜಕೀಯ ನೆಲೆಯಲ್ಲಿ ಬಹಳ ಮುಖ್ಯವಾದ ಪಾತ್ರವನ್ನು ನಿರ್ವಹಿಸುತ್ತದೆ...'' (ಪುಟ ೨೬೧)

ಜೇಮ್ಸ್ ಮೊನೇಕೊ ಅವರು ಮುಂದುವರೆದು 'ಸಿನಿಮಾದ ರಾಜಕೀಯ'ದಲ್ಲಿರುವ ವೈರುಧ್ಯಗಳನ್ನೂ ಗುರುತಿಸುತ್ತಾರೆ ಮತ್ತು ಈ ವೈರುಧ್ಯಗಳು ಸಿನಿಮಾದ ರಾಜಕೀಯವನ್ನು ನಿಯಂತ್ರಿಸುತ್ತವೆಯೆಂದು ಹೇಳುತ್ತಾರೆ: ''ಚಲನಚಿತ್ರದ ರಾಜಕೀಯವನ್ನು ಎರಡು ವಿರುದ್ಧೋಕ್ತಿಗಳು ನಿಯಂತ್ರಿಸುತ್ತವೆ: ಒಂದೆಡೆ, ಚಲನಚಿತ್ರದ ವಿನ್ಯಾಸವು ಕ್ರಾಂತಿಕಾರಿಯಾದ್ದು; ಇನ್ನೊಂದೆಡೆ, ಅದರ ವಿಷಯ ಅಥವಾ ಹುರುಳು ಅನೇಕ ವೇಳೆ ಪರಂಪರಾಗತ ಮೌಲ್ಯಗಳಿಂದಾಗಿ ಸಾಂಪ್ರದಾಯಿಕವಾಗಿರುತ್ತದೆ. ಎರಡನೆಯದಾಗಿ, ಚಲನಚಿತ್ರದ ರಾಜಕೀಯ ಮತ್ತು 'ನಿಜ ಜೀವನ'ದ ರಾಜಕೀಯಗಳು ಎಷ್ಟು ಹಾಸುಹೊಕ್ಕಾಗಿ ಬೆರೆತಿರುತ್ತವೆಂದರೆ ಅವುಗಳಲ್ಲಿ ಯಾವುದು ಕಾರಣ ಮತ್ತು ಯಾವುದು ಕಾರ್ಯ ಎಂಬುದನ್ನು ನಿರ್ಧರಿಸುವುದು ಸಾಮಾನ್ಯವಾಗಿ ಅಸಾಧ್ಯವಾದುದಾಗಿರುತ್ತದೆ''(ಪುಟ ೨೬೨).– ಇದು ವಸ್ತುಸ್ಥಿತಿಯ ವ್ಯಾಖ್ಯಾನ.

ಸಿನಿಮಾಕ್ಕೆ ಒಂದು ಎಕನಾಮಿಕ್ಸ್ ಇದ್ದ ಹಾಗೆಯೇ ಒಂದು ಪಾಲಿಟಿಕ್ಸ್ ಇರುತ್ತದೆ ಎಂಬ ಅಂಶವು ಸಿನಿಮಾದ ಸ್ವರೂಪಕ್ಕೆ ಸಂಬಂಧಿಸಿದ್ದು. ಸಿನಿಮಾದ ವಸ್ತುವೊಂದು ನಿರ್ದಿಷ್ಟ ಸಾಮಾಜಿಕ ರಾಜಕೀಯ ನಿಲುವುಗಳನ್ನು ತಳೆಯುವುದು ಅಗತ್ಯ ಎಂಬ ಅಂಶವು ನಿರ್ದೇಶಕನ ದೃಷ್ಟಿಕೋನಕ್ಕೆ ಸಂಬಂಧಿಸಿದ್ದು.

ಜಾಗತೀಕರಣವು ಮುಕ್ತ ಆರ್ಥಿಕ ಪದ್ಧತಿಯ ರಾಜಕೀಯ ದೃಷ್ಟಿಧೋರಣೆಗಳ ಫಲವಾದ್ದರಿಂದ ಸಿನಿಮಾವನ್ನೂ ಒಳಗೊಂಡಂತೆ ಒಟ್ಟು ಸಾಂಸ್ಕೃತಿಕ ಕ್ಷೇತ್ರವು ನಿರ್ದಿಷ್ಟ ನಿಲುವು ತಳೆಯುವುದು ಮತ್ತು ತಂತಮ್ಮ ಕ್ಷೇತ್ರದ ಸೃಜನಶೀಲಕ್ರಿಯೆಯಲ್ಲಿ ಪ್ರತಿಸ್ಪಂದಿಸುವುದು ಅಗತ್ಯವಾದ ಸಂದರ್ಭದಲ್ಲಿ ನಾವು ನಿಂತಿದ್ದೇವೆ. ಹಾಗೆ ನೋಡಿದರೆ, ಎಲ್ಲ ಕಲೆಗಳೂ ವಿಶಾಲಾರ್ಥದಲ್ಲಿ ಸಾಮಾಜಿಕ ಸಂಭವಗಳಾದ್ದರಿಂದ. ಈ ಸಂಬಂಧದ 'ಸಮಾಜೋರಾಜಕೀಯ' ಚರ್ಚೆ ಪ್ರಸ್ತುತವಾಗುತ್ತದೆ. ಅಷ್ಟೇ ಅಲ್ಲ, ಎಲ್ಲ ಕಲೆಗಳೂ ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸಬೇಕಾಗುತ್ತದೆ. 'ಜನಗಳಿಗೆ ಜವಾಬ್ದಾರ' ಎಂಬುದನ್ನು ಸಾಂಸ್ಕೃತಿಕ ಕ್ಷೇತ್ರ ಮರೆಯಬಾರದು.

ಸಿನಿಮಾವನ್ನು ಜನಗಳಿಗೆ ಜವಾಬ್ದಾರಿಯಾದ ಅಭಿವ್ಯಕ್ತಿಯೆಂದು ನಂಬಿದ ಋತ್ವಿಕ್ ಘಟಕ್ ಅವರ ಮಾತು ಇಲ್ಲಿ ಉಲ್ಲೇಖನೀಯ : ''ನನ್ನ ಮಟ್ಟಿಗೆ ಹೇಳುವುದಾದರೆ ಚಲನ ಚಿತ್ರವು ಒಂದು ಅಭಿವ್ಯಕ್ತಿಯಲ್ಲದೆ ಮತ್ತೇನೂ ಅಲ್ಲ. ನನ್ನ ಜನರ ದುಃಖದುಮ್ಮಾನಗಳ ಬಗ್ಗೆ ನನ್ನ ಕೋಪವನ್ನು ಪ್ರಕಟಿಸಲು ಅದೊಂದು ಸಾಧನ.'' – ಹೀಗೆ ತಮ್ಮ ಸಿನಿಮಾಭಿ ವ್ಯಕ್ತಿಯನ್ನು ಕುರಿತು ಹೇಳುವ ಋತ್ವಿಕ್ ಘಟಕ್ ಅವರು ವಿಶಾಲಾರ್ಥದಲ್ಲಿ 'ಎಲ್ಲ ಕಲೆಗಳೂ ರಾಜಕೀಯ ನೆಲೆ ಪಡೆದಿರುತ್ತವೆ'ಯೆಂದು ಪ್ರತಿಪಾದಿಸುತ್ತಾರೆ : ''ವಿಶಾಲಾರ್ಥದಲ್ಲಿ ಎಲ್ಲ ಚಲನಚಿತ್ರಗಳೂ, ಬೇರೆಲ್ಲ ಕಲೆಗಳು ಮತ್ತು ಕಲಾವಿದರಂತೆ, ರಾಜಕೀಯವನ್ನು ಮೈಗೂಡಿಸಿಕೊಂಡಿರುತ್ತವೆ. ಅದು ಈ ವರ್ಗದ್ದು, ಇಲ್ಲವೆ ಇನ್ನೊಂದು ವರ್ಗದ್ದು.'' (ರವಿ ಓಝಾ ಮತ್ತು ಜುಧಜಿತ್ ಸರ್ಕಾರ್ ಅವರು ಋತ್ವಿಕ್ ಘಟಕ್ ಅವರನ್ನು ಸಂದರ್ಶಿಸಿದಾಗ ಆಡಿದ ಮಾತುಗಳು – ಇಂಡಿಯನ್ ಸಿನೆಮಾ ೧೯೭೭೮ – ಸಂಪಾದಕರು : ಪಿ.ಕೆ.ಎನ್. ಮೆನನ್ – ಈ ಗ್ರಂಥದಲ್ಲಿ ದಾಖಲಾಗಿವೆ.)

ಎಲ್ಲಾ ಕಲಾಕಾರರೂ (ಸಿನಿಮಾ ನಿರ್ದೇಶಕರನ್ನೂ ಒಳಗೊಂಡಂತೆ) ಒಂದಲ್ಲ ಒಂದು ವರ್ಗಕ್ಕೆ ಸೇರಿದ ರಾಜಕೀಯ ನೆಲೆ ಹೊಂದಿರುತ್ತಾರೆಂಬ ಧ್ವನಿಯನ್ನು ಋತ್ವಿಕ್ ಘಟಕ್ ಅವರ ಮಾತುಗಳಲ್ಲಿ ಗುರುತಿಸಬಹುದು. ಈ ಕಾರಣದಿಂದಲೇ ಸಿನಿಮಾವನ್ನು ನೋಡುವ, ವಿಮರ್ಶಿಸುವ ನೆಲೆಯೂ ನಿಯಂತ್ರಿತವಾಗುತ್ತದೆಯಲ್ಲವೆ ಎಂಬ ಪ್ರಶ್ನೆಯನ್ನು ಪರಿಶೀಲಿಸುವುದು ಅಗತ್ಯ. ನಾನು, ನನ್ನದೇ ಚಿತ್ರಗಳ ಮೂಲಕ ಈ ಅಂಶವನ್ನು ಪರಿಶೀಲಿಸುವುದು. ನನ್ನ ಎಲ್ಲ ಚಿತ್ರಗಳೂ ಸಮಾಜೋರಾಜಕೀಯ ವಸ್ತುಗಳನ್ನು ಪಡೆದಿವೆ. ಕೆಲವೊಮ್ಮೆ ನೇರವಾಗಿ, ಕೆಲವೊಮ್ಮೆ ಸೂಚ್ಯವಾಗಿ ನಿರ್ದಿಷ್ಟ ನಿಲುವನ್ನು ಪ್ರಕಟಿಸುತ್ತವೆ. ಪ್ರೇಮ, ಸಾಂಪ್ರದಾಯಿಕ ಸಂಬಂಧ, ಅತಿಭಾವುಕ ಸೆಳೆತಗಳಂತಹ ಸಾಮಾನ್ಯೀಕೃತ ಅನುಭವಗಳ ಬದಲು ಸಮಾಜದ ನಿರ್ದಿಷ್ಟ ವಲಯದ, ನಿರ್ದಿಷ್ಟ ಅನುಭವದ ನೆಲೆ-ನಿಲುವುಗಳಿಂದ ರೂಪು ತಳೆದ ನನ್ನ ಸಿನಿಮಾಗಳನ್ನು ಪ್ರತಿಷ್ಠಿತ ವಿಮರ್ಶಾವಲಯ ಸಂಭ್ರಮದಿಂದೇನೂ ಸ್ವಾಗತಿಸಿಲ್ಲ. ಕೆಲವರು ಹಾಡಿಹೊಗಳುವ ಸಿನಿಮಾಗಳ ಜೊತೆ ನನ್ನ ಸಿನಿಮಾಗಳನ್ನು ಸ್ವವಿಮರ್ಶೆಯ ನೆಲೆಯಲ್ಲಿ ತುಲನೆ ಮಾಡಿ ನೋಡಿದ್ದೇನೆ. ಕೆಲವೇ ಕೆಲವರ ರಚನಾತ್ಮಕ ವಿಮರ್ಶೆಯ ಹೊರತಾಗಿ ಅನೇಕರ ವಿಚಿತ್ರ 'ವಾರೆನೋಟ'ಕ್ಕೆ ವ್ಯಕ್ತಿ ಮತ್ತು ವಸ್ತುವನ್ನು ಕುರಿತ ಸಿನಿಕತನ ಮತ್ತು ಅಸಹನೆಗಳೇ ಕಾರಣವೆಂಬ ಅರಿವು ನನಗಾಗಿದೆ. ಸ್ವಸಮರ್ಥನೆಗಾಗಿ ಈ ಮಾತನ್ನು ಹೇಳುತ್ತಿಲ್ಲ. ಕನ್ನಡ ಚಿತ್ರರಂಗದಲ್ಲಿ ಸದಾ ಸಾಮಾಜಿಕ-ರಾಜಕೀಯ ಪ್ರಜ್ಞೆಯ ಸಿನಿಮಾಗಳನ್ನು ನಿರ್ದೇಶಿಸುತ್ತಿರುವ ನನಗೆ ಸರಿಯಾದ ವಿಮರ್ಶೆಯ ನ್ಯಾಯ ಸಿಕ್ಕಿಲ್ಲವೆಂಬ ಸತ್ಯ ಸಂಗತಿಯು ವೈಯಕ್ತಿಕ ನೆಲೆಯನ್ನು ಮೀರಿದ ಗಂಭೀರ ಚರ್ಚೆಯನ್ನು ಬಯಸುತ್ತದೆ. ವ್ಯಕ್ತಿ ಮತ್ತು ವಸ್ತುವನ್ನು ಕುರಿತ ಸಿನಿಕತನ ಮತ್ತು ಅಸಹನೆಗಳಿಗೆ ವೈಯಕ್ತಿಕ ಕಾರಣಗಳಿರುವಂತೆಯೇ ಸಾಮಾಜಿಕ-ರಾಜಕೀಯ ಕಾರಣಗಳು ಇರುತ್ತವೆ ಅಥವಾ ಸಾಮಾಜಿಕ-ರಾಜಕೀಯ ಕಾರಣಗಳಿಂದ ಸಿನಿಕತನ ಮತ್ತು ಅಸಹನೆಗಳು ಪ್ರೇರಿತವಾಗಿರುತ್ತವೆ. ಕಲಾತ್ಮಕತೆ ಮತ್ತು ಸೌಂದರ್ಯ ಪ್ರಜ್ಞೆಗೆ ಸಂಬಂಧಿಸಿದ ಸಿದ್ಧ ಮಾದರಿಗಳೂ ಮನಸ್ಸಿನಲ್ಲಿ ಕೆಲಸ ಮಾಡಿರುತ್ತವೆ. ಸಿನಿಮಾವೊಂದನ್ನು ಮೂಲೆಗೆ ತಳ್ಳಲು ಕಲಾತ್ಮಕತೆ, ತಾಂತ್ರಿಕತೆ ಮುಂತಾದ ಮಾತುಗಳು ಸುಲಭಸಾಧನವಾಗಿ 'ಈ ಚಲನಚಿತ್ರದ ವಸ್ತು ಚನ್ನಾಗಿದೆ. ಆದರೆ ತಾಂತ್ರಿಕ ಕುಶಲತೆ ಇಲ್ಲ' ಎಂದು ಸಲೀಸಾಗಿ ಫರ್ಮಾನು ಹೊರಡಿಸಲಾಗುತ್ತದೆ. ಕಲಾತ್ಮಕತೆ, ತಾಂತ್ರಿಕ ಕುಶಲತೆ ಎಂದರೆ ಏನು ? ಆಧುನಿಕ ತಂತ್ರಜ್ಞಾನದ ಪರಿಕರಗಳನ್ನು ಬಳಸಿ ಮಾಡುವ ತಾಂತ್ರಿಕ ಕಸರತ್ತು ಅಥವಾ ಚಮತ್ಕೃತಿ (ಗಿಮಿಕ್ಸ್)ಗಳನ್ನು ಕೆಲವರು ತಾಂತ್ರಿಕ ಪರಿಣತಿ ಎಂದು ಭಾವಿಸುವುದುಂಟು. ಯಾವುದೇ ವೈಚಾರಿಕ ಒಳ ಸೆಲೆಯಿಲ್ಲದೆ ಸಾಮಾನ್ಯೀಕೃತ ಅನುಭವಗಳನ್ನು ರಂಜಕವಾಗಿ ನಿರೂಪಿಸಿದರೆ ಕಲಾತ್ಮಕ ಪರಿಣತಿ ಎಂದು ಭಾವಿಸುವವರೂ ಉಂಟು. ಆದರೆ ಪ್ರಖರ ಸಾಮಾಜಿಕ-ರಾಜಕೀಯ ವಸ್ತುಗಳನ್ನು ಒಳಗೊಂಡ ಸಿನಿಮಾಗಳು ಈ ಮಾದರಿಯ ಕಲಾತ್ಮಕತೆ ಮತ್ತು ತಾಂತ್ರಿಕ ಕುಶಲತೆಗೆ ಹೊರತಾಗಿ ಬೇರೊಂದು 'ಬಂಧ'ವನ್ನು ಕಂಡುಕೊಳ್ಳಲು ಹವಣಿಸುತ್ತದೆಯಾದ್ದರಿಂದ ಸಿನಿಮಾ ವಿಮರ್ಶೆಯು ಈ ಅಂಶವನ್ನು ಗಂಭೀರವಾಗಿ ಪರಿಗಣಿಸಬೇಕಾಗುತ್ತದೆ. ತಾಂತ್ರಿಕ ಕುಶಲತೆ ಅಥವಾ ಪರಿಣತಿಗಳು ತಾಂತ್ರಿಕ ಪರಿಕರಗಳ ಬಳಕೆಗೆ ಮಾತ್ರ ಮೀಸಲಾದರೆ ಸಾಲದು. ಒಟ್ಟು ಸಿನಿಮಾದ ನಿರೂಪಣಾ ತಂತ್ರ ಮತ್ತು ವಸ್ತು ನಿರ್ವಹಣೆಯ ಸೂಕ್ಷ್ಮ ವಿಧಾನವು ಕಲಾತ್ಮಕ ಮತ್ತು ತಾಂತ್ರಿಕ ಕುಶಲತೆಯ ಪ್ರಮುಖ ಅಂಶವೆಂದು ನನ್ನ ತಿಳುವಳಿಕೆ. ಸಾಮಾಜಿಕ-ರಾಜಕೀಯ ಪ್ರಜ್ಞೆಯ ಸಿನಿಮಾಗಳಲ್ಲಿ ಈ ಅಂಶಗಳಿದ್ದರೂ ಪೂರ್ವನಿಶ್ಚಿತ ಸಾಮಾಜಿಕ ಸಾಂಸ್ಕೃತಿಕ ಅಭಿಪ್ರಾಯಗಳ ಕಾರಣದಿಂದ ಕೆಲ ವಿಮರ್ಶಕರಿಗೆ ಮತ್ತು ಪ್ರಬುದ್ಧ ಪ್ರೇಕ್ಷಕರಿಗೆ 'ಪ್ರೀತಿಯ ಪ್ರವೇಶ' ಸಾಧ್ಯವಾಗದೆ ಹೋಗಬಹುದು. ಇಂಥವರ ಮನಸ್ಸಿನಲ್ಲಿ ನೆಲೆಯೂರಿರುವ ಸೌಂದರ್ಯ ಪ್ರಜ್ಞೆಗೂ ವರ್ಗ ಪ್ರಜ್ಞೆಗೂ ಸಂಬಂಧವಿರಬಹುದು. ನನ್ನ ಈ ಮಾತಿಗೆ ಪೂರಕವಾಗಿ ಪ್ಲೆಖನೋವ್ ಅವರ ವ್ಯಾಖ್ಯಾನವನ್ನು ಉಲ್ಲೇಖಿಸುತ್ತೇನೆ: ''ಯಾವುದೇ ಸಮಾಜದಲ್ಲಿ ಅಥವಾ ಸಮಾಜದ ಒಂದು ವರ್ಗದಲ್ಲಿ ನೆಲೆಗೊಂಡಿರುವ ಸೌಂದರ್ಯದ ಆದರ್ಶವು ಭಾಗಶಃ ಮಾನವ ಜನಾಂಗದ ಅಭಿವೃದ್ಧಿಯ ಜೈವಿಕ ಸನ್ನಿವೇಶಗಳಿಂದ ಹೊರಹೊಮ್ಮಿರುತ್ತದೆ. ಇವೇ ಸನ್ನಿವೇಶಗಳು ನಿರ್ದಿಷ್ಟ ಜನಾಂಗೀಯ ಲಕ್ಷಣಗಳಿಗೂ ಕಾರಣವಾಗಿರುತ್ತವೆ ಎಂಬುದನ್ನು ಗಮನಿಸಬಹುದು. ಇನ್ನುಳಿದಂತೆ ಸೌಂದರ್ಯದ ಆದರ್ಶವು ಆಯಾ ಸಮಾಜ ಅಥವಾ ವರ್ಗದ ಚಾರಿತ್ರಿಕ ಸನ್ನಿವೇಶಗಳಿಂದ ರೂಪುಗೊಂಡಿರುತ್ತವೆ. ಆದ್ದರಿಂದ, 'ಶುದ್ಧ ಸೌಂದರ್ಯ' ಎಂಬುದರ ಆರಾಧಕನು ಜೈವಿಕ ಮತ್ತು ಚಾರಿತ್ರಿಕವಾದ ಸಾಮಾಜಿಕ ಸನ್ನಿವೇಶಗಳನ್ನು ಹೊರತುಪಡಿಸಿ ತನ್ನ ಸೌಂದರ್ಯ ಪ್ರಜ್ಞೆಯನ್ನು ಬೆಳೆಸಿಕೊಳ್ಳಲಾರ'' (ಕಲೆ ಮತ್ತು ಸಾಮಾಜಿಕ ಜೀವನ, ಪುಟ ೩೦೫, ಲೇಖಕ : ಪ್ಲೆಖನೋವ್).

ಪ್ಲೆಖನೋವ್ ಅವರ ಈ ವ್ಯಾಖ್ಯಾನವು 'ಶುದ್ಧ ಸೌಂದರ್ಯ'ವೆಂಬ ಕಲ್ಪನೆಯು

## ನೀರಿನ ಚಕ್ರ



ಒಟ್ಟಿಗಿರಿ ಮಿತ್ರರೇ
ಹರಡಿ ಮಲಗಬೇಡಿ.

ನಮ್ಮ ಗೆಳೆತನ
ಎಚ್ಚರವಿರುವುದರಿಂದ ಆಗಿದೆ.

ನೀರಿನ ಚಕ್ರ ನೀರನ್ನು ಸ್ವೀಕರಿಸುತ್ತದೆ
ಮತ್ತು ತಿರುಗಿ ಹಿಂತಿರುಗಿಸುತ್ತದೆ,
ಅಳುತ್ತಾ.

ಈ ರೀತಿ ಅದು ಉದ್ಯಾನದಲ್ಲಿ ಉಳಿಯುತ್ತದೆ,
ಹೀಗಿರಬೇಕಾದರೆ ಇನ್ನೊಂದು ಚಕ್ರ
ಉರುಳುತ್ತದೆ
ಒಣಗಿದ ನದಿ ಹಾಸಿನ ಮೇಲೆ,
ತನಗೇನು ಬೇಕೆಂದು ಯೋಚಿಸದೆಯೇ
ಅದನ್ನು ಅರಸುತ್ತಾ.

ಇಲ್ಲಿರಿ, ಪ್ರತಿ ಕ್ಷಣವೂ ನಡುಗುತ್ತಾ ,
ಪಾದರಸದ ಹನಿಯೊಂದರಂತೆ.

ಮೂಲ : ಜಲಾಉದ್ದೀನ್ ರೂಮಿ

ಅನು : ಅಂಕುರ್ ಬೆಟಗೇರಿ
೨೦೭, ಹರ್ಷ ಅಪಾರ್ಟ್‌ಮೆಂಟ್ಸ್, ಸ್ನೇಹ ಕಾಲೋನಿ, ಚಿಕ್ಕಲ್ಲಸಂದ್ರ, ಬೆಂಗಳೂರು - ೫೬೦ ೦೬೧

ತನಗೆ ತಾನೇ ಸ್ವತಂತ್ರವಲ್ಲವೆಂದೂ ನಮ್ಮ ಸೌಂದರ್ಯ ಪ್ರಜ್ಞೆ ಅಥವಾ ಅಭಿರುಚಿಯನ್ನು ಜೈವಿಕ, ಚಾರಿತ್ರಿಕ, ಸಾಮಾಜಿಕ ಸಂದರ್ಭಗಳು ನಿರ್ಧರಿಸುತ್ತವೆಯೆಂದೂ ಸ್ಪಷ್ಟಪಡಿಸುತ್ತದೆ.

ಆದ್ದರಿಂದ ಪ್ರೇಕ್ಷಕ ಮತ್ತು ವಿಮರ್ಶಕರ ಮನಸ್ಸಿನಲ್ಲಿ ತಮ್ಮನ್ನು ತಾವು ಮೀರಿ ಬೇರೊಂದು ಮಾದರಿಯ ಜೊತೆ ಸಂವಾದಿಸುವ ಸ್ಥಿತಿಯೊಂದು ಬೇಕಾಗುತ್ತದೆ. ಯಜಮಾನ ಸಂಸ್ಕೃತಿಯಿಂದ ಪ್ರಣೀತವಾದ ಪ್ರಬುದ್ಧಜ್ಞಾನವು ಜನವಿರೋಧಿ ಆಶಯಗಳನ್ನು ಒಳಗೊಂಡಿರುತ್ತದೆಯೆಂಬ ಎಚ್ಚರ ಸದಾ ಇರಬೇಕಾಗುತ್ತದೆ. ಮಾಕ್ಸಿಂ ಗಾರ್ಕಿಯವರು ಹೇಳುವ ಪ್ರಕಾರ – ''ಯಜಮಾನ ವರ್ಗಗಳು ಜ್ಞಾನಸಂಪತ್ತನ್ನು ತಮ್ಮ ಏಕಸ್ವಾಮ್ಯವನ್ನಾಗಿ ಮಾಡಿಕೊಳ್ಳಲು ಯಾವಾಗಲೂ ಶ್ರಮಿಸಿವೆ ಮತ್ತು ಜನಸಾಮಾನ್ಯರಿಗೆ ಅದು ಯಾವ ರೀತಿಯಲ್ಲೂ ಎಟುಕದಂತೆ ಮಾಡುತ್ತಲೇ ಬಂದಿವೆ. ಜನಸಮುದಾಯದ ಮೇಲೆ ತಮ್ಮ ಅಧಿಕಾರವನ್ನು ಭದ್ರಗೊಳಿಸಿಕೊಳ್ಳಲು ಈ ಯಜಮಾನ ವರ್ಗಗಳು ಜನಸಾಮಾನ್ಯರಿಗೆ ಸದಾ ನಿರ್ದಿಷ್ಟ ರೂಪದ ಚಿಂತನೆಗಳನ್ನಷ್ಟೇ ಒದಗಿಸಿಕೊಟ್ಟಿವೆ.'' (ಸಾಹಿತ್ಯವನ್ನು ಕುರಿತು, ಪುಟ ೮೯).

ನಮ್ಮ ದೇಶದಲ್ಲೂ ಇಂತಹುದೇ ಇತಿಹಾಸವಿದೆ. ಆದರೆ ಈಗ ಎಲ್ಲ ಜನವರ್ಗಗಳಿಗೂ ಶಿಕ್ಷಣ ಮತ್ತಿತರ ಸೌಲಭ್ಯಗಳು ಲಭ್ಯವಾಗುತ್ತಿರುವುದರಿಂದ ಸಾಮಾಜಿಕ ಚಲನಶೀಲತೆ ಸಾಧ್ಯವಾಗಿ ಜನ ವಿಮೋಚನೆಯ ಆಶಯ ಮತ್ತು ಹೋರಾಟಗಳು ದಟ್ಟವಾಗುತ್ತ ಬಂದಿವೆ. ಆದರೆ ಇದೇ ಸಂದರ್ಭದಲ್ಲಿ ಮುಕ್ತ ಆರ್ಥಿಕ ನೀತಿಯ ರಾಜಕೀಯ ವ್ಯವಸ್ಥೆ ಮೇಲುಗೈ ಪಡೆದು ಜನ ವಿಮೋಚನೆಯ ಆಶಯಗಳಿಗೆ ಹಿನ್ನಡೆಯಾಗುತ್ತಿದೆ. ವಿಮೋಚನೆಯ ಹೋರಾಟಗಳಲ್ಲಿದ್ದ ಕೆಲವು ದೌರ್ಬಲ್ಯಗಳೇ ದೊಡ್ಡದಾಗಿ ಬಿಂಬಿತವಾಗುತ್ತಿವೆ. ಜಾಗತೀಕರಣದ ಹೆಸರಲ್ಲಿ ಬಂದ ಆರ್ಥಿಕ ಉದಾರೀಕರಣವೇ ಅಂತಿಮ ಪರಿಹಾರವೆಂಬ ಭ್ರಮೆಯನ್ನು ಬೆಳೆಸಲಾಗುತ್ತಿದೆ. ಇಂತಹ ಸನ್ನಿವೇಶದಲ್ಲಿ ವಿಮೋಚನೆಯ ಹೋರಾಟಗಳು ಆತ್ಮವಿಮರ್ಶೆಗೆ ತೊಡಗುವುದರೊಂದಿಗೆ ಸೂಕ್ತ ಕಾರ್ಯತಂತ್ರಗಳನ್ನು ರೂಪಿಸಿಕೊಂಡು ಜನಪರ ಆಶಯಗಳನ್ನು ಜೀವಂತವಾಗಿಡಬೇಕಾಗಿದೆ. ಸಿನಿಮಾದಂತಹ ಸಮೂಹ ಮಾಧ್ಯಮಗಳು ಕಡೇ ಪಕ್ಷ ಜನವಿರೋಧಿಯಾಗದಂತೆ ಜವಾಬ್ದಾರಿಯನ್ನು ನಿರ್ವಹಿಸಬೇಕಾಗಿದೆ. ಇದು ಎಲ್ಲ ಕಲೆಗಳ ಕೆಲಸವೂ ಹೌದು. ಜಿ. ಎಸ್. ಪಣಿಕ್ಕರ್ ಅವರು ಹೇಳುವಂತೆ ''ಕಲೆಯನ್ನು ರಾಜಕೀಯದಿಂದ ಪ್ರತ್ಯೇಕಿಸಲಾಗದು. ಯಾವುದೇ ಕಲಾಕೃತಿಗೂ ರಾಜಕೀಯ ಆಶಯಗಳಿರುತ್ತವೆ : ಅದು ಪಾಶ್ಚಿಮಾತ್ಯ ಸಂಗೀತವಿರಲಿ, ಹಾಲಿವುಡ್ ಸಂಗೀತವಾಗಿರಲಿ, ಎಲ್ಲಾ ಒಂದೇ'' (ವಿಷಯ ಮತ್ತು ಸ್ವರೂಪ ಎಂಬ ಲೇಖನ. ಇಂಡಿಯನ್ ಸಿನೆಮಾ ೧೯೭೮; ಸಂ : ಪಿ. ಕೆ. ಎನ್. ಮೆನನ್).

ಎಪ್ಪತ್ತರ ದಶಕದಲ್ಲಿ ಪ್ರಬಲವಾಗಿದ್ದ ಪ್ರಗತಿಪರ ಚಿಂತನೆಗಳು ಈಗ ಮತ್ತೊಮ್ಮೆ ಹೊಸ ಜೀವಶಕ್ತಿಯಿಂದ ಬೆಳಗಬೇಕಾಗಿದೆ. ವಿಶೇಷವಾಗಿ, ಸಿನಿಮಾ ಎಂಬ ಶಕ್ತಿಯನ್ನು ನಮ್ಮ ಬೌದ್ಧಿಕವಲಯವು ಗಂಭೀರವಾಗಿ ಪರಿಗಣಿಸಬೇಕಾಗಿದೆ. ''ಸಾಮಾಜಿಕ ಪ್ರಗತಿಯನ್ನ ಪೇಕ್ಷಿಸುವವರು ಎಂದೆಂದಿಗೂ ಸಿನೆಮಾವನ್ನು ಉಪೇಕ್ಷಿಸಲಾಗದೆಂಬುದು ನಿತ್ಯಸತ್ಯ. ಸಮಾಜ ವಿಜ್ಞಾನಿಗಳು ಮತ್ತು ರಾಜಕೀಯ ಕಾರ್ಯಕರ್ತರು ಸಿನೆಮಾದ ಆಂತರಿಕ ಶಕ್ತಿಯನ್ನು ಅರ್ಥಮಾಡಿಕೊಳ್ಳಬೇಕು; ಅದು ಜನಸಮುದಾಯಕ್ಕೆ ಏಕೆ ಅಷ್ಟು ಆಪ್ಯಾಯಮಾನವಾಗಿದೆಯೆಂಬುದನ್ನು ತಿಳಿಯಬೇಕು ಮತ್ತು ಅದರ ಸವಾಲುಗಳನ್ನೆದುರಿಸಿ ಪಾರಾಗುವುದನ್ನು ಕಲಿಯಬೇಕು.'' (ಇಂಡಿಯಾದ ಸಿನಿಮಾದ ವರ್ಗ ಮೂಲಗಳು, ಲೇ : ಎಂ.ಬಿ.ಶ್ರೀನಿವಾಸನ್ , ಇಂಡಿಯನ್ ಸಿನೆಮಾ ೧೯೭೮. ಸಂ.: ಪಿ.ಕೆ.ಎನ್.ಮೆನನ್ )

ಶ್ರೀ ಎಂ. ಬಿ. ಶ್ರೀನಿವಾಸನ್ ಅವರು ೧೯೭೮ರಲ್ಲಿ ಹೇಳಿದ ಮಾತುಗಳು ಇಂದಿಗೂ ಪ್ರಸ್ತುತವಾಗಿವೆ. ಸಿನಿಮಾ ಮಾಧ್ಯಮವನ್ನು ಅನಾದರದಿಂದ ಕಾಣುತ್ತಿರುವ ಬೌದ್ಧಿಕ ವಲಯದ ಅನೇಕರು ಈ ದಿಕ್ಕಿನಲ್ಲಿ ಚಿಂತಿಸಬೇಕಾಗಿದೆ. ಸಿನಿಮಾವನ್ನೂ ಒಳಗೊಂಡಂತೆ ಜನಪ್ರಿಯ ಸಂಸ್ಕೃತಿಯ ಮಾದರಿಗಳನ್ನು ಪ್ರೀತಿಯಿಂದ ಕಾಣುವ, ಚರ್ಚಿಸುವ, ಸಂವಾದಿಸುವ, ಪರಿವರ್ತಿಸುವ ಪ್ರಕ್ರಿಯೆಗೆ ಹೊಸ ಚಾಲನೆ ದೊರಕಬೇಕಾಗಿದೆ.

ಒಂದು ಪ್ರಶ್ನೆ ಸಹಜವಾಗಿ ಏಳುತ್ತದೆ: ಸಿನಿಮಾ ಮಾಧ್ಯಮವು ಒಂದಲ್ಲ ಒಂದು ರೀತಿಯಲ್ಲಿ 'ಸಮಾಜೋರಾಜಕೀಯ' ಆಯಾಮವನ್ನು ಪಡೆದಿರುತ್ತದೆಯೆಂಬುದನ್ನು ಒಪ್ಪಬಹುದಾದರೂ ರಾಜಕೀಯ ವಸ್ತುವಿನ ಸಿನಿಮಾಗಳು ಮಾತ್ರ ಮುಖ್ಯವೆ ಮತ್ತು ಜಾಗತೀಕರಣವನ್ನು ಎದುರಿಸಲು ಎಲ್ಲರೂ ರಾಜಕೀಯ ಸಿನಿಮಾಗಳನ್ನೇ ಮಾಡಬೇಕೆ ?

ಯಾವುದೇ ಕಲೆಗೆ ಹೀಗೆ ಕಡಿವಾಣ ಹಾಕುವುದಾಗಲಿ, ಕಟ್ಟಪ್ಪಣೆ ವಿಧಿಸುವುದಾಗಲಿ ಸರಿಯಲ್ಲ. ಏಕಮುಖಿಯಾದ ಸಿನಿಮಾಗಳನ್ನೇ ನಿರ್ಮಿಸಬೇಕೆಂದು ಪ್ರತಿಪಾದಿಸುವುದು ನನ್ನ ಈ ಲೇಖನದ ಆಶಯವಲ್ಲ. ನನ್ನಲ್ಲಿ ಅಂತಹ ಅಭಿಪ್ರಾಯವೂ ಇಲ್ಲ. ತಮಗೆ ತಾವೇ ರಾಜಕೀಯೇತರ ಕಲೆಗಾರರೆಂದು ಭಾವಿಸುವವರು ಸಹ ರಾಜಕೀಯದ ಭಾಗವಾಗಿರುತ್ತಾರೆಂದು ಮನವರಿಕೆ ಮಾಡಿಕೊಡುವುದು, ಸಾಮಾನ್ಯೀಕೃತ ಅನುಭವಗಳ ರೋಚಕ ಸಿನಿಮಾಗಳನ್ನು ವೈಭವೀಕರಿಸಿ ಅಂಥ ಸಿನಿಮಾಗಳೇ ಸಮಕಾಲೀನ ಶ್ರೇಷ್ಠ ಮಾದರಿಗಳೆಂಬಂತೆ ಬಿಂಬಿಸುವುದು ಸರಿಯಲ್ಲವೆಂದು ಸ್ಪಷ್ಟವಾಗಿ ತಿಳಿಸುವುದು, ನಿರ್ದಿಷ್ಟ ಸಾಮಾಜಿಕ ರಾಜಕೀಯ ವಸ್ತುವಿನ ಸಿನಿಮಾಗಳಿಗೆ ಆಗುತ್ತಿರುವ ಅನ್ಯಾಯವನ್ನು ತಿಳಿಸಿ ಸಿನಿಮಾದ ಸಾಮಾಜಿಕ ಜವಾಬ್ದಾರಿಯನ್ನು ಪ್ರತಿಪಾದಿಸುವುದು ನನ್ನ ಈ ಲೇಖನದ ಪ್ರಧಾನ ಆಶಯವಾಗಿದೆ.

ಯಾವುದೇ ವಸ್ತುವನ್ನು ಒಳಗೊಂಡಿದ್ದರೂ ಸಿನಿಮಾದಲ್ಲಿ ಅದರ ಆತ್ಮಸಂಬಂಧಗಳನ್ನು ಸಾಮಾಜಿಕವಾಗಿಸುವ ಮೂಲಕ ವೈಯಕ್ತಿಕ ನೆಲೆಯನ್ನು ಮೀರಿದ ಪ್ರಾತಿನಿಧಿಕತೆಯನ್ನು ತಂದುಕೊಡಬಹುದು. ಈ ಮೂಲಕ ವೈವಿಧ್ಯಮಯ ವಸ್ತು ಸಂಪತ್ತನ್ನು ನಮ್ಮ ಸಿನಿಮಾದ ಅಮೂಲ್ಯ ಕೊಡುಗೆಯಾಗಿಸಬಹುದು. ಆದ್ದರಿಂದ, ನೀವು ಯಾವುದೇ ವಸ್ತುವುಳ್ಳ ಸಿನಿಮಾ ಮಾಡಿ; ಆದರೆ ಜನವಿರೋಧಿ ಆಶಯಗಳನ್ನು ಬಿತ್ತಬೇಡಿ. ಇದು ನನ್ನ ಮೊದಲ ಮನವಿ.

ಸಮಾಜದಲ್ಲಿ ವಿವಿಧ ವರ್ಗಗಳು, ವಿವಿಧ ಅಭಿರುಚಿಗಳು ಇರುವುದರಿಂದ ಅದಕ್ಕನುಗುಣವಾದ ಸಿನಿಮಾಗಳು ನಿರ್ಮಾಣವಾಗುವುದು ಸಹಜ. ಇದರ ಫಲವಾಗಿ ಜನ ವಿರೋಧಿಯಾದ ವಸ್ತುವುಳ್ಳ ಸಿನಿಮಾಗಳು ಬರಬಹುದು; ಪ್ರತಿಗಾಮಿ ಪ್ರತಿಪಾದನೆಯ ಸಿನಿಮಾಗಳು ನಿರ್ಮಾಣವಾಗಬಹುದು. ಸಾಮಾಜಿಕ ಚಲನಶೀಲತೆಗೆ ವಿರುದ್ಧವಾದ ಜಡ ಸಂಪ್ರದಾಯ ಹಾಗೂ ಹಿಂಸೆಯನ್ನು ವೈಭವೀಕರಿಸುವ ಚಿತ್ರಗಳು ತಯಾರಾಗಬಹುದು. ನಾವು ಇವುಗಳ ನಿರ್ಮಾಣವನ್ನು ತಡೆಯಲಿಕ್ಕಾಗದು. ಆದರೆ ಇಂತಹ ಚಿತ್ರಗಳನ್ನು ಸೂಕ್ತ ವಿಮರ್ಶೆಗೆ ಒಳಪಡಿಸಿ ಜನರನ್ನು ಚಲನಶೀಲ ಚಿಂತನೆಗೆ ತೊಡಗಿಸುವ ಕೆಲಸವನ್ನು – ಸಿನಿಮಾ ಚಿಂತಕರು, ವಿಮರ್ಶಕರು, ಪತ್ರಕರ್ತರು, ಲೇಖಕರು – ಒಟ್ಟಾರೆ ಸಾಧ್ಯವಾದ ಎಲ್ಲರೂ ಮಾಡಬೇಕಾಗಿದೆ.

ಬಹುಸುಲಭವಾಗಿ ಮುದಗೊಳಿಸುವ ಜನಪ್ರಿಯ ಮಾದರಿಯೊಂದು ನಮ್ಮಲ್ಲಿದೆ. ಒಂದು ಪ್ರೇಮಕತೆಯನ್ನು ತೆಗೆದುಕೊಂಡು ಸೂಕ್ಷ್ಮೋಪಾಯಗಳ ಮೂಲಕ ಪ್ರೇಕ್ಷಕರ ಕಾಮನೆಗಳನ್ನು ಬೆಚ್ಚಗೆ ಮಾಡುವುದು, ಈ ಮಾದರಿ. ಪ್ರೇಮಕಥಾ ವಸ್ತುವಿಗೆ ದೊಡ್ಡ ಪರಂಪರೆಯೇ ಇದೆ. ಪ್ರೇಮ ಪ್ರಧಾನ ಚಿತ್ರ ಮಾಡುವುದು ತಪ್ಪಲ್ಲ; ಅದರ ಆಶಯ ತಪ್ಪುದಾರಿ ಹಿಡಿಯಬಾರದು; ಅಷ್ಟೆ. ತಪ್ಪು ದಾರಿ ಹಿಡಿದಿದೆಯೆಂದು ಗುರುತಿಸಲಾಗದಂತೆ ನವಿರುನಿರೂಪಣೆಯ ಸಾಮರ್ಥ್ಯ ಪಡೆದ ಸಿನಿಮಾಗಳಿಂದ 'ಮೋಸಹೋಗದೆ' ಅವುಗಳ ಸ್ಥಾನ ನಿರ್ದೇಶನ ಮಾಡಬೇಕಾದ್ದು ಪ್ರಬುದ್ಧವಿಮರ್ಶೆಯ ಕೆಲಸ. ಯಾಕೆಂದರೆ ಇಂತಹ ಚಿತ್ರಗಳಿಗೂ ಸಿನಿಮಾರಂಗದಲ್ಲಿ ತನ್ನದೇ ಆದ ಸ್ಥಾನವಿದೆ. ಇಂತಹ ಚಿತ್ರಗಳು ವಹಿಸುವ ಪಾತ್ರವನ್ನು ಗಂಭೀರವಾಗಿ ಪರಿಗಣಿಸಿ ಚರ್ಚಿಸುವ ಮೂಲಕ ವೈವಿಧ್ಯಮಯ ವಸ್ತುಗಳ ನಡುವೆ ಉತ್ತಮವಾದದ್ದನ್ನು ಹುಡುಕಬೇಕು; ಗುರುತಿಸಬೇಕು; ಅರ್ಹತೆಗೆ ತಕ್ಕ ಗೌರವ ನೀಡಬೇಕು. ಅದು ಬಿಟ್ಟು ಚಿತ್ರರಂಗದಲ್ಲಿ ಕ್ರಾಂತಿ ಸಂಭವಿಸುತ್ತದೆಯೆಂಬಂತೆ ಹುಸಿ ಸಂಭ್ರಮವನ್ನು ಬಿತ್ತುತ್ತ ಬಂಡವಾಳಶಾಹಿ ಸಂಸ್ಕೃತಿಯ ಲಾಭಕೋರ ಸೂಕ್ಷ್ಮಗಳಿಗೆ ಸೋಲುವುದು ಸರಿಯಲ್ಲ. ಚಿತ್ರರಂಗದಲ್ಲಿ ಹುಸಿ ಉನ್ಮಾದಗಳು ಹೆಚ್ಚಾದ್ದರಿಂದ ಈ ಮಾತು ಹೇಳುತ್ತಿದ್ದೇನೆ.

ಜೇಮ್ಸ್ ಮೊನೇಕೊ ಅವರು ಸಿನಿಮಾಗಳ ಸಾಮಾಜಿಕ-ರಾಜಕೀಯ, ಮನೋಭೂಮಿಕೆ ಜೊತೆಗೆ ಲೈಂಗಿಕ ರಾಜಕೀಯಗಳನ್ನು ಪ್ರಸ್ತಾಪಿಸುತ್ತಾರೆ. ಪ್ರೇಮಕತೆಯ ಮೂಲಕ ಸೂಕ್ಷ್ಮವಾಗಿ ಲೈಂಗಿಕ ರಾಜಕೀಯ ಮಾಡುವ ಸಿನಿಮಾಗಳ ವಿಷಯದಲ್ಲಿ ನಾವು, ವಿಶೇಷವಾಗಿ ಚಿಂತಕರು, ವಿಮರ್ಶಕರು ಮೈಮರೆಯಬಾರದು. ನೇರವಾಗಿ ಸೆಕ್ಸ್ ಸಿನಿಮಾ ಹಣೆಪಟ್ಟಿಯಿಂದ ಬರುವ ಚಿತ್ರಗಳು ಕಡೇ ಪಕ್ಷ ಸ್ಪಷ್ಟವಾಗಿರುತ್ತವೆ. ಆದರೆ ಸೆಕ್ಸ್‌ಅನ್ನು ಸೂಕ್ಷ್ಮಸ್ತರಗಳಲ್ಲಿ ಅಳವಡಿಸುವ ಪ್ರೇಮಸಿನಿಮಾಗಳ ಲೈಂಗಿಕ ರಾಜಕೀಯ ಬೇರೆ ರೀತಿಯದು. ಯಾವುದೇ ಮಾನವೀಯ ಮೌಲ್ಯಗಳಿಗೆ ನಿಷ್ಠವಾಗದ ಸಿನಿಮಾಗಳ ಲೈಂಗಿಕ ರಾಜಕೀಯದ ಬಗ್ಗೆ ಎಚ್ಚರದ ಕಣ್ಣಿರಬೇಕು. ಯಾಕೆಂದರೆ ''ಸಿನೆಮಾದಲ್ಲಿನ ಲೈಂಗಿಕ ರಾಜಕೀಯವು ಚಲನಚಿತ್ರಗಳ 'ಕನಸಿನ ಕಾರ್ಯಗಳು' ಎನ್ನಬಹುದಾದ ಅಂಶದೊಡನೆ ನಿಕಟ ಸಂಪರ್ಕವನ್ನು ಹೊಂದಿರುತ್ತದೆ'' (ಜೇಮ್ಸ್ ಮೊನೇಕೊ, ತನ್ನ 'ಹೌ ಟು ರೀಡ್ ಎ ಫಿಲ್ಮ್' ಎಂಬ ಪುಸ್ತಕದಲ್ಲಿ; ಪುಟ ೨೭೫).

ಜಾಗತೀಕರಣದ ಸಂದರ್ಭದಲ್ಲಿ ಎಲ್ಲರೂ 'ರಾಜಕೀಯ ಸಿನಿಮಾ'ಗಳನ್ನೇ ಮಾಡಬೇಕೆಂದು ನಾನು ಹೇಳುವುದಿಲ್ಲ. ರಾಜಕೀಯ ಸಿನಿಮಾಗಳನ್ನು ಸೋಲಿಸುವ, ಸಾಯಿಸುವ, ಸಿನಿಮಾರಾಜಕೀಯವಿಲ್ಲದಿದ್ದರೆ ಸಾಕು; ಸಾಮಾಜಿಕ-ರಾಜಕೀಯ ಪ್ರಜ್ಞೆಯ ಸಿನಿಮಾಗಳಿಗೆ ನ್ಯಾಯ ಸಿಗಬೇಕು. ಯಾಕೆಂದರೆ ಜೇಮ್ಸ್ ಮೊನೇಕೊ ಹೇಳುವಂತೆ ''ಬರ್ಟೋಲ್ಟ್ ಬ್ರೆಕ್ಟ್‌ನ ನಾಟಕಗಳಂತೆ ಈ ಚಲನಚಿತ್ರಗಳು ತಮ್ಮ ನೋಡುಗರನ್ನು ಒಳಗೊಳ್ಳುವ ಆಶಯವನ್ನಿರಿಸಿಕೊಂಡಿವೆ : ಬೌದ್ಧಿಕವಾಗಿ ಮತ್ತು ಭಾವನಾತ್ಮಕವಾಗಿ'' (ಪುಟ ೨೮೩).

ಈ ಆಶಯ ಅರ್ಥವಾದರೆ ಸಿನಿಮಾ ನೋಟಕ್ಕೆ ಸಾರ್ಥಕ ಸಾಧ್ಯತೆಯೊಂದು ಸೇರಿದಂತಾಗುತ್ತದೆ.

---

ಪ್ರೊ॥ ಬರಗೂರು ರಾಮಚಂದ್ರಪ್ಪ
'ಸಂವೇದನೆ', ಸಂಖ್ಯೆ ೨೭೫, ೧೧ನೇ 'ಬ' ಕ್ರಾಸ್, ೧೪ನೇ ಮುಖ್ಯರಸ್ತೆ, ಜೆ. ಪಿ. ನಗರ ೨ನೇ ಹಂತ, ಬೆಂಗಳೂರು - ೭೮

# ಕಾರಿ ಗುಡ್ಡದ ಕಂಬ್ಳಿ ತಾತಾ

**ಕಾ**ರಿಗುಡ್ಡದ ಕಂಬಳಿ ಮುತ್ಯಾ ನಿಜವಾಗಿಯೂ ಪವಾಡಪುರುಷ!

ಅರಸರು ಕರೆದರೆ ಹೋಗಲಿಲ್ಲ. ಮಹಾರಾಣಿ ಪಲ್ಲಕ್ಕಿ ಕಳಿಸಿದರೆ ಕೂಡಲಿಲ್ಲ.

ಕೈಯಲ್ಲೊಂದು ಹರಕು ಜೋಳಿಗಿ. ಮೈಮೇಲೊಂದು ಹಳೆಹರಕು ಕಂಬಳಿ. ಬಟ್ಟಲಲ್ಲಿ ಗಂಜಿ.

ವೈರಾಗ್ಯದ ಸಾಕಾರ ಸ್ವರೂಪ. ಧಣಿಗಳು ತಾಟಿನ ತುಂಬ ಮುತ್ತು-ರತ್ನ-ಬೆಳ್ಳಿ ರೂಪಾಯಿ ಇಟ್ಟರೆ ...ಹುಳಾ ...ಹುಳಾ ...ಎಂದು ಬೀಸಾಡಿಬಿಟ್ಟ!

ಕಂಬಳಿ ಮುತ್ಯಾನಿಗೆ ಈಗ ಒಂದಲ್ಲ... ಎರಡಲ್ಲ... ಲಕ್ಷ ಲಕ್ಷ ಶಿಷ್ಯರ ಸಮೂಹ. ಆ ಶಿಷ್ಯರಿಗೆ ಶಿಷ್ಯರು. ಅಂಥ ಆ ಶಿಷ್ಯರಿಗೂ ಪ್ರಶಿಷ್ಯರು. ಆ ಪ್ರಶಿಷ್ಯರಿಗೂ ಪುರಮಾಶಿ ಶಿಷ್ಯರು. ಎಲ್ಲರಿಗೂ ಮಠಗಳು. ಆ ಮಠಗಳಿಗೆ ಚಿನ್ನದ ಗದ್ದುಗೆ. ರತ್ನಗಳನ್ನು ಹೆಣೆದ ಕಂಬಳಿ. ಕಾರು, ಬಂಗಲೆ. ಒಬ್ಬೊಬ್ಬರಿಗೆ ನಾಲ್ಕು ನಾಲ್ಕು ಕಾರುಗಳು. ಕೆಲವರು ಹೆಲಿಕ್ಯಾಪ್ಟ ವಾಸಿಗಳು. ಇನ್ನು ಕೆಲವರು ಸಾಗರದಾಚೆಗೆ ವಿಮಾನಿನಲ್ಲಿ ಬುರ್ರನೆ ಹಾರಿಹೋಗಿ, ಕಂಬಳಿ ತಾತನ ಸಂದೇಶ ಸಾರಿ, ಹಾರಿ ಬಂದರು. ಅಲ್ಲಿಯೂ ಮಠ. ಇಲ್ಲಿಯೂ ಮಠ. ಎಲ್ಲೆಲ್ಲಿಯೂ ಚಟಪಟ!

ಇಷ್ಟಾದರೂ ಕಂಬಳಿ ತಾತಾ ಕಟ್ಟುನಿಟ್ಟು. ಅದೇ ಆ ಮುರುಕು ಬಿದಿರಿನ ಗುಡಿಸಿಲು. ಅದೇ ತಟ್ಟು. ಅದೇ ಚಾಪಿ. ಅದೇ ಕಂಬಳಿ – ಕವುದಿ. ಅದೇ ಹರಕಲು ಜೋಳಿಗೆ. ಆತನ ಎದುರಿಗೆ ಅರಮನೆಗಳು ನಶ್ವರ. ರಾಣಿಯರು ಕ್ಷುದ್ರ. ಐಶ್ವರ್ಯ ತವುಡು. ರತ್ನಗಳು ಹೊಟ್ಟು.

ಅವನಿಗೆ ಜ್ಞಾನವೇ ಆಭರಣ. ಜ್ಞಾನವೇ ಅಲಂಕಾರ. ಜ್ಞಾನದ ಕಿರೀಟ. ಜ್ಞಾನದ ಸಿಂಹಾಸನ. ಜ್ಞಾನವೇ ಅರಮನೆ.

ಶಿಷ್ಯೋತ್ತಮರು ಈ ಕಂಬಳಿ ತಾತನಿಗೆ ರತ್ನದ ಸಿಂಹಾಸನ ಮಾಡಿಸಿದರು. ವಜ್ರಗಳ ಕಿರೀಟ ತೊಡಿಸಿದರು. ಅವರ ಜೋಳಿಗೆಗೆ ಮುತ್ತು ಹೆಣೆದರು. ಅಷ್ಟೇ ಅಲ್ಲ; ಅವರ ಹಳೆಯ ಹರಕು ಚಪ್ಪಲ್ಲಿಗೂ ರತ್ನಗಳ ಅಲಂಕಾರ. ಅವರಿಗಾಗಿ ಬಂಗಾರದ ಪಲ್ಲಕ್ಕಿ ಸಿದ್ಧವಾತು. ನವರತ್ನಗಳ ಅಲಂಕಾರಗಳು ಸಿದ್ಧವಾದವು. ಅವರು ಬಂದರೆ ಇರಲೆಂದು ದೇಶ-ವಿದೇಶಗಳಲ್ಲಿ ನೂರಾರು ರಾಜವೈಭವದ ಮಠಗಳು ನಿರ್ಮಾಣವಾದವು. ಏರ್ ಕಂಡೀಷನ್ಡ್ ಬಂಗಲೆಗಳು ಸಿದ್ಧವಾದವು.

ಏನಿದ್ದರೂ ಕಂಬಳಿ ತಾತ ಜಪ್ಪೆನ್ನಲಿಲ್ಲ. ಅವನ ಕವುದಿ ಅವನಿಗೆ. ಅವನ ರವುದಿ ಅವನಿಗೆ.

ಆತ ಮಹಾನ್ ಪವಾಡಪುರುಷ. ಸತ್ತವರನ್ನು ಹೊರಳಿ ಹುಟ್ಟಿಸಿದ ಲೀಲಾಪುರುಷ. ಭಯಂಕರ ಭವರೋಗಗಳಿಂದ ಬಳಲಿದವರಿಗೆ ಬರಿಯ ನೋಟದಿಂದ ಸೆಕೆಂಡಿನಲ್ಲಿ ರೋಗ ಕಳೆದ ಮಹಾಮುನಿ ಕಂಬಳಿ ತಾತಯ್ಯ... ಅಂತೂ ಕೊನೆಗೊಮ್ಮೆ ತಾನೇ ಜಡ್ಡಿಗೆ ಬಿದ್ದು ಹಾಸಿಗೆ ಹಿಡಿದ. ಮರಣಮಂಚ ಏರಿದ.

ಈಗ ಕಂಬಳಿ ತಾತನನ್ನು ಅವನ ಶಿಷ್ಯರು ಪ್ರೀತಿಯಿಂದ ಬಂಧಿಸಿದರು. ಜಗತ್ತಿನ ನಿಷ್ಣಾತ ವೈದ್ಯರು ಬಂದರು. ಮಠದ ಹೆಲಿಕ್ಯಾಪ್ಟದಲ್ಲಿ ತಾತಯ್ಯನವರನ್ನು ಅನೇಕ ಉತ್ಕೃಷ್ಟ ನಗರಗಳ ದವಾಖಾನೆಗಳಿಗೆ ಕರೆದೊಯ್ಯಲು ಮಾಡಿದ ಪ್ರಯತ್ನ ವ್ಯರ್ಥವಾಯಿತು. ಆತ ಅದೇ ತನ್ನ ಹಳೇ ಗಾವಟ ವೈದ್ಯನ ಬಳಿಗೆ ಮೂರು ರೂಪಾಯಿ ಕೊಟ್ಟು ಔಷಧಿ ಕುಡಿದ.

ತಾತಯ್ಯ ಶಿಷ್ಯರಿಗೆ ಹೇಳಿದ –

''ಹುಚ್ಚಪ್ಪಗಳಿರಾ... ಇದು ಮಣ್ಣ ಕಾಯ... ಮಣ್ಣಿಗೆ ಹೊರಟಿದೆ... ಸಾವಿಗೆ ಸೋಬಾನ ಹಾಡಿರಿ. ಸಾವು ಸೂತಕವಲ್ಲ... ಸುಂದರ. ಉಸಿರಪ್ಪ ಹೊಂಟಾಗ ದೇಹಪ್ಪ ಗಪ್ಪ ಇರಬೇಕು. ಮ್ಯಾಗ ಹೊಂಟಾನ ಹೋಗ್ಲಿ. ಅವನ ಮಟ್ಟಿಗೆ ಅವನ್ನ ಬಿಟ್ಟಬಿಡ್ರಿ...''

ತಾತಯ್ಯನ ಮಾತನ್ನು ಈ ಶಿಷ್ಯಕೋಟಿ ಕ್ಯಾರೇ ಮಾಡಲಿಲ್ಲ. ಮತ್ತೆ ಬಂದವು ಹೆಲಿಕ್ಯಾಪ್ಟ. ಅತ್ಯಾಧುನಿಕ ವೈದ್ಯಕೀಯ ಶಸ್ತ್ರಚಿಕಿತ್ಸಕರು ಬಂದರು. ಇಂಜೆಕ್ಷನ್ನುಗಳು... ಗುಳಿಗೆಗಳು... ಚಕಪುಗಳು ಚಾಕರಿಗಾಗಿ ಕಾದುನಿಂತವು. ಕಂಬಳಿ ತಾತಯ್ಯನ ಶಾಂತಿವನ ಆಶ್ರಮವೇ ಡಾಲರ್ಸ್ ಕಾಲನಿಯಾಯಿತು!

ತಾತಯ್ಯ ಆ ದಿನ ರಾತ್ರಿ ತನ್ನ ಬಳಿಗೆ ಬಂದ ಆ ಹಳೇ ಹರಕು ಪರ್ಸನಲ್ ದೇಶೀವೈದ್ಯನಿಗೆ ಕೇಳಿದ –

''ಗೆಳೆಯಾ... ಶರಣನಿಗೆ ಮರಣವೇ ಮಹಾನವಮಿ... ಶರಣರ ಗುಣ ಮರಣದಲ್ಲಿ ನೋಡಬೇಕು. ಆದರೆ ಈ ನನ್ನ ಅಪರಂಪಾರ ಶಿಷ್ಯರು ... ನನ್ನನ್ನ ನನ್ನ ಮಟ್ಟಿಗೆ ಸಾಯಲು ಯಾಕ ಬಿಡವಲ್ಲರು? ದಿನ ಬೆಳಗಾದರೆ ನನಗಾಗಿ ಕೋಟಿಗಟ್ಟಲೆ ಹಣ ಖರ್ಚು ಮಾಡುತ್ತಿದ್ದಾರೆ! ಶಿವನ ಹಣ ಈ ಶವಕ್ಕೆ ಯಾಕೆ ಪೋಲು ಮಾಡುತ್ತಾರೆ? ...ಇದು ನ್ಯಾಯವೇ?''

ಆ ಅಡಾವುಡಿ ಫ್ರೆಂಡ ಡಾಕ್ಟರ್ ನಕ್ಕು ನುಡಿದ –

''ತಾತಯ್ಯಾ... ಈ ಜಗತ್ತಿನ ಯಾವುದೇ ಧರ್ಮದ ಯಾವುದೇ ಪಂಥದ... ಯಾವುದೇ ಆಶ್ರಮದ... ಯಾವುದೇ ಮಹಾಪುರುಷನ ಕಡೇ ಹಣೇಬರಹವೇ ಇದು! ತಮ್ಮ ಗುರುವನ್ನು ಅವರು ಪುಕ್ಕಟೇ ಸಾಯಲು ಬಿಡುವುದೇ ಇಲ್ಲ..''

ಕಂಬಳಿ ತಾತ ಮತ್ತೆ ಕೇಳಿದ –

''ಯಾಕೆ... ಹಾಗೇಕೆ ಮಾಡ್ತಾರೆ ಶಿಷ್ಯರು?''

ಡಾಕ್ಟರ್ ಮತ್ತೆ ನಕ್ಕು ಹೇಳಿದ –

''ಅಜ್ಜಯ್ಯಾ, ಗುರುವಿನ ಸಾವಿನ ಮಜ್ಜಿಗಿಯಲ್ಲಿ ಇವರು ತಮ್ಮ ಬೆಣ್ಣೆ ಕಡಕೊಳ್ಳುತ್ತಾರೆ... ಗುರುವಿನ ಸಾವಿನಲ್ಲಿ ಈ ಶಿಷ್ಯೋತ್ತಮರು ತಮ್ಮ ಸದ್ಯದ ಹಾಲಿ ಮಠವನ್ನು ಖಾಲಿ ಮಾಡದೇ... ಖಾಯಂ ಮಾಡಿಕೊಳ್ಳುತ್ತಾರೆ...''

''ಅಂದರೆ... ಏನಪ್ಪಾ ನಿನ್ನ ಮಾತು...? ಅರ್ಥ ಆಗಲಿಲ್ಲ ನನಗೆ!''

''ಅರ್ಥವಾದರೆ ವಿಲಿವಿಲಿ ಒದ್ದಾಡಿ ಸಾಯ್ತೀದಿ... ಅರ್ಥವಾಗದಿದ್ದರೆ ಸುಮ್ಮನೇ ಸುಖದಿಂದ ಸಾಯುತ್ತೀ...''

''ಅಂದ್ರ...?''

ಡಾಕ್ಟರ ಮತ್ತೆ ವಕ್ರವಾಗಿ ನಕ್ಕು ಹೇಳಿದ –

''ಅಜ್ಜಯ್ಯಾ... ಆ ಶಿಷ್ಯರು ಮೊದಲು ನಿನ್ನ ಬಳಿಗೆ ರೊಟ್ಟಿ-ಸಾರಿಗೆ ಬಂದರು. ನೀನು ರೊಟ್ಟಿ ಕೊಟ್ಟೆ... ಕೆಟ್ಟೆ! ನಂತರ ನಿನಗೆ ನಿನ್ನ ಕಂಬ್ಳಿ ಖಾಯಂ ಆತು. ಅವರಿಗೆ ಅವರ ಕಾರಿನ ಉಂಬ್ಳಿ ಖಾಯಂ ಆತು... ವಿಮಾನದ ಮೇಲೆ ವಿಮಾನು... ಕಮಾನಿನ ಮೇಲೆ ಕಮಾನು ಠಿಕಾಣಿ ಆತು. ಈಗ ಅವರಿಗೆ ನಿನ್ನ ವೈರಾಗ್ಯದ ಮೇಲೆ ಪ್ರೀತಿ ಇಲ್ಲ... ನಿನ್ನ ವೈರಾಗ್ಯಕ್ಕೆ ನಿನ್ನ ಈ ಹರಕು ತಟ್ಟಿನಷ್ಟೇ ಕಿಮ್ಮತ್ತು ಅವರಿಗೆ... ಈಗ ಅವರಿಗೆ ನೀನು ಬೇಕಾಗಿಲ್ಲ... ನೀನು ಯಾವುದಕ್ಕೆ ಬೇಡ ಅಂದ್ಯೋ... ಅದೆಲ್ಲಾ ಅವರಿಗೆ ಈಗ ಅರ್ಜಂಟ ಬೇಕಾಗಿದೆ... ತಿಳಕೊ...''

ವೈರಾಗ್ಯನಿಧಿ ಮಹಾಯೋಗಿ ಮಲಮಲ ಮರುಗಿ ಎದೆಯೊಡೆದು ಕಣ್ಣು ಬೆಳ್ಳಗೆ ಮಾಡಿದ! ಅಂತರಂಗದ ರಾಜಹಂಸ ಪಕ್ಷಿ ಮೆಲ್ಲಮೆಲ್ಲನೆ ಮೇಲೆ ಹಾರಿಹೋಯಿತು!

**ಪ್ರೊ|| ಜಿ. ಎಚ್. ಹನ್ನೆರಡುಮಠ**
'ಮಾವು ಮಲ್ಲಿಗೆ', ಯೋಗ ಭವನ : ಇಂದ್ರಪ್ರಸ್ಥ, ನ್ಯಾಶನಲ್ ಪಾರ್ಕ ರಸ್ತೆ,
ಗೊಟ್ಟಿಗೆರೆ ಅಂಚೆ, ಬೆಂಗಳೂರು - ೫೬೦ ೦೮೩.





# ಬಂಡವಾಳದ ಕಬಂಧ ಬಾಹುವಿನಲ್ಲಿ ಕನ್ನಡತನ

‘ಬೆಂಗಳೂರು’ ಎಂದು ದೇವನಹಳ್ಳಿಯ ಅಂತರರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ಹೆಸರಿಡುವುದು ಸುಲಭ. ಸೂಚಿಸಿರುವ ಬೇರಾವ ಹೆಸರಿಟ್ಟರೂ ಅದು ಅದರ ಕನ್ನಡತನವನ್ನು ಗುರುತಿಸುವ ಪ್ರಯತ್ನವಾಗುತ್ತದೆ. ಅದು ಈ ನಗರದ ಕೇವಲ ರಾಷ್ಟ್ರೀಯ ಸ್ವರೂಪವನ್ನಲ್ಲ, ಬಹು ಬೇಗ ವಾಸ್ತವವಾಗುತ್ತಿರುವ ಅದರ ಅಂತರರಾಷ್ಟ್ರೀಯತೆಯ ಸ್ವರೂಪಕ್ಕೆ ಒಗ್ಗುವುದಿಲ್ಲ. ಈಗ ‘ಬೆಂಗಳೂರು’ ಎಂಬುದು ಅಂತರರಾಷ್ಟ್ರೀಯವಾಗಿ ಮಾರಾಟವಾಗುವ ಚಿಹ್ನೆ. ಹೀಗೆ ಬೆಂಗಳೂರು ಕನ್ನಡೇತರವಾದುದು ಇತ್ತೀಚಿನ ಬೆಳವಣಿಗೆಯಲ್ಲ. ಆದರೆ ಜಾಗತೀಕರಣಕ್ಕೆ ಶರಣುಹೋದಮೇಲೆ ಈ ಪರಿವರ್ತನೆ ಕ್ಷಿಪ್ರಗತಿಯದಾಗಿದ್ದು, ಈ ವೇಗ ಇಲ್ಲಿ ಇನ್ನೂ ಬದುಕುಳಿದಿರುವ ಕನ್ನಡತನಕ್ಕೆ ಉಸಿರುಕಟ್ಟಿಸಿ, ಕಷ್ಟವಾಗಿದೆ ಅಷ್ಟೆ. ಬ್ರಿಟಿಷ್ ರೆಸಿಡೆಂಟನ ಹಾಗೂ ಅವನ ಸೇನೆಯ ಕೇಂದ್ರವಾದಂದಿನಿಂದಲೇ ಇದು ಅಖಿಲ ಭಾರತ ನಕ್ಷೆಯಲ್ಲಿ ಮುಖ್ಯವಾಗಿ ಬಿಟ್ಟಿತ್ತು. ಕನ್ನಡದವರ ಆಡಳಿತವೆಂಬ ಮೈಸೂರರಸರ ಮೇಲೆ ನಿಗಾ ಇಡಲು ಮದರಾಸಿನ ಪ್ರೆಸಿಡೆನ್ಸಿ ಜವಾಬ್ದಾರಿ ವಹಿಸಿಕೊಂಡಾಗಲೇ ಇಲ್ಲಿಗೆ ತಮಿಳರ ವಲಸೆ ಆರಂಭವಾಗಿದ್ದು. ಇಲ್ಲಿಯ ಆರ್ಥಿಕತೆ, ಅಂದರೆ ಹಳೆಯ ಮೈಸೂರಿನ ಆರ್ಥಿಕತೆ, ಅಂದಿನ ಮದರಾಸು ಪ್ರಾಂತ್ಯದ ಆರ್ಥಿಕತೆಗೆ ಅಡಿಯಾಳಾಯ್ತು. ಸ್ವಾತಂತ್ರ್ಯದ ನಂತರವೂ ಬಹಳ ಕಾಲ ಈ ಸಂಬಂಧ ಮುಂದುವರಿಯಿತು. ಕರ್ನಾಟಕದ ಅಂಚೆ ತಂತಿ ಇಲಾಖೆ, ರೈಲ್ವೆ ಇಲಾಖೆ ಇವೆರಡೂ ಮದರಾಸ್ ಕೇಂದ್ರದಿಂದಲೇ ನಿರ್ದೇಶಿಸಲ್ಪಟ್ಟು ಸುಮಾರು ಎಪ್ಪತ್ತರ ದಶಕದವರೆಗೂ ಇಲ್ಲೂ ತಮಿಳು ಅಧಿಕಾರಿಗಳದ್ದೇ ಪ್ರಭಾವ ಹೆಚ್ಚಿತ್ತು. ಇಂದಿಗೂ ಕೇಂದ್ರದ ಐಎಎಸ್ ವ್ಯವಸ್ಥೆಯಲ್ಲಿ ಹೊರನಾಡಿನವರದೇ ಮೇಲುಗೈ. ಹೇಗೋ ಏನೋ ಕನ್ನಡ ಹುಡುಗರು ಹೆಚ್ಚಿನ ಸಂಖ್ಯೆಯಲ್ಲಿ ಈ ಪರೀಕ್ಷೆಗಳಲ್ಲಿ ತೇರ್ಗಡೆಯೇ ಆಗುವುದಿಲ್ಲ!

ಸ್ವಾತಂತ್ರ್ಯದ ಹೊಸ ದಶಕಗಳಲ್ಲಿ, ಬೆಂಗಳೂರು ಕೇಂದ್ರ ಸರ್ಕಾರದ ವಿಶೇಷ ಆದರಕ್ಕೆ ಪಾತ್ರವಾಯ್ತು. ಅದನ್ನು ಮುಖ್ಯವಾಗಿ ದಕ್ಷಿಣದ ರಕ್ಷಣಾ ಕೇಂದ್ರವೆಂದೇ ಗುರುತಿಸಿದ್ದರಿಂದ. ಮದರಾಸ್ ಕೇಂದ್ರದಿಂದ ನಿರ್ದೇಶಿತ ರೈಲ್ವೆ ಬೆಳವಣಿಗೆ, ಮದರಾಸ್ ಮತ್ತು ಬೆಂಗಳೂರು ನಡುವೆ ಎಲ್ಲಿಲ್ಲದ ತುರ್ತಿನಿಂದ ರೈಲು ಸಂಪರ್ಕವನ್ನು ವಿಸ್ತರಿಸಿದಾಗ, ಬೃಂದಾವನ್ ಎಕ್ಸ್‌ಪ್ರೆಸ್ ಬಂದಾಗ, ಕನ್ನಡಿಗರಿಗೆ ಅದು ತಮಿಳರ ಅನುಕೂಲಕ್ಕಾಗಿ ಎಂದು ಗ್ರಹಿಸುವ ಪ್ರಜ್ಞೆಯೇ ಇರಲಿಲ್ಲ. ಕೇಂದ್ರ ಸರ್ಕಾರದ ಸಾರ್ವಜನಿಕ ಉದ್ದಿಮೆಗಳೆಂಬ ಐಟಿಐ, ಭಾರತ್ ಎಲೆಕ್ಟ್ರಾನಿಕ್ಸ್, ಹೆಚ್‌ಎಂಟಿ ಕಂಪನಿಗಳು ಮುಖ್ಯವಾಗಿ ರಕ್ಷಣಾ ಇಲಾಖೆಯ ಅಗತ್ಯಗಳನ್ನು ಗಮನಿಸಿದ್ದು, ಈ ಇಲಾಖೆಯ ನೌಕರಿಗಳಲ್ಲಿ ತುಂಬಿಕೊಂಡವರು ಹೊರನಾಡಿನವರೇ ಹೆಚ್ಚು. ನಾವು ಚಿಕ್ಕಂದಿನಲ್ಲಿ ಈ ಬೆಳವಣಿಗೆಯನ್ನು ಗಮನಿಸಲೇ ಇಲ್ಲ. ಇದೆಲ್ಲಾ ಕರ್ನಾಟಕದ, ಕನ್ನಡಿಗರ ಬೆಳವಣಿಗೆ ಎಂದು ಉಬ್ಬಿಹೋಗಿದ್ದವು. ಈ ಉದ್ದಿಮೆಗಳಲ್ಲೂ ಸ್ಥಳೀಯರಿಗೆ ಪ್ರಾಶಸ್ತ್ಯವೆಂಬ ಮಾತಿದ್ದರೂ, ‘ಡಿ’ ಗುಂಪಿನ ಕೆಳದರ್ಜೆಯ ನೌಕರಿಗೂ ಉನ್ನತಾಧಿಕಾರಿ ಮಲೆಯಾಳಿಯೋ, ತಮಿಳನೋ ಎಂಬುದನ್ನು ಆಧರಿಸಿ, ಆ ಭಾಷಿಕರನ್ನು ಆರಿಸಿಕೊಂಡರು. ಅಂಚೆ ಮತ್ತು ತಂತಿ ಇಲಾಖೆಯಲ್ಲಿ ಈ ದರ್ಜೆಗೆ ಏಳನೆಯ ತರಗತಿಯ ಮತ್ತು ಕನ್ನಡದ ಓದು-ಬರಹದ ತಿಳುವಳಿಕೆ ಅಗತ್ಯ ಎಂಬ ನಿಯಮ ಇದ್ದರೂ, ಇದನ್ನು ಮುಚ್ಚಿಟ್ಟು ತಮಿಳರನ್ನೇ ಸೇರಿಸಿಕೊಂಡರು. ನಾನು ಬೆಂಗಳೂರು ಟೆಲಿಫೋನ್ ಇಲಾಖೆಯಲ್ಲಿ ರೆಕ್ರೂಟ್ ಮೆಂಟ್ ಅಧಿಕಾರಿಯಾಗಿದ್ದಾಗ ಈ ವಿಷಯ ನನ್ನ ಗಮನಕ್ಕೆ ಬಂದು, ನನ್ನ ಉನ್ನತ ಅಧಿಕಾರಿಯಾಗಿದ್ದ ತಮಿಳನಿಗೆ ತಿಳಿಸಿದೆ. ಆದರೆ ಆತ ಕನ್ನಡದ ತಿಳಿವನ್ನು ಪರೀಕ್ಷಿಸಲು ಒಪ್ಪದಿದ್ದಾಗ ನಾರಾಯಣ ಕುಮಾರ್‌ಗೆ ಹೇಳಿ ಪ್ರದರ್ಶನ ಗಲಾಟೆ ಏರ್ಪಡಿಸಿದೆ. ನಂತರ ತಮಿಳು ಅಭ್ಯರ್ಥಿಗಳು ಕನ್ನಡದ ಜ್ಞಾನ ಪಡೆದು, ಪರೀಕ್ಷೆಯಲ್ಲಿ ಪಾಸಾಗುವ ಪ್ರಯತ್ನ ಪ್ರಾರಂಭಿಸಿದರು. ಆಗಷ್ಟೆ ನಮ್ಮ ಚಿಕ್ಕ ಬಾಣಾವರದ ಕನ್ನಡ ಕೆಲಸದವರಿಗೆ ಒಂದಿಷ್ಟು ಅವಕಾಶ ಹೆಚ್ಚಿತು. ಈಗಲೂ ರೈಲ್ವೆ ಇಲಾಖೆ ಈ ನಿಯಮವನ್ನು ಉಲ್ಲಂಘಿಸುತ್ತಿರುವುದು ಸ್ಪಷ್ಟ. ಈ ನಿಯಮ ಎಲ್ಲರಿಗೂ ಅನ್ವಯವಾಗುವ ಕೇಂದ್ರ ಗೃಹಮಂತ್ರಾಲಯದ ಆದೇಶ. ಏನಿದ್ದರೂ ಇನ್ನು ಮುಂದೆ **ಕರ್ನಾಟಕದಲ್ಲಿ ಇರುವ ಎಲ್ಲರ, ಎಲ್ಲ ಉದ್ಯಮಗಳಲ್ಲೂ ಈ ನಿಯಮವನ್ನೇ ಪಾಲಿಸಬೇಕೆಂದು ಒತ್ತಾಯ ಪಡಿಸಬೇಕಷ್ಟೆ.**

ರಾಷ್ಟ್ರೀಯವಾಗಿ ಸುವರ್ಣ ಚತುಷ್ಪಥ ಇಡೀ ರಾಷ್ಟ್ರವನ್ನು ಒಂದು ಮಾರುಕಟ್ಟೆಯನ್ನಾಗಿ ಬೆಸೆಯಲು ತೆಗೆದುಕೊಂಡ ಮಹತ್ಪ್ರಯತ್ನ. ಈ ಪ್ರಯತ್ನವನ್ನೇ ಮುಂದುವರಿಸಿ, ದೆಹಲಿ-ಮುಂಬಯಿ ನಡುವೆ ಶೀಘ್ರವಾಗಿ ಸರಕು ಸಾಗಣೆಗಾಗಿ ವಿಶೇಷ ಅಭಿವೃದ್ಧಿಯ ಯೋಜನೆ ಸಿದ್ಧವಾಗಿದೆ. ಇದಕ್ಕೆಂದೇ ಪ್ರತ್ಯೇಕ ರೈಲು ಹಳಿಯನ್ನು ಹಾಕುತ್ತಾರೆ. ಕರುಣಾನಿಧಿ ಬೆಂಗಳೂರು – ಮದರಾಸು ನಡುವೆ ಇಂಥದೇ ಅಭಿವೃದ್ಧಿಗೆ ಒತ್ತಾಯಿಸಿದ್ದಾರೆ. ಕರ್ನಾಟಕದ ವಾಣಿಜ್ಯ ಮಂಡಳಿ, ಬೆಂಗಳೂರು-ಮುಂಬಯಿ ನಡುವೆ ಈ ಸಂಪರ್ಕ ಹೆಚ್ಚು ಅಗತ್ಯವೆನ್ನುತ್ತದೆ. ಕರ್ನಾಟಕದ ದೃಷ್ಟಿಯಿಂದ ಬೆಂಗಳೂರು - ಮಂಗಳೂರಿನ, ಕಾರವಾರದ ನಡುವೆ ಇದು ತೀರ ಅಗತ್ಯ. ಈ ಎಲ್ಲ ಬೆಳವಣಿಗೆಗಳೂ ಕರ್ನಾಟಕದವರು ಒಮ್ಮೆಗೆ [illegible] ಬಿರದೆ, [illegible] ಬಯಸುವುದರಿಂದ, [illegible] ಆಗುತ್ತದೆ

**ಕೆ. ಎಸ್. ಪಾರ್ಥಸಾರಥಿ**

ಮದರಾಸಿನಿಂದ ಮೈಸೂರಿಗೆ ಹಾಕಿದ ಶತಾಬ್ದಿ ರೈಲು ತಮಿಳರನ್ನು ಈಗ ಬೆಂಗಳೂರಿನಿಂದ ಆಚೆಗೂ ನೆಲೆಸಲು ಸಹಾಯ ಮಾಡುತ್ತಿದೆ. ಬರಲಿರುವ ದಶಕಗಳಲ್ಲಿ ಕರ್ನಾಟಕ ಹೊರನಾಡಿನವರ ವಲಸೆಗೆ ಇತೋಪ್ಯತಿಶಯವಾಗಿ ತೆರೆದುಕೊಳ್ಳುತ್ತದೆ.

ಈ ಬೆಳವಣಿಗೆಯನ್ನು ರಾಜಕೀಯವಾಗಿ ಇತರ ಭಾಷಿಕರ, ರಾಜ್ಯಗಳ ಆಕ್ರಮಣವೆಂದು ವ್ಯಾಖ್ಯಾನಿಸಿದರೆ ಅದನ್ನು ಯಾರೂ ಒಪ್ಪುವುದಿಲ್ಲ. ಪರಿಣಾಮದಲ್ಲಿ ಅದು ಹಾಗೆ ಆಗುತ್ತಿರಬಹುದೇ ವಿನಾ, ಈ ಬೆಳವಣಿಗೆಗೆ ಇರುವ ಪ್ರಚೋದನೆ ಅಂಥದಲ್ಲ. ಅದು ರಾಷ್ಟ್ರೀಯವಾಗಿ ಏಕವಾದ ಮಾರುಕಟ್ಟೆ ಬೆಳವಣಿಗೆ. ಆ ಬೆಳವಣಿಗೆಯ ಹಲವಾರು ಹಾದಿಗಳು, ರಾಜಮಾರ್ಗಗಳು, ಕರ್ನಾಟಕದ ಮೂಲಕವೇ ಹಾದುಹೋಗಬೇಕು. ನಾಲ್ಕೆಂಟು ಪ್ರಾದೇಶಿಕ ಭಾಷಾವಾರು ರಾಜ್ಯಗಳ ನಡುವೆ ಭೌಗೋಳಿಕವಾಗಿ ನೆಲೆಸಿರುವ ಕರ್ನಾಟಕ, ಕೇವಲ ಕನ್ನಡಿಗರ ನಾಡಲ್ಲ, ಇದರ ಜಾಯಮಾನವೇ ಇತರರೆಲ್ಲಾ ಹಾಯ್ದು ಹೋಗುವ ಹಾದಿಗೆ ನಡೆಮಡಿಯನ್ನು ಹಾಸುವುದು !

ಭಾರತದ ರಾಷ್ಟ್ರೀಯತೆ ಎಂಬುದು ಇನ್ನೂ ಬೆಳೆದು ಪಕ್ವವಾಗಬೇಕಾದ ಕಲ್ಪನೆ. ಭಾಷಾವಾರು ಪ್ರಾಂತ್ಯಗಳೆಂಬ ಉಪ ರಾಷ್ಟ್ರೀಯತೆಗಳನ್ನು ಗೌರವಿಸುವುದು, ಈ ರಾಷ್ಟ್ರೀಯತೆಯ ಕಲ್ಪನೆಗೆ ಸಾಕಾರ ಕೊಡುವ ಆ ಕಾಲದಲ್ಲಿ ಅನಿವಾರ್ಯವಾಗಿತ್ತು. ವಿಭಿನ್ನತೆಯಲ್ಲಿ ಏಕತೆಯೆಂಬ ಕಲ್ಪನೆಯನ್ನು ಇದಕ್ಕಾಗಿಯೇ ಸೃಷ್ಟಿಸಿದ್ದು. ಇದರ ಹಿಂದೆ, ಇಂತಹ ರಾಷ್ಟ್ರೀಯತೆ ಏಕೆ ಅಗತ್ಯವೆಂಬ ಐತಿಹಾಸಿಕ ಕಾರಣವನ್ನೂ ಈ ಎಲ್ಲ ಉಪ ರಾಷ್ಟ್ರೀಯತೆಗಳೂ ಗುರುತಿಸಿ, ಒಪ್ಪಿಕೊಂಡಿದ್ದವು. ಕಳೆದ ಅರವತ್ತು ವರ್ಷಗಳಲ್ಲಿ ಈ ಉಪ ರಾಷ್ಟ್ರೀಯತೆಗಳು, ತಂತಮ್ಮ ಐತಿಹಾಸಿಕ ಅನುಭವಗಳ ಹೊರೆಗಳನ್ನು ಹೊತ್ತು, ಪರಸ್ಪರ ಪ್ರತಿಕ್ರಿಯಿಸಿವೆ. ಸಹಜ ವಾಗಿಯೇ ಕೆಲವು ಉಪರಾಷ್ಟ್ರೀಯತೆಗಳು ಇತರೆ ಕೆಲವಕ್ಕಿಂತ ಬಲಿಷ್ಠವಾಗಿವೆ. ಈ ಬಲಿಷ್ಠತೆ ಎಂಬುದು ಜನಸಂಖ್ಯೆ, ಅದರ ಗುಣ ಲಕ್ಷಣ, ಆ ಪ್ರದೇಶಗಳ ಐತಿಹಾಸಿಕ ಅನುಭವ, ಆರ್ಥಿಕ ಶಕ್ತಿ, ರಾಜಕೀಯ ಪ್ರಬುದ್ಧತೆ ಮುಂತಾದುವುಗಳನ್ನು ಅವಲಂಬಿಸಿದಂಥದು.

ಭಾರತ ಸ್ವಾತಂತ್ರ್ಯವನ್ನು ಕಳೆದುಕೊಂಡ ಎರಡು ಶತಮಾನಗಳಲ್ಲಿ ಬ್ರಿಟಿಷರ ಆಡಳಿತವನ್ನು ಮೊಟ್ಟಮೊದಲಿಗೆ ಮನಸಾರ ಸ್ವೀಕರಿಸಿದ ಪ್ರಾಂತ್ಯವೆಂದರೆ ಅಂದಿನ ಮದರಾಸ್ ಪ್ರೆಸಿಡೆನ್ಸಿ. ಮಿಕ್ಕೆಲ್ಲ ಪ್ರದೇಶಗಳಿಗಿಂತ ಮುಂಚೆ ಇಲ್ಲಿ ರಾಜಕೀಯ ಸುಸ್ಥಿರತೆ ನೆಲಸಿ, ವಾಣಿಜ್ಯ, ಕೈಗಾರಿಕೆಗಳಲ್ಲಿ, ಆಡಳಿತಾತ್ಮಕವಾಗಿ ಈ ಪ್ರದೇಶ ಮಿಕ್ಕ ಪ್ರದೇಶಗಳಿಗಿಂತ ಮುಂದುವರಿದು ಅಭಿವೃದ್ಧಿಯ ಹಾದಿ ಹಿಡಿಯಿತು. ಹಳೆಯ ಮೈಸೂರು, ಮತ್ತು ಇತರ ಭಾಗಗಳಲ್ಲಿ ಸೇರಿಹೋಗಿದ್ದ ಕರ್ನಾಟಕದ ಭಾಗಗಳು (ಬಹುಶಃ ದಕ್ಷಿಣ ಕನ್ನಡವನ್ನು ಇದಕ್ಕೆ ಹೊರತಾಗಿಸಿ) ಅನ್ಯ ಭಾಷಿಕರ ರಾಜ್ಯಗಳಲ್ಲಿ ಸಿಲುಕಿ, ಅನಾದರಣೆಗೆ ಒಳಗಾಗಿ, ಆರ್ಥಿಕವಾಗಿ, ವಾಣಿಜ್ಯದಲ್ಲಿ ಬಡವಾದುವು. ಹಳೆಯ ಮೈಸೂರಿನಲ್ಲೂ ವ್ಯಾಪಕವಾಗಿ ಮೂಲಭೂತ ರಾಜಕೀಯ ಪ್ರಜ್ಞೆ ಬಹಳ ಕಾಲ ತಲೆ ಹಾಕಲೇ ಇಲ್ಲ. ಈ ಬೆಳವಣಿಗೆಯಿಂದಾಗಿ ಹೊಸ ಒಕ್ಕೂಟದಲ್ಲಿ ಕರ್ನಾಟಕದ ರಾಜಕೀಯ ವ್ಯಕ್ತಿಗಳು ಯಾವಾಗಲೂ ರಾಷ್ಟ್ರೀಯವಾಗಿ ಕೀಳರಿಮೆಯಿಂದಲೇ ಭಾಗವಹಿಸಿದ್ದಾರೆ. ಒಬ್ಬ ಕೆಂಗಲ್ಲರನ್ನೋ, ಅರಸು ಅವರನ್ನೋ ಬಿಟ್ಟರೆ, ಮಿಕ್ಕವರೆಲ್ಲ ಕರ್ನಾಟಕದ ಪ್ರತಿನಿಧಿಗಳಾಗದೇ ಕೇವಲ ಬಿಡಿ ಬಿಡಿ ವ್ಯಕ್ತಿಗಳಂತೆ, ದೆಹಲಿಯ ಅಡಿಯಾಳುಗಳಂತೆ ವರ್ತಿಸುತ್ತಾ ಬಂದಿದ್ದಾರೆ. ಇವರಾರಿಗೂ ಈ ಅರವತ್ತು ವರ್ಷಗಳಲ್ಲಿ ಕರ್ನಾಟಕವು ಅನ್ಯ ಭಾಷಿಕರ, ಹೊರ ಬಂಡವಾಳದ ಪರಭಾರೆಯಾಗುತ್ತಿರುವುದರ ಬಗ್ಗೆ ಪ್ರಜ್ಞೆಯಾಗಲೀ, ಕಾಳಜಿಯಾಗಲೀ ಇರಲೇ ಇಲ್ಲ. ಇತ್ತೀಚಿನ ಧರಂಸಿಂಗರೂ, ದೇವೇಗೌಡರೂ, ಕುಮಾರಸ್ವಾಮಿಯೂ ಇದಕ್ಕೆ ಹೊರತಲ್ಲ. ಅದಕ್ಕೇ ನಮ್ಮ ಆಂತರಿಕ ಆರ್ಥಿಕ ವ್ಯವಸ್ಥೆ ಕುಗ್ಗಿರುವುದು, ಇತರೆ ರಾಜ್ಯಗಳು ನಮ್ಮ ಎಲ್ಲ ನದಿಗಳ ಬಗ್ಗೆಯೂ ಸಮಸ್ಯೆ ಉಂಟುಮಾಡಿ, ಹೊರಗಿನವರದೇ ಮೇಲುಗೈ ಆಗಿರುವುದು, ನಮ್ಮ ಸಂಪನ್ಮೂಲಗಳೆಲ್ಲ ಹೊರನಾಡಿನ ಬಂಡವಾಳಿಗರ ವಶವಾಗಿರುವುದು, ನಮ್ಮ ಬಂದರುಗಳು ಬೆಳೆಯದಿರುವುದು, ನಮ್ಮ ಅರಣ್ಯ ನಾಶವಾಗುತ್ತಿರುವುದು, ನಮ್ಮ ಕೃಷಿ ಮೂಲೆಗುಂಪಾಗಿ ನಮ್ಮ ಆಹಾರಕ್ಕೂ ಹೊರಗಡೆಯಿಂದ ಆಮದು ಆಗಬೇಕಾಗಿರುವುದು, ನಮ್ಮ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದು.

ನಮ್ಮ ಇಷ್ಟ-ಕಷ್ಟ ಅನಿಸಿಕೆ ಏನೇ ಇರಲಿ, ಜಾಗತೀಕರಣ, ಉದಾರೀಕರಣ, ಖಾಸಗೀಕರಣಗಳ ಬೆಳವಣಿಗೆಯ ಭರಾಟೆ ರಾಷ್ಟ್ರಾದ್ಯಂತ ಅಲ್ಲಲ್ಲಿಯ ಪ್ರಾದೇಶಿಕತೆಯನ್ನು ಬಲಿ ತೆಗೆದು ಕೊಳ್ಳುತ್ತಿರುವುದು ಇಂದಿನ ವಾಸ್ತವ. ಈ ಬೆಳವಣಿಗೆ ಮೊದಲಿಗೆ ರಾಷ್ಟ್ರೀಯವಾಗಿ, ವೈವಿಧ್ಯತೆಗಳನ್ನು ನಾಶಪಡಿಸುತ್ತದೆ. ಏಕರೂಪತೆಯನ್ನು ಸ್ಥಾಪಿಸುತ್ತದೆ. ಇದು ಮುಂದುವರಿದು, ಜಾಗತಿಕವಾಗಿಯೂ ಈ ಏಕ ರೂಪತೆಗಾಗಿ ಹೆಣಗಾಡುತ್ತಾರೆ. ಅಮೆರಿಕಾದ ತಿನಿಸು, ವೇಷ ಭೂಷಣ, ಸಂಗೀತ, ಸಿನಿಮಾ ಇಂದು ಬೆಂಗಳೂರನ್ನು ಆವರಿಸಿರುವುದು ಇದರ ಒಂದು ಸ್ವರೂಪ. ಬಂಡವಾಳಿಗರ ಮೆಕ್ಕಾ, ಅಮೆರಿಕಾ. – ಇಲ್ಲಿ ಅಮೆರಿಕಾ ಅಂದರೆ ಅದು ಅಮೆರಿಕಾ ಸಂಯುಕ್ತ ಸಂಸ್ಥಾನವೆಂದೇ ಅರ್ಥ! ದಕ್ಷಿಣ ಅಮೆರಿಕಾ, ಮೆಕ್ಸಿಕೋ, ಕೆನಡಾ ಇವೆಲ್ಲ ಅಮೆರಿಕಾವೇ ಆದರೂ, ಜಾಗತಿಕ ರಂಗದಲ್ಲಿ ಅಮೆರಿಕಾ ಎಂದರೆ ಅಮೆರಿಕಾ ಸಂಯುಕ್ತ ಸಂಸ್ಥಾನ ಮಾತ್ರ ಎಂಬ ತಿಳಿವಳಿಕೆಯೂ ಬಂಡವಾಳದ ಜಾಗತೀಕರಣದ ಒಂದು ಇಂಗಿತ. ಭಾರತ ತನ್ನ ವೈವಿಧ್ಯತೆಯನ್ನು ಕಳೆದುಕೊಂಡು ಏಕರೂಪವಾಗುತ್ತಿದೆ. ಇದು ತಮಿಳುನಾಡಿನಲ್ಲಿ ತಡವಾಗಿಯಾದರೂ ಸ್ಪಷ್ಟವಾಗುತ್ತಿದೆ. ಪಶ್ಚಿಮ ಬಂಗಾಳ ಇದಕ್ಕೆ ಶರಣಾಗುತ್ತಿದೆ. ಕರ್ನಾಟಕ ಬಹಳ ಬೇಗ ಈ ಬೆಳವಣಿಗೆಗೆ ಬಲಿಯಾಯ್ತು, ಅಷ್ಟೆ. ಮುಂಬಯಿ ಸ್ವಾತಂತ್ರ್ಯಪೂರ್ವದಲ್ಲೇ ಬಹುಭಾಷಿಕರ ಕಾಸ್ಮೋಪಾಲಿಟನ್ ನಗರವಾಗಿತ್ತು. ಅದನ್ನು ಮಹಾರಾಷ್ಟ್ರದ ಮರಾಠಿ ಕೇಂದ್ರವನ್ನಾಗಿ ಮಾಡಿಕೊಳ್ಳುವ ಪ್ರಯತ್ನ ವ್ಯರ್ಥ. ಶಿವಸೇನೆಯ ಸೊಲ್ಲು ಬಹಳ ಬೇಗ ಅಡಗಿದರೆ ಆಶ್ಚರ್ಯವಿಲ್ಲ. ಕಾರಣ ಅಂಥ ಪ್ರತಿರೋಧವನ್ನು ಹತ್ತಿಕ್ಕಲು ದೇಶದ ಇಡೀ ಬಂಡವಾಳಿಗರ ತಂಡವೇ ಎದ್ದುನಿಂತಿದೆ. ತಮಿಳುನಾಡಿನಲ್ಲೂ ಈ ಬೆಳವಣಿಗೆ ಅನಿವಾರ್ಯ.

ಬಂಡವಾಳಕ್ಕೆ ತನ್ನದೇ ಆದ ರಾಷ್ಟ್ರೀಯತೆ ಎಂಬುದು ಇಲ್ಲ. ಸಂಸ್ಕೃತಿ ಅದರ ಬೆಲೆವೆಣ್ಣು, ಕ್ರೀಡೆ ಅದರ ಮಾರುಕಟ್ಟೆ. ಕ್ರಿಕೆಟ್‌ಗೆ ಆಗಿರುವ ಗತಿ ನೋಡಿ! ಬಂಡವಾಳದ ಕೃಪಾಪೋಷಿತ ಮಧ್ಯಮವರ್ಗದ ಸಂಖ್ಯೆ ಗಣನೀಯವಾಗಿ ವಿಸ್ತರಿಸಿದೆ. ಇದಕ್ಕೂ ನೆಲ, ಜಲ, ಭಾಷೆ, ಸಂಸ್ಕೃತಿಯ ಬಂಧನವಿಲ್ಲ. ಎಲ್ಲಿ ತನ್ನ ಸ್ವಾರ್ಥಸಾಧನೆ ಇದೆಯೋ ಅದರತ್ತ ಇದು ಧಾವಿಸುತ್ತದೆ. ಭಾಷೆ, ಸಂಸ್ಕೃತಿ ಎಂದು ಹೋರಾಡುವ, ನವೆಯುವವರೆಲ್ಲ ಏಕಾಂಗಿಗಳಾಗುತ್ತಿದ್ದಾರೆ. ಅವರ ಹೋರಾಟ ಕೇವಲ ಅನ್ಯ ಭಾಷೆಯವರ ವಿರುದ್ಧವಾದರೆ ಅದು ನಿಷ್ಪ್ರಯೋಜಕ. ಅದು ಇಡೀ ವಾಣಿಜ್ಯದ ಬೆಳವಣಿಗೆಯನ್ನು ನಿರ್ದೇಶಿಸುವ




ಫೆಬ್ರವರಿ ೧೬ ರಂದು ಚಿಕ್ಕಮಗಳೂರಿನಲ್ಲಿ ನಡೆದ ಭಾರತ ಕಮ್ಯುನಿಸ್ಟ್ ಪಕ್ಷದ ೨೦ನೇ ರಾಜ್ಯ ಸಮ್ಮೇಳನದ ಸಂದರ್ಭದಲ್ಲಿ ಹಿರಿಯ ಸಂಗಾತಿಗಳಾದ ಎಂ. ಸಿ. ನರಸಿಂಹನ್, ಆರ್. ಎಸ್. ರಾಜಾರಾಮ್ ಮತ್ತು ಡಾ|| ಜಿ. ರಾಮಕೃಷ್ಣ ಇವರುಗಳನ್ನು ಸನ್ಮಾನಿಸಲಾಯಿತು. ಎಂ. ಸಿ. ನರಸಿಂಹನ್ 'ಹೊಸತು' ಸಮಾಲೋಚಕ ಮಂಡಲಿಯ ಸದಸ್ಯರು, ಆರ್. ಎಸ್. ರಾಜಾರಾಮ್ 'ಹೊಸತು' ಪತ್ರಿಕೆಯ ಪ್ರಕಾಶಕರು ಮತ್ತು ನವಕರ್ನಾಟಕ ಪ್ರಕಾಶನದ 'ಕಾರ್ಯನಿರ್ವಾಹಕ ನಿರ್ದೇಶಕರು' ಮತ್ತು ಡಾ|| ಜಿ. ರಾಮಕೃಷ್ಣ 'ಹೊಸತು' ಸಂಪಾದಕರು.

ಸನ್ಮಾನಿತರ ಪರವಾಗಿ ಮಾತನಾಡುತ್ತಾ ಡಾ|| ಜಿ. ರಾಮಕೃಷ್ಣ ಅವರು ವೈಜ್ಞಾನಿಕ ಸಮಾಜವಾದಕ್ಕಾಗಿ ನಡೆಯುವ ಹೋರಾಟದ ಒಂದು ಭಾಗವಾಗಿ 'ಹೊಸತು' ಪತ್ರಿಕೆಯನ್ನು ಬೆಳೆಸಬೇಕೆಂದು ಕಮ್ಯುನಿಸ್ಟ್ ಕಾರ್ಯಕರ್ತರಲ್ಲಿ ಮನವಿ ಮಾಡಿಕೊಂಡರು







ಬಂಡವಾಳ ವ್ಯವಸ್ಥೆಯ ವಿರುದ್ಧವಾಗದಿದ್ದರೆ, ಅವರಿಂದಲೂ, ಅವರು ನಡೆಸುವ ಕ್ಷಣಿಕ ಹೋರಾಟಗಳಿಂದಲೂ ಭಾಷೆಯನ್ನು ಉಳಿಸಿಕೊಳ್ಳಲು ಸಾಧ್ಯ ವಾಗುವುದಿಲ್ಲ. ಬಂಡವಾಳದ ಭಾಷೆಯ ಮುಂದೆ ಮಿಕ್ಕೆಲ್ಲಾ ಭಾಷೆಗಳು ಸುಪ್ತವಾಗಿ ಬಿಡುತ್ತವೆ. ಇಂಗ್ಲಿಷ್ ಭಾಷೆ ಹಿಂದಿಯ, ತಮಿಳಿನ, ಚೀನಿ, ಜರ್ಮನ್, ಫ್ರೆಂಚ್ ಭಾಷೆಗಳ ಪ್ರತಿರೋಧವನ್ನು ಅರಗಿಸಿಕೊಂಡದ್ದು ಹೀಗೆಯೇ.

ನಮ್ಮ ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ ಹೋರಾಟಗಳನ್ನು ನಡೆಸಬೇಕಾದವರಲ್ಲಿ ಬಹುಭಾಗ ಈಗ ವ್ಯವಸ್ಥೆಯೊಡನೆ ರಾಜಿಮಾಡಿಕೊಂಡವರು. ಅಂಥ ರಾಜಿ ಮಾಡಿಕೊಳ್ಳ ಲಾಗದೆ ಪರಿತಪಿಸುತ್ತಿರುವ ಶೋಷಿತರು ಅಸಂಘಟಿತ ಕಾರ್ಮಿಕರು, ದಲಿತರು, ಅಲ್ಪ ಸಂಖ್ಯಾತರು, ಬಡವರು. ಇವರುಗಳ ಹೋರಾಟದ ಮುಖ್ಯ ಸಂವೇದನೆ ಆರ್ಥಿಕ ಅಭಿವೃದ್ಧಿಯಲ್ಲಿ ತಮಗೆ ಪಾಲು ದೊರೆಯದೆ ಇರುವುದರ ವಿರುದ್ಧವೇ ವಿನಾ ಅದು ತಮ್ಮನ್ನು ಶೋಷಿಸುವ ವ್ಯವಸ್ಥೆಯ ವಿರುದ್ಧವಲ್ಲ. ಅವರಿಗೆ ಭಾಷೆ, ಸಂಸ್ಕೃತಿ ಕುರಿತು ಹೋರಾಟಕ್ಕೆ ಆದ್ಯತೆ ನೀಡಲು ಪುರುಸೊತ್ತಿಲ್ಲ. ಅವರಿಗೆ ಹೊಟ್ಟೆಪಾಡು, ಬದುಕೇ ಮೊದಲ ಸಮಸ್ಯೆ. ರಾಷ್ಟ್ರೀಯತೆಯ ಬಗೆಗೆ ಅವರಿಗೆ ಯಾವ ಕಾಳಜಿ ಇರಲು ಸಾಧ್ಯವಿಲ್ಲ. ಆದಕ್ಕೆಂದೇ ಅವರಲ್ಲಿ ಕೆಲವರು ಭಾರತದ ವಿರುದ್ಧ ಅಂತರರಾಷ್ಟ್ರೀಯವಾಗಿ ಅಮೆರಿಕಾದ ಕಾಂಗ್ರೆಸ್ಸಿನಲ್ಲಿ, ವಿಶ್ವಸಂಸ್ಥೆಯಲ್ಲಿ ಪುಕಾರು ನೀಡಲು ಮುಂದಾಗುತ್ತಾರೆ. ಹಸಿವು ಮಿಕ್ಕೆಲ್ಲವನ್ನೂ ಮೊದಲಿಗೆ ನಿರ್ದೇಶಿಸುತ್ತದೆ. ಇದರ ಪರಿಹಾರದ ನಂತರ ಸಮಯವಿದ್ದರೆ ಭಾಷೆ, ಸಂಸ್ಕೃತಿಗೆ ಕಳವಳ. ಹೊಟ್ಟೆ ತುಂಬಿದವರಿಗೆ ಮತ್ತಷ್ಟು ಸಂಪತ್ತನ್ನು ಕಬಳಿಸುವ ಕಾತುರವನ್ನು ಬಂಡವಾಳ ವ್ಯವಸ್ಥೆ ನಿರಂತರವಾಗಿ ಸೃಷ್ಟಿಸುತ್ತಿರುತ್ತದೆ. ಅದರ ಮಾಧ್ಯಮಗಳು, ಪ್ರಚಾರ ಪ್ರಸಾರಗಳು ನಿರಂತರ ಹಲವು ತೆರನಾದ ಹಸಿವುಗಳನ್ನು ಹರಡಿ, ಪಾಲಿಸಿ, ಪೋಷಿಸುತ್ತಿರುತ್ತದೆ. ಆಗ ಸಂಸ್ಕೃತಿ, ಸಾಹಿತ್ಯದ ಆಯಾಮಗಳೆಲ್ಲಾ ವಾಣಿಜ್ಯದ ಸರಕುಗಳಾಗುತ್ತವೆ. ಬೆಂಗಳೂರಿನಲ್ಲೂ ಕಲಾಕೃತಿಗಳ ಹರಾಜು ಬಂದಿಲ್ಲವೇ ? ಇಂಗ್ಲೆಂಡಿನ ಕ್ರಿಸ್ಟಿ ಹರಾಜು ಸಂಸ್ಥೆ ಕಾಲಿಟ್ಟಿಲ್ಲವೇ ? ನಮ್ಮ ಕಲಾವಿದರು ಇನ್ನುಮೇಲೆ ಜಾಗತಿಕವಾಗಿ ಪ್ರತಿಕ್ರಿಯಿಸುತ್ತಾರೆಯೇ ವಿನಾ ಪ್ರಾದೇಶಿಕವಾಗಿ ಅಲ್ಲ. ಸಾಮಾನ್ಯರಿಗೆ ಟೇಪಿನ, ಸಿ.ಡಿ.ಯ ಸಂಗೀತ, ಶ್ರೀಮಂತರಿಗೆ ಛೇಂಬರ್ ಮ್ಯೂಸಿಕ್, ೧೦೦೦ ರೂ. ಟಿಕೆಟ್! ಹೀಗಿರುವಾಗ ವಾಣಿಜ್ಯದಲ್ಲಿ ಉಪಯೋಗವಿಲ್ಲದ, ಲಾಭ ತರದ ಕನ್ನಡಕ್ಕೆ ಕ್ಯಾರೇ ಎನ್ನುವವರು ಯಾರು ?

ಕರ್ನಾಟಕದ ಪೊಲೀಸರು, ನ್ಯಾಯಾಸ್ಥಾನಗಳು ಏನಿದ್ದರೂ ವ್ಯವಸ್ಥೆಯನ್ನು ರಕ್ಷಿಸುವವರು; ಸೃಷ್ಟಿಸುವವರಲ್ಲ. ಅಲ್ಲಿ ಕನ್ನಡ ಮಾಧ್ಯಮದ ಬಗ್ಗೆ, ಕಾವೇರಿ ನೀರಿನ ಬಗ್ಗೆ ಕನ್ನಡಿಗ ಬಯಸುವ ನ್ಯಾಯ ಸಿಕ್ಕುವುದಿಲ್ಲ. ಶಾಸನ ಸಭೆಯ ರಾಜಕೀಯ ನಾಯಕರಿಗೆ ತಮ್ಮ ವೈಯಕ್ತಿಕ ಸ್ವಾರ್ಥ ಬಿಟ್ಟು ತಮ್ಮ ಊರಿಗಾಗಲಿ, ಜಿಲ್ಲೆಗಾಗಲಿ, ರಾಜ್ಯಕ್ಕಾಗಲಿ ಕೆಲಸ ಮಾಡಲು ಸಮಯವೇ ಇಲ್ಲ. ಮಠಾಧೀಶರೂ ತಮ್ಮ ಪಾರಂಪರಿಕವಾದ ಕೆಲಸ ಬಿಟ್ಟು, ವ್ಯಕ್ತಿ ರಾಜಕೀಯ ನಡೆಸಲು ಪ್ರಾರಂಭಿಸಿದ್ದಾರೆ. ಸಾಹಿತಿಗಳು ಅಖಿಲ ಭಾರತ, ಜಾಗತಿಕ ಸಂವೇದನೆಗಳಿಗೆ ಎರವಾಗುತ್ತಿದ್ದಾರೆ. ಯಾರೆಲ್ಲ ನಮ್ಮ ಕನ್ನಡತನವನ್ನು ಬೆಳೆಸಲು ಸಂವೇದಿಸಬೇಕಿತ್ತೋ ಅವರೆಲ್ಲರೂ ಬಂಡವಾಳ ನಿಯಂತ್ರಿತ ಜಾಗತಿಕ ಮೌಲ್ಯಗಳನ್ನು ಎತ್ತಿಹಿಡಿಯುತ್ತಿದ್ದಾರೆ. ಬೆಂಗಳೂರಿನ ಅರಮನೆ ಮೈದಾನದಲ್ಲಿ ನಡೆಯುವ ವಿದೇಶೀ ಸಂಗೀತದ ವೈಭವವನ್ನು ಕಂಡಾಗ, ಯಾಕೆ ನಮ್ಮ ಯುವಕರು ನಮ್ಮ ನಾಟಕಗಳನ್ನು ನೋಡುವುದಿಲ್ಲ, ಜನಪದವನ್ನು ಗಮನಿಸುವುದಿಲ್ಲ ಎಂದು ಚಿಂತಿಸಬೇಕು.

ಬೆಂಗಳೂರನ್ನು ನುಂಗಿದ ಜಾಗತೀಕರಣ ಪ್ರಕ್ರಿಯೆ ಸದ್ಯದಲ್ಲೇ ಮೈಸೂರನ್ನೂ, ತುಮಕೂರನ್ನೂ ನುಂಗುತ್ತದೆ. ಕನ್ನಡಿಗರಲ್ಲಿ ವಾಂಛಲ್ಯದ ಕೊರತೆ ಎಷ್ಟಿದೆ ಎಂಬುದಕ್ಕೆ ಒಂದೆರಡು ಸಂಗತಿಗಳನ್ನು ಗಮನಿಸಬಹುದು. ಬಳ್ಳಾರಿಯ ಗಣಿಗಳೆಲ್ಲಾ ಪರಕೀಯ ರದ್ದಾಗಿರುವುದಕ್ಕೆ ಕಾರಣ ಅವನ್ನು ಮಾರಿಕೊಂಡ ನಮ್ಮವರೇ ಆದ ರಾಜಕಾರಣಿಗಳು. ಅಲ್ಲಿಯ ಒಬ್ಬ ರಾಜವಂಶದವರಿಗೆ ಜಲ ವಿದ್ಯುತ್ ಮೂಲಗಳಾದ ಹೇಮಾವತಿ, ಹಾರಂಗಿ, ವಾರಾಹಿ ಪ್ರದೇಶಗಳನ್ನು ಅಭಿವೃದ್ಧಿಪಡಿಸುವರೆಂದು ಚಿಕ್ಕಾಸಿಗೆ ನೀಡಲಾಯ್ತು ಎನ್ನಲಾಗಿದೆ. ಅವರು ಅದನ್ನು ಮೂರುಕಾಸಿಗೆ ಹೊರಗಿನ ಬಂಡವಳಿಗರಿಗೆ ಮಾರಿಕೊಂಡರಂತೆ. ಒಂದು ಸಾವಿರ ಮೆಗಾವಾಟಿಗೂ ಹೆಚ್ಚು ಜಲವಿದ್ಯುತ್ ಸಂಪನ್ಮೂಲಗಳನ್ನು ನಮ್ಮ ರಾಜಕಾರಣಿಗಳು ಹೊರಗಿನವರಿಗೆ ಮಾರಿಕೊಂಡಿದ್ದಾರೆ. ಒಂದು, ನಮ್ಮಲ್ಲಿ ನಮ್ಮದೇ ಬಂಡವಾಳವೇ ಇಲ್ಲ ಅಥವಾ ಇದ್ದವರು ಇನ್ನೂ ಫ್ಯೂಡಲ್ ಸಂಸ್ಕೃತಿಯವರು. ಈ ಯಜಮಾನಿಕೆಯ, ಗೌಡಿಕೆಯ ಜನರಿಗೆ ಆಧುನಿಕ ಕೈಗಾರಿಕಾ ಮನಸ್ಸು ಬೆಳೆಯಲೇ ಇಲ್ಲ. ಮಂಡ್ಯದ ಗೌಡರ ಬಗ್ಗೆ ಶಂಕರೇ ಗೌಡರು ಈ ಮಾತನ್ನು ಪದೇ ಪದೇ ಹೇಳುತ್ತಿದ್ದರು. ನಮ್ಮ ಜನ ಕಷ್ಟಜೀವಿಗಳಲ್ಲ ಎಂಬ ಆಪಾದನೆ ವಿಧಾನಸೌಧ ಕಟ್ಟುವಾಗಲೂ ಸ್ಥಳೀಯರು ದೊರೆಯದೆ ಹೊರಗಿನವರನ್ನು ಕರೆಸ ಬೇಕಾಯ್ತು... ಬಂದವರು ಹಿಂದಿರುಗಲೇ ಇಲ್ಲ. ಮಂಡ್ಯದಲ್ಲಿ ಕೃಷಿ ಕಾರ್ಮಿಕರು ಹೊರಗಿನವರು. ನಮ್ಮ ಜನ ಕೃಷಿ ಮಾಡುವುದನ್ನು ಮರೆತೇಬಿಡುತ್ತಾರೋ ಏನೋ.

## ಬೆಂಗಳೂರು ಎಂಬ ಜಾಗತಿಕ ಬ್ರಾಂಡ್

ದೇವನಹಳ್ಳಿಯಲ್ಲಿ ಬರುತ್ತಿರುವ ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಇಂದು ನಡೆಯುತ್ತಿರುವ ಜಾಗತೀಕರಣ, ಖಾಸಗೀಕರಣ, ಉದಾರೀಕರಣಗಳೆಂಬ ಹೆಸರಿನಲ್ಲಿ ವಿಜೃಂಭಿಸುತ್ತಿರುವ ಜಾಗತಿಕ ಬಂಡವಾಳ ವ್ಯವಸ್ಥೆಯ ಎಗ್ಗಿಲ್ಲದ ವಿಸ್ತರಣೆಯ ಪ್ರತೀಕ. ಇಲ್ಲಿ ಸಿಂಗಪುರದ ಕಂಪನಿಯದೇ ಪ್ರಶ್ನಾತೀತ ಅಧಿಕಾರ. ಇದನ್ನು ವಿದೇಶೀ ಬಂಡವಾಳವೆಂದು ಹೇಳಲಾಗುತ್ತಿದೆ. ೪ ಸಾವಿರ ಕೋಟಿಗಿಂತ ಕಮ್ಮಿ ಈ ಹೂಡಿಕೆ. ಆದರೆ ಈ ವಿಮಾನನಿಲ್ದಾಣ ಲಾಭದಾಯಕವಾಗ ಬೇಕಾದರೆ ಇದರ ಹಿಂದೆ ಏನೆಲ್ಲಾ ಆಗಬೇಕು ! ಸುಮಾರು ೧೫೦೦೦ ಕೋಟಿ ರೂ.ಗಳಷ್ಟು ಸ್ಥಳೀಯ ಬಂಡವಾಳ, ಅದು ಬಹುವಾಗಿ ಸಾರ್ವಜನಿಕ ಖಾತೆಯದು. ೪೮ ಕಿ.ಮೀಟರ್ ಎಂಟು ಪಂಕ್ತಿಯ ರಸ್ತೆಯಾಗಬೇಕು. ಇದರ ಉದ್ದಕ್ಕೆ ರೈಲಾಗಬೇಕು. ಈ ಎರಡೂ ಮಾರ್ಗಗಳು ನಡುವೆ ಇರುವ ಯಾರಿಗೂ ಸೇವೆ ನೀಡುವಂತಿಲ್ಲ. ಅದು ಫಾಸ್ಟ್ ಟ್ರಾಕ್. ಜನ ರಸ್ತೆಯ ಈ ಬದಿಯಿಂದ ಆ ಬದಿಗೆ ಹೋಗಲು ಮೇಲುಸೇತುವೆ ಅಥವಾ ಕೆಳಸೇತುವೆ ಹಾಯಬೇಕು. ಹಾಗೆ ಹಾಯಲು ಅಸಮರ್ಥರಾದವರು ನಿಂತಲ್ಲೇ ನಿಲ್ಲಬಹುದು. ಈ ರಸ್ತೆಗಳು ಉಪಯೋಗವಾಗುವಂತೆ ನಗರದ ಸುತ್ತ ಮೊದಲನೆಯ, ಎರಡನೆಯ, ಮೂರನೆಯ ವರ್ತುಲ ರಸ್ತೆ ಆಗಬೇಕು. ನಗರದಲ್ಲೆಲ್ಲ, ಜಂಕ್ಷನ್‌ಗಳಲ್ಲೆಲ್ಲಾ ಮೇಲು/ಕೆಳಸೇತುವೆ ಆಗಬೇಕು. ಈ ಬೆಳವಣಿಗೆ ಕಾವೇರಿಯ ನೀರನ್ನೆಲ್ಲಾ ಆಪೋಶನ ತೆಗೆದುಕೊಳ್ಳಬೇಕು. ಸಾರ್ವಜನಿಕ ಹೆಚ್ಎಎಲ್‌ಗೆ ಆಗುವ ಅಪಾರ ನಷ್ಟ ಸಾರ್ವಜನಿಕ ಹೂಡಿಕೆಯ ಸ್ವರೂಪದ್ದೇ. ಈ ಎಲ್ಲ ಬೆಳವಣಿಗೆಗಳೂ ಅಂತರರಾಷ್ಟ್ರೀಯವಾಗಿಯೇ ಉಪಯೋಗವಾಗುವುದು. ಬಹುಶಃ ಕೊಯಮತ್ತೂರು, ಚೆನ್ನೈ, ಮೈಸೂರು ಮುಂತಾದ ಕಡೆಗೆ ವಿಮಾನದಲ್ಲಿ ಹೋಗುವುದು ಅಸಾಧ್ಯವಾಗಿಬಿಡುತ್ತದೆ. ಇಷ್ಟೆಲ್ಲಾ ಮಾಡಿಯೂ ಈ ಉದ್ದಿಮೆಯನ್ನು ಖಾಸಗಿ ಎಂದು ಕರೆಯುವುದು ಮಾರ್ಮಿಕವಾಗಿದೆ. ಕಾರಣ ಅದು ಕೆಲವು ನವ ಶ್ರೀಮಂತರು ಮತ್ತು ವಿದೇಶಿಯರ ಖಾಸಗಿ ಅನುಕೂಲಕ್ಕಾಗಿ ಕರ್ನಾಟಕ ಸರ್ಕಾರ ಸೇವೆಸಲ್ಲಿಸಲು ಟೊಂಕ ಕಟ್ಟಿ ನಿಂತಿರುವುದರ ಸೂಚಕ. ಕೊನೆಗೆ ಕರ್ನಾಟಕ ಸರ್ಕಾರದ್ದೇ ಆದ ಪ್ರವಾಸಿ ಕಾರ್ಪೊರೇಷನ್ನಿಗೆ ಕಾರು ಚಲಾಯಿಸಲು ಅವಕಾಶ ನೀಡಲಿಲ್ಲ. ಇನ್ನು ಇಲ್ಲಿ ಉಂಟಾಗುವ ಸಣ್ಣ ಸಣ್ಣ ಹುದ್ದೆಗಳನ್ನಾದರೂ ಕನ್ನಡದವರಿಗೆ ಕೊಡಿ ಎಂದು ಅಂಗಲಾಚಿ ಪ್ರಯೋಜನವೇನು ? ಹೋರಾಡುವುದೇ ಆದರೆ ಕನ್ನಡ ಪಡೆ ಹೆಚ್ಎಎಲ್ ವಿಮಾನ ನಿಲ್ದಾಣವನ್ನೂ ಉಳಿಸಿಕೊಳ್ಳಲು ಹೋರಾಡಲಿ. ದೇವನಹಳ್ಳಿಯ ವಿಮಾನನಿಲ್ದಾಣಕ್ಕೆ ಬೆಂಗಳೂರು ಎಂದು ಹೆಸರು ಇಟ್ಟರೆ ಅದು ಕನ್ನಡಕ್ಕೆ ಸಂದ ದೊಡ್ಡ ಮರ್ಯಾದೆಯೇನೂ ಆಗುವುದಿಲ್ಲ. ವಿಶ್ವದಾದ್ಯಂತ ಭಾರತ, ಮುಂಬಯಿ, ಚೆನ್ನೈ, ಕೊಲ್ಕತ್ತ ಎಂಬ ಪದಗಳು ಪರಿಚಯವಾಗದಿರಬಹುದು. ಆದರೆ ಬೆಂಗಳೂರು ಎಂಬ ಬ್ರಾಂಡ್, ಟ್ರೇಡ್‌ಮಾರ್ಕ್ ಕೇಳದವರೇ ಇಲ್ಲ. ಇದರಿಂದಾಗಿ ಕನ್ನಡಿಗನ ಕನ್ನಡತನಕ್ಕೆ ಯಾವ ಹೆಮ್ಮೆಯ ಅಗತ್ಯವೂ ಇಲ್ಲ.

ತಮಿಳರು ತೆಲುಗರು ಇಲ್ಲಿ ಕೈಗಾರಿಕಾ ಘಟಕಗಳನ್ನು ತೆರೆದರೆ, ತಮ್ಮ ಕಡೆಯಿಂದ ಕಾರ್ಮಿಕರನ್ನು ಕರೆಸಿಕೊಳ್ಳುತ್ತಾರೆ. ನಮ್ಮವರೂ ಅದೇ ಕೆಲಸ ಮಾಡುತ್ತಾರೆ. ಹೊರಗಿನ ಕಾರ್ಮಿಕರನ್ನು ಶೋಷಿಸುವುದು ಸುಲಭವೆಂಬುದೂ ಇದಕ್ಕೆ ಒಂದು ಕಾರಣ.

ಕನ್ನಡ ಪರ ಹೋರಾಟಗಳು ಬಂಡವಾಳದ ವಿಸ್ತರಣೆಯ ಈ ಅಂತರಂಗವನ್ನು ಗ್ರಹಿಸಿದರೆ ದೇವನಹಳ್ಳಿಯ ವಿಮಾನ ನಿಲ್ದಾಣ ಎಂಬುದು ಹೇಗೆ ಜಾಗತಿಕ ಮತ್ತು ಭಾರತದ ಇತರ ಪ್ರದೇಶಗಳ ಬಂಡವಾಳದ ನಂಟಿನ ಸಂಕೇತ ಎಂಬುದನ್ನು ಗ್ರಹಿಸಬಹುದು. ಆಗ ಮಾತ್ರ ಅವರ ಹೋರಾಟ ಈ ನಿಲ್ದಾಣಕ್ಕೆ ಏನು ಹೆಸರಿಡಬೇಕೆಂಬ ವಿಷಯದಲ್ಲಿ ಮಾತ್ರವಲ್ಲ, ಈ ವಿಮಾನ ನಿಲ್ದಾಣದ ವಿರುದ್ಧವೇ ಅಲ್ಲಿ ಭೂಮಿ ಕಳಕೊಂಡವರ ದನಿಯಾಗಿ, ಹಾಗೂ ಹೆಚ್‌ಎಎಲ್ ವಿಮಾನ ನಿಲ್ದಾಣವನ್ನು ಮುಚ್ಚುವುದರ ವಿರುದ್ಧ, ಅದರ ಸಮೀಪದ ನಂದಗುಡಿಯಲ್ಲಿ ಸರ್ಕಾರೀ ಖಾಸಗಿ ಭೂಮಿಯನ್ನು ನುಂಗುವ ವಿಶೇಷ ಆರ್ಥಿಕ ವಲಯದ ವಿರುದ್ಧ ಹೋರಾಟ ನಡೆಸುವುದೇ ಕನ್ನಡಪರ ಹೋರಾಟವೆಂದು ಗ್ರಹಿಸಬಹುದು. ಹಾಗೂ ಜಾಗತೀಕರಣದ ಬಂಡವಾಳದ ಮೃತ್ಯುಬಂಧನದಲ್ಲೂ ಕನ್ನಡವನ್ನು ಉಳಿಸಿಕೊಳ್ಳುವುದು ಹೇಗೆ ಎಂದು ಚಿಂತಿಸಬಹುದು.

ಈ ಹಿಂದೆಯೂ ಕರ್ನಾಟಕ ಹರಿದು ಹಂಚಿಹೋಗಿದ್ದಾಗಲೂ, ಕನ್ನಡ ಪರ ಕೆಲಸಗಳು ಬಹಳ ಸಮರ್ಥವಾಗಿಯೇ ನಡೆದವು ಎಂಬುದನ್ನೂ ನೆನಪಿಸಿಕೊಳ್ಳಬೇಕು. ಆಗಲೂ ಹೈದರಾಬಾದಿನಲ್ಲಿ, ಮದರಾಸಿನ ಬೀಚಿನಲ್ಲಿ, ಮುಂಬೈನಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ನಡೆಸಿದರು. ವಿದ್ಯಾವರ್ಧಕ ಸಂಘ ಅಚ್ಚರಿಯ ಕೆಲಸ ಮಾಡಿತು. ಹೊರನಾಡಿನ ವಿಶ್ವ ವಿದ್ಯಾಲಯಗಳಲ್ಲಿ ಕನ್ನಡದ ಪೀಠ ಇತ್ತು. ಕನ್ನಡದಲ್ಲಿ ಸತ್ವಯುತ ಕೆಲಸ ಮಾಡಿದರೆ ಇಂದಿಗೂ ಜಾಗತೀಕರಣದ ಮತ್ತು ಬಂಡವಾಳದ ಅಬ್ಬರದಲ್ಲೂ ಬದುಕುಳಿದು ಬೆಳೆಯುವುದು ಸಾಧ್ಯ. ಅದಕ್ಕೆ ಕೇಂದ್ರದವರ ಭಿಕ್ಷಕ್ಕೆ ಕೈಯೊಡ್ಡಬೇಕಾಗಿಲ್ಲ. ಕೇಂದ್ರ ನಮ್ಮನ್ನು ಗೌರವಿಸಬೇಕಾದರೆ ನಮ್ಮ ರಾಜಕೀಯವನ್ನು ಮೊದಲಿಗೆ ಸರಿಪಡಿಸಬೇಕು. ಉದಾಹರಣೆಗೆ, ಶಾಸ್ತ್ರೀಯ ಭಾಷೆ ಎಂದರೆ ಸತ್ತ ಭಾಷೆ ಎಂಬ ಅರ್ಥ ಬರದೆ ಇರಬೇಕಾದರೆ, ಕನ್ನಡದ ಸರ್ಕಾರ ಈ ಭಾಷಾ ಅಭಿವೃದ್ಧಿಗೆ ಮಾಡಬೇಕಾದ ಕೆಲಸಕ್ಕೆ ಒಂದೆರಡು ನೂರು ಕೋಟಿ ರೂಪಾಯಿಗಳಿಗಾಗಿ ಕೇಂದ್ರದ ಮರ್ಜಿಗೆ ಕಾಯಬೇಕಾಗಿಲ್ಲ. ಆ ಹೋರಾಟವನ್ನು ನಡೆಸುತ್ತಲೇ ಕನ್ನಡವನ್ನು ರಾಷ್ಟ್ರೀಯವಾಗಿ ಅಂತರರಾಷ್ಟ್ರೀಯವಾಗಿ ಬೆಳೆಸಲು ಈ ಸರ್ಕಾರಕ್ಕೆ ಸಾಧ್ಯವಿದೆ. ಅದೇ ಪಂಪ ಅದೇ ರನ್ನರ ಬಗೆಗೆ ಬರೆದದ್ದೇ ಬರೆಯುತ್ತಾ ಚರ್ವಿತಚರ್ವಣದ ಸಂಶೋಧನೆಯಿಂದ ಯಾವ ಪ್ರಯೋಜನವೂ ಇಲ್ಲ. ಕರ್ನಾಟಕದ ಇಂದಿನ ಜನಜೀವನದ ಕುರಿತು ಸಂಶೋಧನೆ ನಡೆಸಿ, ಮಾರ್ಗದರ್ಶನ ನೀಡುವ ಸಂಶೋಧನೆಗಳಿಗೆ ಒತ್ತು ನೀಡುವುದು ಕನ್ನಡದ ಅಂಥ ಅಭಿವೃದ್ಧಿಯ ಕೆಲಸ. ಕನ್ನಡ ವಿಶ್ವವಿದ್ಯಾಲಯವೂ ಈ ಚರ್ವಿತಚರ್ವಣ ಕೆಲಸ ಮಾಡುತ್ತಿರುವುದು ಅಷ್ಟೇನೂ ಮೆಚ್ಚತಕ್ಕ ವಿಷಯವಲ್ಲ. ಇಲ್ಲಿಯ ವಿಶ್ವವಿದ್ಯಾಲಯಗಳಿಗೆ ಮೊದಲು ಸಮರ್ಥ ಸದಸ್ಯರನ್ನು, ಕುಲಪತಿಗಳನ್ನು ನಿಯಮಿಸುವ ಕೆಲಸವನ್ನೂ ನಾವು ಸರಿಯಾಗಿ ನಿರ್ವಹಿಸುತ್ತಿಲ್ಲ; ಹೊರ ರಾಜ್ಯದ ಗವರ್ನರ್, ಯಾವುದೋ ಭಾಷೆಯ ಸಲಹೆಗಾರರು ಈ ವಿಷಯಗಳನ್ನು ತೀರ್ಮಾನಿಸುವ ಇಂದಿನ ಪರಿಸ್ಥಿತಿ ಭರವಸೆ ನೀಡುತ್ತಿಲ್ಲ. ಕರ್ನಾಟಕದ ರಾಜಕೀಯಕ್ಕೆ ಕಾಯಕಲ್ಪಮಾಡುವ ಯಾವ ಸೂಚನೆಯೂ ಕಂಡುಬರುತ್ತಿಲ್ಲ. ಅದೇ ಜಾತಿಯ, ಪ್ರಾದೇಶಿಕತೆಯ, ಸ್ಥಳೀಯ ವ್ಯಕ್ತಿಗಳ ಚಿಲ್ಲರೆ ಹೋರಾಟದಲ್ಲಿ ತೊಡಗಿದ ರಾಜಕೀಯ ವ್ಯಕ್ತಿಗಳಿಂದ ಕರ್ನಾಟಕದ ಕನ್ನಡತನವನ್ನು ರಕ್ಷಿಸಬಹುದು ಎಂದು ನಿರೀಕ್ಷಿಸುವುದು ವ್ಯರ್ಥ. ಸಾಂಸ್ಕೃತಿಕ ಲೋಕದ ಪ್ರಜ್ಞಾವಂತರಿಂದ ಸಮಸ್ಯೆಯ ಮೂಲವನ್ನು ಗುರುತಿಸಿ ಅವರ ವಿರುದ್ಧ ರಾಜಕೀಯ ಹೋರಾಟವನ್ನು ಸಂಘಟಿಸಿದರೆ ಏನಾದರೂ ಪ್ರಯೋಜನವಾಗಬಹುದು. ಕನ್ನಡ ಚಳುವಳಿಗಳು ಸಮಸ್ಯೆಗಳ ಮೂಲವನ್ನು ಗುರುತಿಸಿ, ಮುಖ್ಯ ಶತ್ರುವಿನ ವಿರುದ್ಧ ಬದಲಾವಣೆಗಾಗಿ ಹೋರಾಟ ಮಾಡುವ ಅಗತ್ಯವಿದೆ. ಕೆಲ ನಾಯಕರು ಮೇಲ್ನೋಟದಲ್ಲಿ ಗುರುತಿಸಿ, ಅಮಾಯಕರನ್ನು ಚಳುವಳಿಗೆ ಇಳಿಸಿ, ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಿದ್ದಾರಾಗಿ, ಪದೇ ಪದೇ ಈ ಚಳುವಳಿಗಳು ಒಡೆದು ಛಿದ್ರ ಛಿದ್ರವಾಗುತ್ತಿವೆ. ತಮಿಳುನಾಡಿನಲ್ಲಿ, ತಮ್ಮ ನಾಡಿನ ಹಿತಾಸಕ್ತಿಗಳು ಮುಂದೆ ಬಂದಾಗ, ಎಲ್ಲ ಹೋರಾಟಗಳೂ ಒಂದಾಗುತ್ತವೆ. ನಮ್ಮಲ್ಲಿ ಕ್ಲಾಸಿಕಲ್ ಭಾಷಾ ಚಳುವಳಿಯಲ್ಲೇ ಒಡಕು ಇರುವುದು ಸ್ಪಷ್ಟ. ಹಾಗಿದ್ದರೆ ನಮ್ಮ ಚಳುವಳಿಗೇಕೆ ಕೇಂದ್ರ ಸೊಪ್ಪುಹಾಕಬೇಕು, ಹೆದರಬೇಕು ?

**ಕೆ. ಎಸ್. ಪಾರ್ಥಸಾರಥಿ**
ಸಿ-೨, 'ಐಕ್ಯತಾ' ೬೦/೨, ೧೭ನೇ ಅಡ್ಡರಸ್ತೆ ಮಲ್ಲೇಶ್ವರಂ, ಬೆಂಗಳೂರು - ೫೬೦ ೦೫೫

## ...ಎಂದೂ ಪ್ರತಿಮೆಯಾಗದು

ಹರಿವ ನೀರು
ನಿಶ್ಚಲವಾಗಿಬಿಟ್ಟರೆ
ಹುಳು ಹುಪ್ಪಟೆ ತುಂಬಿ
ರೋಗ ರಾಡಿಯೆದ್ದು
ಗಬ್ಬು ನರಕ.
'ನಿಂತ ನೀರು'
ಎಂದೂ ಪ್ರತಿಮೆಯಾಗದು.

ಮುಚ್ಚಿದ ಕಿಟಕಿ
ಮತ್ತೆ ಪರದೆ
ಒಳಗೆ ಹಚ್ಚಿಟ್ಟ ದೀಪ
ಕೆಂಪಗೆ ಉರಿದು
ಕಪ್ಪುಕುರುಹು, ವಿಷಾಲ.
'ಮುಚ್ಚಿಟ್ಟ ದೀಪ'
ಎಂದೂ ಪ್ರತಿಮೆಯಾಗದು.



ನೆಲದ ಸತ್ವ, ಗಿಡದ ಸತ್ಯ
ಮೊಗ್ಗಿನಿಂದ ಹೂವರಳಿ
ಹೂವ ಗರ್ಭದಲ್ಲಿ ವಂಶವಡಗಿ
ನಗುವ ಹೊತ್ತಿನಲ್ಲಿ
'ಗಂಧವಿಲ್ಲದ ಹೂವು'
ಎಂದೂ ಪ್ರತಿಮೆಯಾಗದು.

ಸಂತನಂತೆ ಬಂದ ವಸಂತ
ಚಿಗುರು ತೋರಣ ಕಟ್ಟಿ
ಕಾದು ಕಾದು ಸೋತ ಹೊತ್ತು
ಕೋಗಿಲೆ ಬಾರದಿರೆ
'ವಸಂತ'
ಎಂದೂ ಪ್ರತಿಮೆಯಾಗದು.

ಕೆಂಪು ಸಂಜೆ
ಕಾವಿಯುಟ್ಟು
ನೇಸರನು ನೀರಿಗಿಳಿವ
ಹೊತ್ತು,
ಬಾನಂಚಿನ ಬಯಲಿನಲ್ಲಿ
ದೇವರು ರುಜು ಮಾಡದಿರೆ
'ಕೆಂಪು ಸಂಜೆ'
ಎಂದೂ ಪ್ರತಿಮೆಯಾಗದು.

**ಹೇಮಾ ವೆಂಕಟ್, ಸುಳ್ಯ**
ಹವ್ಯಾಸಿ ಪತ್ರಕರ್ತೆ, ಸುಳ್ಯ, ದಕ್ಷಿಣ ಕನ್ನಡ - ೫೭೪ ೨೩೯

# ಇಬ್ಬರು ದೇಶಭಕ್ತರು ಒಂದು ರೋಡ್‌ರೋಲರ್ರು

ಸಾಗರದಿಂದ ತಮ್ಮ ಹಳ್ಳಿ ಮಂಕಾಳೆಗೆ ಬರುವ ಟಾರು ರಸ್ತೆ ಗುಂಡಿಬಿದ್ದುದು ಈಗ ಸರಿಯಾಗಿ, ಆಗಿದ್ದ ಗುಂಡಿಗಳೆಲ್ಲ ಮೈತುಂಬಿಕೊಂಡು ಆಗಲೇ ಆರು ತಿಂಗಳಾದರೂ ಆ ಸಂದರ್ಭದಲ್ಲಿ ಬಂದು ಅಲ್ಲಿ ಕೆಲಸ ಮಾಡಿದ ಒಂದು ರೋಡ್ ರೋಲರ್ರು ಇನ್ನೂ ಅಲ್ಲಿಯೇ ಇರುವುದನ್ನು ಕಂಡು ಅನಂತರಾಯರು ಕೊಂಚ ವಿಚಲಿತರಾದರು. ತಮ್ಮ ಮನೆಯಿಂದ ಸುಮಾರು ಒಂದು ಕಿಲೋಮೀಟರ್ ದೂರದಲ್ಲಿ ಒಂದು ನಂದಿಮರದ ಕೆಳಗೆ ಈ ಯಂತ್ರ ವಾರಸುದಾರರಿಲ್ಲದೆ ನಿಂತಿದ್ದನ್ನ ಅವರು ಈ ಆರು ತಿಂಗಳಿನಿಂದ ನೋಡುತ್ತ ಬಂದಿದ್ದರು. ರಸ್ತೆ ಕೆಲಸ ನಡೆಯುವಾಗ ರಸ್ತೆಯ ಮೇಲೆ ಹಾಸಿದ ಜಲ್ಲಿ ಕಲ್ಲಿನ ಮೇಲೆ ಇದು ತಿರುಗಾಡಿ ಕಲ್ಲು ನೆಲದೊಡನೆ ಸರಿಯಾಗಿ ಕುಳಿತು, ಇದರ ಮೇಲೆ ಟಾರು, ಜಲ್ಲಿ ಪುಡಿ ಹಾಕಿ ಮತ್ತೆ ರೋಡ್ ರೋಲರ್ ಓಡಿಸಿ ರಸ್ತೆ ಯಾವುದೇ ಗುಂಡಿ ಗೊಟರು ಇಲ್ಲದೆ ಲೆವೆಲ್ ಆದುದನ್ನು ನೋಡಿ ಎಲ್ಲರಿಗೂ ಆದ ಹಾಗೆ ಇವರಿಗೂ ಸಂತೋಷವಾಗಿತ್ತು. ಈ ರಸ್ತೆ ಇಷ್ಟು ಬೇಗನೆ ಆಗಲು ರಾಯರು ಕೂಡ ಕಾರಣರಾಗಿದ್ದರು. ಅವರು ಹಲವು ಬಾರಿ ಸಂಬಂಧಪಟ್ಟ ಕಛೇರಿಗೆ ಹೋಗಿ ಅಲ್ಲಿ ಕಾಣಬೇಕಾದವರನ್ನ ಕಂಡು, ಹೇಳಬೇಕಾದ ರೀತಿಯಲ್ಲಿ ಹೇಳಿದ ಮೇಲೆ ಈ ಕೆಲಸ ಪ್ರಾರಂಭವಾಗಿತ್ತು. ಹಾಗೆಯೇ ಮುಗಿದಿತ್ತು ಕೂಡ. ಹಿಂದೆಲ್ಲ ಹಾರುತ್ತ ಬೀಳುತ್ತ ತಿರುಗಾಡುತ್ತಿದ್ದ ವಾಹನಗಳೆಲ್ಲ ಈಗ ನೀರಿನ ಮೇಲೆ ದೋಣಿ ಹೋದ ಹಾಗೆ ರಸ್ತೆಯ ಮೇಲೆ ಸಲೀಸಾಗಿ ತಿರುಗಾಡತೊಡಗಿದ್ದವು.

ಮಂಕಾಳೆ ಹಳ್ಳಿ ರಸ್ತೆ ಸರಿಯಾಯಿತಲ್ಲ ಎಂದು ರಾಯರು ಕೊನೆಗೂ ಬಿಡುಗಡೆಯ ನಿಟ್ಟುಸಿರುಬಿಟ್ಟರು. ಹಾಗೆಯೇ ಅಲ್ಲಿ ಬಂದು ಕೆಲಸ ಮುಗಿಸಿದ ಇಂಜಿನಿಯರ್‌ಗೆ ತಮ್ಮ ಕೃತಜ್ಞತೆಗಳನ್ನೂ ಹೇಳಿದರು. ಕೆಲವೇ ದಿನಗಳಲ್ಲಿ ಅಲ್ಲಿ ಉದ್ದಕ್ಕೂ ಹಾಕಿದ ಟಾರು ಡ್ರಮ್ಮುಗಳು, ಉಳಿದ ಜಲ್ಲಿ, ಮಾಡಿದ ಬೆಂಕಿಯ ಅವಶೇಷಗಳು, ಡಾಂಬರು ಹಾಕಲು ಬಂದ ಕೆಲ ತಮಿಳರ ಗುಡಿಸಲುಗಳು ಎಲ್ಲ ಮಾಯವಾಗಿ, ರಸ್ತೆ ಶುಚಿಯಾದರೂ ಇದೊಂದು ರೋಡ್ ರೋಲರ್ ಇಲ್ಲಿ ಉಳಿದುಬಿಟ್ಟಿತೇ ಎಂದು ಅವರು ವಿಚಾರ ಮಾಡಿದರು. ಇಂದು ನಾಳೆ ಇದನ್ನು ಸಂಬಂಧಪಟ್ಟವರು ತೆಗೆದುಕೊಂಡು ಹೋಗುತ್ತಾರೆ ಎಂದು ರಾಯರು ಕಾದರು.

ಈ ಯಂತ್ರದ ಮೇಲೆ ಕುಳಿತು ಇದನ್ನು ನಡೆಸುತ್ತಿದ್ದ ಡ್ರೈವರ್ ಸಿಂಜಾವನ ಪರಿಚಯ ಅವರಿಗೆ ಇತ್ತು. ಇದು ಹಿಂದಿನ ಪರಿಚಯವಲ್ಲ. ಇಲ್ಲಿ ಕೆಲಸ ಪ್ರಾರಂಭವಾದ ಮೇಲೇನೆ ಆದ ಪರಿಚಯ. ಈತ ರಸ್ತೆಯ ಮೇಲೆ ಜಲ್ಲಿ ಹಾಸುವ ತನಕ, ಟಾರು ಸುರಿಯುವ ತನಕ, ಜಲ್ಲಿ ಪುಡಿ ಹಾಕುವ ತನಕ ತಮ್ಮ ಮನೆ ಮುಂದಿನ ಚಪ್ಪರದಡಿ ಬಂದು ಕುಳಿತುಕೊಳ್ಳುತ್ತಿದ್ದ. ಹೀಗೆ ಕುಳಿತುಕೊಂಡವ ಮೊದಲು ರಾಯರ ಮನೆಗೆ ಬರುವ ಪತ್ರಿಕೆ ಓದಿ ಮುಗಿಸುತ್ತಿದ್ದ ನಂತರ ರಾಯರ ಜೊತೆಯಲ್ಲಿ ಅದು ಇದು ಮಾತನಾಡುತ್ತಿದ್ದ.

ರಾಯರಿಗೂ ಸಿಂಜಾವನಿಗೂ ಕೆಲ ವಿಷಯಗಳಲ್ಲಿ ಹೊಂದಾಣಿಕೆ ಇತ್ತು. ರಾಯರು ತಮ್ಮ ಸ್ವಾತಂತ್ರ್ಯ ಹೋರಾಟದ ವಿಷಯಗಳನ್ನು ಅವನ ಮುಂದೆ ಹೇಳಿದರೆ ಈತ ತಾನು ಸೈನಿಕನಾಗಿ ಗಡಿಯಲ್ಲಿ ದುಡಿಯುತ್ತಿದ್ದಾಗಿನ ವಿಷಯಗಳನ್ನು ಹೇಳುತ್ತಿದ್ದ.

ಅನಂತರಾಯರು ಈ ಜಿಲ್ಲೆಯ ಸ್ವಾತಂತ್ರ್ಯ ಚಳುವಳಿಯಲ್ಲಿ ತುಂಬಾ ಉತ್ಸಾಹದಿಂದ ಭಾಗವಹಿಸಿದವರು. ಅವು ಅವರ ಯೌವನದ ದಿನಗಳು. ಮಹಾತ್ಮ ಗಾಂಧೀಜಿಯವರು ನೀಡಿದ ಎಲ್ಲ ಕರೆಗಳನ್ನೂ ಚಾಚೂತಪ್ಪದೆ ಪರಿಪಾಲಿಸಿದವರು ಅವರು. ಅದು ವಿದೇಶಿ ವಸ್ತ್ರದಹನ ಇರಬಹುದು, ಕರ ನಿರಾಕರಣೆ ಇರಬಹುದು, ಖಾದಿ ತೊಡುವುದಿರಬಹುದು, ಚರಕ ಇರಿಸಿಕೊಂಡು ನೂಲು ತೆಗೆಯುವುದು ಇರಬಹುದು. ಇದೆಲ್ಲವನ್ನೂ ಬಿಡದೆ ಪರಿಪಾಲಿಸಿಕೊಂಡು ಬಂದವರು ರಾಯರು. ಹೀಗಾಗಿ ಕೆಲಬಾರಿ ಅವರು ಜೈಲಿಗೂ ಹೋಗಿಬಂದರು. ಕಾಂಗ್ರೆಸ್ ಪಕ್ಷದಲ್ಲಿ ಅವರಿಗೆ ತುಂಬಾ ಗೌರವ ದೊರಕಿತು. ಈ ಗೌರವ ಈಗಲೂ ಅವರಿಗೆ ಇದೆ. ಹಳೆಯ ಜನ ಅವರನ್ನ ನೆನೆಸಿಕೊಂಡು ಅವರಲ್ಲಿಗೆ ಬಂದು ಹೋಗುತ್ತಿರುತ್ತಾರೆ. ತಮ್ಮ ಹಳ್ಳಿಗೆ ಬರುವ ರಸ್ತೆ ಸರಿಯಾಗಬೇಕು ಎಂದು ಅವರು ಬಯಸಲು ಇದೂ ಒಂದು ಕಾರಣ. ಅಲ್ಲದೆ ಲೋಕೋಪಯೋಗಿ ಇಲಾಖೆಯವರು ಈ ರಸ್ತೆಯನ್ನು ಸರಿಪಡಿಸಲು ಕೂಡ ಇದೇ ಕಾರಣ ಅಂದರೂ ಸರಿ.

ಅನಂತರಾಯರ ಹಾಗೆ ರೋಡ್ ರೋಲರ್ ಡ್ರೈವರ್ ಸಿಂಜಾವ ಕೂಡ ಒಂದು ಇತಿಹಾಸ ಉಳ್ಳವನೇ. ಈಗ ಇಲ್ಲಿ ಕೆಲಸಕ್ಕೆ ಬರುವ ಮುನ್ನ ನಮ್ಮ ದೇಶದ ಗಡಿಯಲ್ಲಿ ಸೋಲ್ಜರ್ ಆಗಿದ್ದವ. ಈ ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಾಗ ಆತ ನಮ್ಮ ದೇಶದ ಗಡಿಗಳನ್ನ ಕಾಯುವ ಕೆಲಸ ಮಾಡುತ್ತಿದ್ದ. ಸುಮಾರು ೧೦ ವರ್ಷ ಅಲ್ಲಿ ಕೆಲಸ ಮಾಡಿ ನಂತರ ತಿರುಗಿ ಊರಿಗೆ ಬಂದು ಇಲ್ಲಿ ಸರಕಾರಿ ಕೆಲಸದ ಮೇಲೆ ಮರುನೇಮಕಗೊಂಡಿದ್ದ.

ಹೀಗಾಗಿ ರಾಯರಿಗೂ ಸಿಂಜಾವನಿಗೂ ಒಂದು ಅರ್ಥದಲ್ಲಿ ಒಳ್ಳೆಯ ದೋಸ್ತಿ ಬೆಳೆಯಿತು. ಇವರು ತಮ್ಮ ಅನುಭವಗಳನ್ನು, ಇವನು ತನ್ನ ಅನುಭವವನ್ನು ವಿನಿಮಯ ಮಾಡಿಕೊಂಡರು.

''ಸಿಂಜಾವ, ನಾವು ದೇಶ ಬೇರೆ ನಮ್ಮ ಬದುಕು ಬೇರೆ ಅಂತ ತಿಳಿದವರಲ್ಲ, ದೇಶಕ್ಕಾಗಿ ನಾವು ಏನು ಮಾಡತಿದ್ವಿ



ಡಾ|| ನಾ. ಡಿಸೋಜ

ಅದೆಲ್ಲ ನಮ್ಮ ಮನೆಗೆ ಕುಟುಂಬಕ್ಕೆ ಮಾಡಿದ್ದು ಅಂತ ನಾವು ತಿಳೀತಿದ್ವಿ... ದೇಶಕ್ಕೆ ಒಳ್ಳೇದಾದರೆ ನಮ್ಮ ಕುಟುಂಬಕ್ಕೆ ಒಳಿತು ಅಂತ ನಾವು ನಂಬಿದ್ವಿ... ಈ ನಂಬಿಕೆ ಇವತ್ತು ಕಡಿಮೆ ಆಗಿದೆ...'' ಎಂದು ರಾಯರು ನುಡಿದರೆ ಸಿಂಜಾವ –

''ನಾವು ಸೋಲ್ಜರುಗಳೂ ಅಷ್ಟೇ... ಇಲ್ಲಿ ನನ್ನ ತಾಯಿ, ತಂದೆ, ಕೊನೆಗೆ ಹೆಂಡತಿ ಕಾಯಿಲೆ ಮಲಗಿರಲಿ, ನಾವು ಬಾರ್ಡರ್ ಬಿಟ್ಟು ಬರತಿರಲಿಲ್ಲ.. ನಮಗೆ ಊರಿನ ಕಡೆ ಚಿಂತೇನೆ ಇರತಿರಲಿಲ್ಲ. ಏನಿದ್ದರೂ ದೇಶ, ಗಡಿ ಅಂತ ಹಗಲು ರಾತ್ರಿ ಕೆಲಸ ಮಾಡತಿದ್ವಿ...'' ಎಂದು ಹೇಳುತ್ತಿದ್ದ.

''ನಾವು ಏನೇ ಮಾಡಿದರೂ ಅದರಿಂದ ದೇಶಕ್ಕೆ ಏನು ಉಪಯೋಗವಾಗುತ್ತೆ, ಏನು ನಷ್ಟ ಆಗುತ್ತೆ ಅಂತ ಯೋಚನೆ ಮಾಡತಿದ್ವಿ'' ಎಂದು ರಾಯರೆಂದರೆ, ಸಿಂಜಾವ –

''ಇರಬೇಕಾದ್ದೇ ಹೀಗೇ ಅಲ್ವಾ... ನಮ್ಮ ನಡಾವಳಿಕೆ ಯಾವ ಕಾರಣಕ್ಕೂ ದೇಶದ ಮೇಲೆ ಕೆಟ್ಟ ಪರಿಣಾಮ ಬೀರಬಾರದು ಅಲ್ವಾ ?'' ಎಂದು ಕೇಳುತ್ತಿದ್ದ.

ಈ ಸಿಂಜಾವ ಮಾತಿನಲ್ಲಿ ಮಾತ್ರ ಮುಂದಿರಲಿಲ್ಲ. ಆತ ಎಂದೂ ಕೆಲಸದಲ್ಲಿ ಸೋಮಾರಿತನ ಮಾಡುತ್ತಿರಲಿಲ್ಲ. ಸರಿಯಾದ ಸಮಯಕ್ಕೆ ಬಂದು ಸರಿಯಾದ ಸಮಯಕ್ಕೆ ತಿರುಗಿ ಹೋಗುತ್ತಿದ್ದ. ಕಾಸು ಕೊಡುವಂತೆ ರಸ್ತೆ ಕೆಲಸ ಕೈಗೆತ್ತಿಕೊಂಡ ಗುತ್ತಿಗೆದಾರನನ್ನ ಕಾಡುತ್ತಿರಲಿಲ್ಲ. ಕೆಲಸದಲ್ಲಿ ಪಡಪೋಶಿ ನಡೆಯುತ್ತಿದ್ದರೂ ನೋಡಿಕೊಂಡು ಸುಮ್ಮನಿರುತ್ತಿದ್ದ ವರ್ಕ್ ಇನ್‌ಸ್ಪೆಕ್ಟರುಗಳನ್ನು ತರಾಟೆಗೆ ತೆಗೆದುಕೊಳ್ಳುತ್ತಿದ್ದ.

ರಾಯರು ಲೋಕೋಪಯೋಗಿ ಇಲಾಖೆಯ ಓರ್ವ ನೌಕರನಲ್ಲಿ ಅಂತಹ ಪ್ರಾಮಾಣಿಕತೆ, ಸಮಯನಿಷ್ಠೆ, ಕಷ್ಟಸಹಿಷ್ಣುತೆ ಎಲ್ಲವನ್ನು ಕಂಡು ಅಚ್ಚರಿಪಟ್ಟಂತೆ ಆತ ಕೂಡ ರಾಯರಲ್ಲಿ ಇರುವ ದೇಶಪ್ರೇಮ, ಆದರ್ಶಗಳಿಗೆ ಮನಸೋತಿದ್ದ.

ಈ ಕಾರಣದಿಂದಲೋ ಏನೋ ರಾಯರಿಗೆ ಸಿಂಜಾವನ ರೋಡ್ ರೋಲರ್ ಮೇಲೆಯೇ ಏನೋ ಒಂದು ಅಭಿಮಾನ ಬೆಳೆದುಬಂದಿತ್ತು.

ರಸ್ತೆ ಕೆಲಸವೆಲ್ಲ ಮುಗಿದು ಅಲ್ಲಿಂದ ಹೊರಡುವ ಒಂದೆರಡು ದಿನ ಮೊದಲು ಸಿಂಜಾವ ಅವರಲ್ಲಿ ಬಂದಿದ್ದ.

''ಸ್ವಾಮಿ, ಇನ್ನು ಇಲ್ಲಿ ಕೆಲಸ ಮುಗೀತು. ನಾಳೆಯಿಂದ ಬೇರೆ ಕಡೆ ಕೆಲಸ'' ಎಂದು ಹೇಳಿದ್ದ.

''ಬೇರೆ ಕಡೆ ಅಂದರೆ ಎಲ್ಲಿ ?''

''ನೋಡಬೇಕು ಸ್ವಾಮಿ, ರೋಡ್ ರಿಪೇರಿ, ಆಸ್ಫಾಲ್ಟಿಂಗು, ಡಾಂಬರೀಕರಣ ಅಂತ ಕೆಲಸ ಇದ್ದೇ ಇರುತ್ತೆ. ಕೆಲಸ ಇಲ್ಲ ಅಂದ್ರು ನಮ್ಮ ಇಂಜಿನೀರಗೋಳು ಹೊಸಹೊಸ ಕೆಲಸ ಸೃಷ್ಟಿ ಮಾಡತಾರೆ... ನನಗಂತೂ ಈ ರೋಡ್ ರೋಲರ್ ಓಡಿಸೋ ಕೆಲಸ ತಪ್ಪಿದ್ದಲ್ಲ. ಬಾರ್ಡರ್‌ನಲ್ಲಿ ಬಂದೂಕು ಹಿಡಿದ ಹಾಗೆ ಇಲ್ಲಿ ರೋಡ್ ರೋಲರ್ ಸ್ಟೇರಿಂಗ್ ಹಿಡಿದಿದ್ದೇನೆ'' ಎಂದಿದ್ದ.

ಅವನು ಹೇಳಿದ ಹಾಗೆ ಕೆಲಸ ಮುಗಿದಿತ್ತು. ಆವರೆಗೆ ಅಲ್ಲಿ ನಡೆಯುತ್ತಿದ್ದ ಎಲ್ಲ ಚಟುವಟಿಕೆಗಳೂ ನಿಂತು ರಸ್ತೆ ಬರಿದಾಯಿತು. ನಂದಿಮರದ ಕೆಳಗೆ ನಿಂತ ಈ ಯಂತ್ರ ಇಂದು ಹೋಗುತ್ತದೆ, ನಾಳೆ ಹೋಗುತ್ತದೆ ಎಂದು ರಾಯರು ಕಾದರು. ಈ ನೆಪದಲ್ಲಾದರೂ ಸಿಂಜಾವ ಬರುತ್ತಾನೆ ಎಂಬುದು ಅವರ ನಿರೀಕ್ಷೆಯಾಗಿತ್ತು. ಆದರೆ ಅವರು ಅಂದು ಕೊಂಡಂತೆ ಸಿಂಜಾವನೂ ಬರಲಿಲ್ಲ, ರೋಡ್ ರೋಲರ್ ಅಲ್ಲಿಂದ ಹೋಗಲೂ ಇಲ್ಲ.

ಮಲೆನಾಡಿನಲ್ಲಿ ನೆಲದ ಮೇಲೆ ಹುಲ್ಲು, ಗಿಡ, ಗಂಟಿ ಬೆಳೆಯಲು ಎಷ್ಟು ದಿನ ಬೇಕು ? ರಾಯರು, ಈ ರಸ್ತೆಯಲ್ಲಿ ತಿರುಗಾಡುವ ಜನ ನೋಡುತ್ತಿರಲು ರೋಲರ್‌ನ ಮುಂದಿನ ದೊಡ್ಡ ಚಕ್ರದ ಕೆಳಗೆ ಹುಲ್ಲು ಬೆಳೆಯಿತು. ಅಕ್ಕಪಕ್ಕದ ಎರಡೂ ಚಕ್ರಗಳ ಅಡಿಯಲ್ಲಿ ಗಿಡಗಳು ತಲೆಯೆತ್ತಿದವು. ಮೇಲಿನ ಟಾರ್ಪಲಿನ್ ಹರಿದುಹೋಯಿತು. ಮೇಲಿನ ಮರದಿಂದ ಇಳಿಬಿದ್ದ ಒಂದು ಬಳ್ಳಿ ನಿಧಾನವಾಗಿ ರೋಡ್ ರೋಲರ್‌ನ ಮೇಲೆ ಮೈಚಾಚಿ ಅಲ್ಲಿ ತನ್ನ ಎಳೆಯ ಎಲೆಗಳನ್ನ ಹಬ್ಬಿಸಿಕೊಂಡಿತು. ರಸ್ತೆಯ ಮೇಲಿನ ಧೂಳು, ಎಲೆ, ಕಸ ಇತ್ಯಾದಿಗಳೆಲ್ಲ ರೋಲರಿನ ಮೇಲೆ ಪವಡಿಸಿ, ಈ ರೋಲರ್ರು ಈ ಕಾಲದ್ದಲ್ಲ ಅನ್ನುವ ಒಂದು ಕಲ್ಪನೆ ನೋಡುಗರಲ್ಲಿ ಬರುವಂತಹ ಪರಿಸ್ಥಿತಿಯನ್ನು ನಿರ್ಮಿಸಿತು.

ಆಗ ರಾಯರು ಈ ವಿಷಯವನ್ನು ತೀವ್ರವಾಗಿ ತೆಗೆದುಕೊಂಡರು.

ಆ ರಸ್ತೆಯಲ್ಲಿ ತಿರುಗಾಡುವ ಒಂದಿಬ್ಬರನ್ನು ನಿಲ್ಲಿಸಿಕೊಂಡು ''ಅಲ್ಲ, ಕೆಲಸ ಎಲ್ಲ ಆಯಿತು, ಈ ರೋಡ್ ರೋಲರ್ ಇಲ್ಲೇ ಉಳಿದುಬಿಟ್ಟಿತಲ್ಲ'' ಎಂದು ಅವರ ಗಮನ ಸೆಳೆದರು. ಅವರಲ್ಲಿ ಒಬ್ಬಿಬ್ಬರು ಒಂದೊಂದು ರೀತಿಯಲ್ಲಿ ಉತ್ತರಿಸಿದರು.

''ಕೆಟ್ಟು ಹೋಗಿರಬೇಕು.''

## ಕಲ್ಲ ಕನವರಿಕೆ

೧

ಹಂಪಿ ದೇಗುಲಗಳಲ್ಲಿ
ನೋಡುಗರು ಬಿಟ್ಟುಹೋದ
ಅಸಂಖ್ಯಾತ ಕಣ್ಣುಗಳು ಕಿಕ್ಕಿರಿದಿವೆ !
ಹಾಳಾದುದ ನೆನೆದು ಅತ್ತಾಗಲೆಲ್ಲಾ
ಪ್ರತಿ ಖಾಲಿ ಗುಡಿಗಳ ಮುಂದೆ
ಕಣ್ಣೀರ ಕಾಲುವೆ ಹರಿದಿದೆ !

೨

ಸೂಳೆ ಬಜಾರಿನ ಮುರುಕಲು
ಮಂಟಪದೊಳಗೆ
ನರಳುವಿಕೆ ಅಲೆಅಲೆಯಾಗಿ ಅನಾಥ !
ಬಿದ್ದ ಕಲ್ಲು ಕಂಬಗಳೆಲ್ಲಾ
ಭೂತಕ್ಕೆ ಮರಳಿ ಮೈ ಕಾವೇರಿ
ಮುಷ್ಟಿಮೈಥುನದಿ ಸುಖಿಸುತ್ತಿವೆ !

೩

ವಿಜಯ ವಿಠಲದ
ಕಂಬದೊಳಗಿನ ಹದಿನಾರೂ ಕಂಬಗಳು
ನಾದವ ಧ್ಯಾನಿಸುತ್ತಿವೆ !
ತೊಲೆ ಕುಸಿದು ಪ್ರಾಣತೆತ್ತವರ
ಕೊನೆಯುಸಿರು ಈ ನಾದದ
ಗರ್ಭದಲಿ ಉಸಿರು ಕಟ್ಟಿದೆ !

೪

ಫೋಟೋ ಫ್ಲಾಷಿಗೆ ಇಂಚಿಂಚೆ
ಕರಗುವಂತಿದ್ದರೆ
ಕಲ್ಲ ತೇರು ಪೂರಾ ಕರಗಿರುತ್ತಿತ್ತು !
ಉಳಿ ಏಟಿಗೆ ಕಲ್ಲ ಚೂರು ಶಿಲ್ಪಿಯ ಕಣ್ಣ ಸೇರಿ
ರಕ್ತವಾದದ್ದ ನೆನೆದು ಕಣ್ಣೀರಿಡುವುದ
ಸೆರೆಹಿಡಿಯಲಾರದ ಕ್ಯಾಮರಾದ
ಅಸಹಾಯಕತೆಗೆ ಕಲ್ಲತೇರು ಕನಿಕರಿಸುತ್ತದೆ !

೫

ಅಜ್ಜಿ ಹೇಳಿದ್ದು ನೆನಪಿದೆ
ಈ ಜಗದ ಪ್ರಳಯವೆಂದರೆ
ಹಂಪಿಯ ಕಲ್ಲಕೋಳಿ ಕೂಗಿ
ಮುಲ್ಲ ಚೂರಿ ಹಾಕಿ
ಕಲ್ಲರಥ ನಡೆಯಬೇಕು !

ಹೇ ಕಲ್ಲಕೋಳಿಯೆ
ನಿನ್ನ ಕೂಗೆ ಪ್ರಳಯವೆಂತಾದರೆ
ಪ್ರತಿ ಮುಂಜಾವು ಕಾಯುತ್ತಿರುತ್ತೇನೆ
ಒಮ್ಮೆ ಮೈಕೊಡವಿ ಕೂಗಿಬಿಡು
ಕಲ್ಲತೇರ ನಡೆನೋಡಿ
ಪ್ರಳಯವ ಚುಂಬಿಸಬೇಕು !



**ಅರುಣ್ ಜೋಳದ ಕೂಡ್ಲಿಗಿ**, ಜಾನಪದ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

''ಎಲ್ಲೂ ಕೆಲಸ ಇಲ್ಲ ಅಂತ ಕಾಣುತ್ತೆ.''

''ಇಂಜಿನಿಯರ್ ಮರೆತುಬಿಟ್ಟಿದ್ದಾನೆ ಅಂತ ಕಾಣುತ್ತೆ.''

''ಡ್ರೈವರ್ ರಜೆ ಹಾಕಿರಬೇಕು.''

''ಅಯ್ಯೋ, ಸರಕಾರಕ್ಕೆ ಒಂದು ಜವಾಬ್ದಾರಿ ಅಂತ ಇರಬೇಕಲ್ಲ...''
ಎಂದೆಲ್ಲ ಒಂದೊಂದು ಮಾತು ಕೇಳಿಬಂದಾಗ ರಾಯರು ಇದರಲ್ಲಿ ಯಾವುದು ಸರಿ ಎಂಬುದು ತಿಳಿಯದೆ ಪರದಾಡಿದರು. ಆದರೂ ಇದೆಲ್ಲ ಹೀಗೆ ಆಗಬಾರದು ಅಂದುಕೊಂಡರು.

ಅಚ್ಚುಕಟ್ಟಾಗಿ ಹೊಸತನ ಪಡೆದ ರಸ್ತೆ ಮಗ್ಗುಲಲ್ಲಿ ಹೀಗೊಂದು ಯಂತ್ರ ನಿಂತಿರುವುದು ಅಸಡ್ಡಾಳವೆನಿಸಿ ರಾಯರು ಅದನ್ನು ಅಲ್ಲಿಂದ ತೆಗೆಸಲೇಬೇಕು ಎಂದು ನಿರ್ಧರಿಸಿದರು. ಅಲ್ಲದೆ ಅವರ ಮತ್ತೂ ಒಂದು ಚಿಂತೆ ಅಂದರೆ ಒಂದು ಸರಕಾರಿ ಯಂತ್ರ ಇಲ್ಲಿ ಕೆಲಸವಿಲ್ಲದೆ ನಿಂತರೆ ಅದು ಸರಕಾರಕ್ಕೆ ನಷ್ಟವಲ್ಲವೇ ? ಸಾವಿರ ಲಕ್ಷ ರೂಪಾಯಿ ಬೆಲೆ ಬಾಳುವ ಒಂದು ಯಂತ್ರ ಹೀಗೆ ನಿರುಪಯೋಗಿಯಾಗಿ ನಿಲ್ಲುತ್ತದೆಂದರೆ ಏನು ಅರ್ಥ ? ರಾಯರು ತಮ್ಮ ಎಂದಿನ ಖಾದಿ ವಸ್ತ್ರ ಧರಿಸಿ ತಮ್ಮ ಕೋಲನ್ನು ಊರಿಕೊಂಡು ಲೋಕೋಪಯೋಗಿ ಇಲಾಖಾ ಕಛೇರಿಗೆ ಹೋದರು.

ಬಾಗಿಲಲ್ಲಿಯೇ ಅವರಿಗೆ ರಸ್ತೆ ಕೆಲಸವನ್ನು ಮಾಡಿಸಿದ ಇಂಜಿನಿಯರ್ ಭೇಟಿಯಾಯಿತು. ಆತ ಇವರನ್ನು ಒಳಗೆ ಕರೆದೊಯ್ದು ಕುರ್ಚಿಯಲ್ಲಿ ಕೂರಿಸಿ –

''ಏನು ಸ್ವಾಮಿ ಇಷ್ಟು ದೂರ ?'' ಎಂದು ಕೇಳಿದ.

''ಅಲ್ಲ ನಮ್ಮ ರಸ್ತೆ ಕೆಲಸ ಏನೋ ಆಯಿತು, ಆದರೆ ನಿಮ್ಮ ರೋಡ್ ರೋಲರ್ ಅಲ್ಲೇ ಉಳಿದುಬಿಟ್ಟಿತಲ್ಲಾ'' ಎಂದರು.

''ಏನು ರೋಡ್ ರೋಲರ್ ಅಲ್ಲೇ ಇದೆಯೇ ?'' ಆತ ಬೆರಗಾದ.

''ಸಾಧ್ಯ ಇಲ್ಲವಲ್ಲ'' ಎಂದು ತನ್ನ ಫೈಲುಗಳ ರ್‍ಯಾಕಿನಿಂದ ಒಂದು ಕಡತ ತೆಗೆದು ತಿರುವಿ ಹಾಕಿದ. ನಂತರ 'ಓ' ಎಂದು ಉದ್ಗರಿಸಿದ. ''ಸ್ವಾಮಿ... ನಮ್ಮಲ್ಲಿ ಸ್ಪೇರ್ ರೋಡ್ ರೋಲರ್ ಇಲ್ಲದ್ದರಿಂದ ಅದನ್ನು ಸೊರಬ ಉಪವಿಭಾಗದಿಂದ ನಾವು ತಂದಿದ್ವೀ... ಡ್ರೈವರ್ ಹುಷಾರಿಲ್ಲ ಅಂತ ಅದನ್ನು ಅಲ್ಲಿಯೇ ಬಿಟ್ಟುಹೋದ... ಉಪವಿಭಾಗದವರು ಅದನ್ನು ತರಿಸಿಕೊಳ್ಳಬೇಕಿತ್ತು... ಅವರೂ ಮರೆತಹಾಗಿದೆ... ಛೇ ಛೇ ಛೇ'' ಎಂದು ಆತ ಮಿಡುಕಾಡಿದ.

''ರೋಡ್ ರೋಲರ್ರು, ಲಾರಿ, ಮಿಕ್ಸರುಗಳೆಲ್ಲ ಮೆಕ್ಯಾನಿಕಲ್ ಇಂಜಿನಿಯರ್ ವಶದಲ್ಲಿ ಇರತಾವೆ. ಅವರಿಗೆ ಇವೆಲ್ಲ ಎಲ್ಲೆಲ್ಲಿ ಇವೆ ಅನ್ನೋದು ಗೊತ್ತಿರಬೇಕು. ಹೀಗೆ ಒಂದು ರೋಡ್ ರೋಲರ್ ಆರು ತಿಂಗಳಿಂದ ಇಲ್ಲಿದೆ ಅಂದ್ರೆ ಆ ಇಂಜಿನಿಯರ್ ಏನು ಮಾಡತಿದಾನೆ ? ಅವನಿಗೆ ಜವಾಬ್ದಾರಿ ಇಲ್ಲವೆ ?'' ಎಂದೆಲ್ಲ ಕೂಗಾಡಿದ ಆತ ನಂತರ –

''ನಾನು ಇವತ್ತೇ ಕಾಗದ ಬರೀತೀನಿ'' ಎಂದ.

''ಅಲ್ಲ ಡ್ರೈವರ್ ರಜೆ ಮೇಲೆ ಹೋಗಿದಾನೆ ಅನ್ನುವ ಕಾರಣಕ್ಕೆ ಹೀಗಾಗಬಾರದು ನೋಡಿ'' ಎಂದ ರಾಯರು ಅಲ್ಲಿಂದ ಹೊರಟವರು ''ಅಲ್ಲ ಡ್ರೈವರ್ ಹುಷಾರಿಲ್ಲ ಅಂದಿರಲ್ಲ, ಅವನು ಈಗ ಎಲ್ಲಿದಾನೆ ?'' ಎಂದು ಕೇಳಿದರು. ಅವರಿಗೆ ಡ್ರೈವರ್ ಸಿಂಜಾವನ ಬಗ್ಗೆ ಏನೋ ಆಸಕ್ತಿ ಇದ್ದುದರಿಂದ ಅವರು ಅವನ ಬಗ್ಗೆ ವಿಚಾರಿಸಿಕೊಂಡರು.

''ಅದು ನನಗೆ ಗೊತ್ತಿಲ್ಲ... ರಸ್ತೆ ಕೆಲಸ ಮುಗಿದ ದಿನ ಆತ ಆಫೀಸಿಗೆ ಬಂದವನು ನನಗೆ ಹುಷಾರಿಲ್ಲ ಸಾರ್, ನಾನು ಊರಿಗೆ ಹೋಗತಾ ಇದೀನಿ... ರೋಡ್‌ರೋಲರನ್ನ ತೆಗೆದುಕೊಂಡು ಹೋಗಲಿಕ್ಕೆ ನಮ್ಮ ವಿಭಾಗದವರಿಗೆ ಹೇಳತೇನೆ... ಅಂದಿದ್ದ. ಅವನು ಇನ್ನೂ ಹುಷಾರಿಲ್ಲ ಅಂತ ಕಾಣುತ್ತೆ. ಹೀಗಾಗಿ ರೋಡ್ ರೋಲರ್ರು ಇಲ್ಲೇ ಇದೆ... ಇರಲಿ ನಾನು ಅದನ್ನು ಅಲ್ಲಿಗೆ ಕಳುಹಿಸೋ ಕೆಲಸ ಮಾಡುತ್ತೇನೆ'' ಎಂದು ಮತ್ತೆ ಭರವಸೆ ನೀಡಿದ ಆತ.

ರಾಯರು ಕೋಲೂರಿಕೊಂಡು ಮನೆಗೆ ಬಂದರು. ಆದರೆ ಸಿಂಜಾವನ ಆರೋಗ್ಯ ಸರಿ ಇಲ್ಲ ಎಂಬ ವಿಷಯ ಅವರ ಮನಸ್ಸನ್ನು ಹಿಂಡಿತು. ಸೊರಬದವರೆಗೆ ಹೋಗಿ ಅವನನ್ನು ನೋಡಿಕೊಂಡು ಬರಬೇಕು ಎಂದು ಅವರು ಯೋಚಿಸಿದರು.

ಮಾರನೇ ದಿನ ರಾಯರು ಬಸ್ಸು ಹತ್ತಿ ಸೊರಬಕ್ಕೂ ಹೋದರು. ಸ್ಟ್ಯಾಂಡಿನಲ್ಲಿ ಇಳಿದು ಅಲ್ಲಿಯ ಲೋಕೋಪಯೋಗಿ ಕಛೇರಿಗೆ ಹೋದಾಗ ಅಲ್ಲಿ ಡ್ರೈವರ್ ಸಿಂಜಾವ ಈ ಹಿಂದೆ ಆಸ್ಪತ್ರೆಯಲ್ಲಿ ಇದ್ದವ ಈಗ ಮನೆಗೆ ಬಂದಿದ್ದಾನೆ ಎಂಬ ವಿಷಯ ತಿಳಿದು, ಇವರು ಕಛೇರಿ ಹಿಂದಿನ ಸಾಲುಮನೆಗಳಲ್ಲಿ ಅವನ ಮನೆ ಹುಡುಕಿಕೊಂಡು ಹೋದರು.

ತಲೆಗೊಂದು ಮಫ್ಲರ್ ಸುತ್ತಿಕೊಂಡು ಅಂಗಳದಲ್ಲಿ ಕುಳಿತ ಸಿಂಜಾವ ರಾಯರನ್ನು ತನ್ನ ಮನೆ ಬಾಗಿಲಲ್ಲಿ ನಿರೀಕ್ಷಿಸಿರಲಿಲ್ಲ. ಆತ ಇವರನ್ನು ನೋಡಿದ್ದೇ 'ಸ್ವಾಮಿ' ಎಂದು ಎದ್ದುನಿಂತ.

''ಕುತ್ಕೋ, ಕುತ್ಕೋ'' ಎಂದರು ರಾಯರು.

ರಾಯರ ಮನೆ ಎದುರಿನ ರಸ್ತೆ ಕೆಲಸ ಮುಗಿದು ಇನ್ನೇನು ಹೊರಡಬೇಕು ಅನ್ನುವಾಗ ಅವನಿಗೆ ಎದೆಯಲ್ಲಿ ನೋವು ಕಾಣಿಸಿಕೊಂಡು ಆತ ಆ ಕ್ಷಣದಲ್ಲಿ ಶಿವಮೊಗ್ಗದ ಆಸ್ಪತ್ರೆಗೆ ಹೋದ. ಅಲ್ಲಿಂದ ದಾವಣಗೆರೆಗೆ ಆತ ಹೋಗಬೇಕಾಯಿತು. ಅಲ್ಲಿ ಆಸ್ಪತ್ರೆಯಲ್ಲಿ ಮೂರು ತಿಂಗಳಿದ್ದ. ನಂತರ ಇಲ್ಲಿಗೆ ಬಂದು ಈಗ ವಿಶ್ರಾಂತಿ ಪಡೆಯುತ್ತಿದ್ದಾನೆ.

''ರೋಡ್ ರೋಲರ್ ಅಲ್ಲಿಂದ ತರಿಸಿಕೊಂಡು ಬಿಡಿ ಅಂತ ಸಾಹೇಬರಿಗೆ ಹೇಳಿದೆ... ಅದು ಇನ್ನೂ ಅಲ್ಲಿಯೇ ಇದೆಯೇ ?'' ಎಂದು ಮಿಡುಕಾಡಿದ ಸಿಂಜಾವ.

''ನಮ್ಮ ಉಪವಿಭಾಗದಲ್ಲಿ ಮೂವರು ಚಾಲಕರಿದ್ದಾರೆ. ಓರ್ವ ಸಾಹೇಬರ ಜೀಪಿಗೆ ಹೋಗತಾನೆ. ಮತ್ತೆ ಇಬ್ಬರು ಲಾರಿಗೆ. ಇವರು ಯಾರೂ ರೋಡ್ ರೋಲರ್‌ಗೆ ಹೋಗಲಿಕ್ಕೆ ಬಯಸೋದಿಲ್ಲ. ರೋಡ್ ರೋಲರ್ ಡ್ರೈವ್ ಮಾಡೋದು ಅವಮಾನ ಅಂತ ತಿಳೀತಾರೆ... ನಾಳೆ ಚೇತರಿಸಿಕೊಂಡ ಮೇಲೆ, ನಾನೆ ಅಲ್ಲಿಗೆ ಬಂದು ಅದನ್ನ ತರಬೇಕು...'' ಎಂದು ವಿವರವಾಗಿ, ಮಾತನಾಡಲು ಆಗದಿದ್ದರೂ ನುಡಿದ ಸಿಂಜಾವ.

''ಅಲ್ಲ ಒಂದು ಸರಕಾರಿ ಯಂತ್ರ ಹೀಗೆ ಕೆಲಸ ಮಾಡದೆ ನಿಂತರೆ ನಷ್ಟ ಅಲ್ಲವೇ ?'' ಎಂದು ಕೇಳಿದರು.

''ನಷ್ಟಾನೆ ಸ್ವಾಮಿ, ನಷ್ಟಾನೆ. ಗುತ್ತಿಗೆದಾರರಿಗೆ ಬಾಡಿಗೆಗೆ ಕೊಟ್ಟರೆ ಅದು ತಿಂಗಳಿಗೆ ಲಕ್ಷಾಂತರ ಸಂಪಾದನೆ ಮಾಡುತ್ತೆ... ಅಲ್ಲದೆ ಇಲಾಖೆ ಅಲ್ಲಿ ಇಲ್ಲಿ ಡಾಂಬರೀಕರಣ ಅಂತ ಮಾಡತಿರುತ್ತೆ. ಅಲ್ಲಿ ಅದರಿಂದ ಕೆಲಸ ಮಾಡಿಸಿಕೊಳ್ಳಬಹುದು. ಇವರೇನು ಮಾಡತಾರೆ, ಇಂಜಿನ್ ಇಲ್ಲ, ಡ್ರೈವರ್ ಇಲ್ಲ ಅಂತ ಬೇರೆ ಕಡೆಯಿಂದ ಇಂಜಿನನ್ನು ತರಿಸಿಕೊಳತಾರೆ... ರೋಡ್ ರೋಲರ್ ಇದ್ದೂ ಬೇರೆ ಕಡೆಯಿಂದ ತರಿಸಿಕೊಂಡು ಕೆಲಸ ಮಾಡಿಸೋದು ತಪ್ಪು. ಅಲ್ಲದೆ ಇದರಿಂದ ಸರಕಾರಕ್ಕೆ ನಷ್ಟ ಅಲ್ಲವೇ ಸ್ವಾಮಿ.''

ರಾಯರ ತಲೆ ಕೆಡುತ್ತ ಹೋಯಿತು. ಒಂದು ಅರ್ಧಗಂಟೆ ಅಲ್ಲಿ ಕುಳಿತಿದ್ದು ರಾಯರು ಅಲ್ಲಿಂದ ಹೊರಟರು. ಕಛೇರಿ ಆವರಣದಿಂದ ಹೊರಬೀಳುವ ಮುನ್ನ ಒಂದು ಸಾರಿ ಅಲ್ಲಿಯ ಅಧಿಕಾರಿಯನ್ನ ನೋಡೋಣ ಎನಿಸಿ ಆತನ ಛೇಂಬರಿಗೂ ಹೋದರು.

ಆತ ಇವರ ಉಡುಗೆ, ಆಕೃತಿ ನೋಡಿ ಗೌರವದಿಂದಲೇ ಮಾತನಾಡಿಸಿದ, ಇವರ ಅಹವಾಲು ಕೇಳಿದ. ನಂತರ ''ಇದೆಲ್ಲ ನನಗೆ ಗೊತ್ತೇ ಇರಲಿಲ್ಲ ನೋಡಿ. ನಾನು ನಾಳೇನೇ ಬೇರೊಬ್ಬ ಡ್ರೈವರನ್ನು ಕಳಿಸಿ ಅದನ್ನ ನಮ್ಮ ವಿಭಾಗಕ್ಕೆ ತರಿಸಿಕೊಳತೇನೆ... ನೀವು ಇಷ್ಟೆಲ್ಲ ಆಸಕ್ತಿ ವಹಿಸಿದ್ದಕ್ಕೆ ಥ್ಯಾಂಕ್ಸ್'' ಎಂದ.

ಅವನ ಥ್ಯಾಂಕ್ಸ್ ಅವನಿಗೇ ಹಿಂತಿರುಗಿಸಿ ರಾಯರು ಊರಿನ ಬಸ್ಸು ಹತ್ತಿದರು.

ದಾರಿಯುದ್ದಕ್ಕೂ ಅವರ ತಲೆಯಲ್ಲಿ ಇದ್ದುದು ಸರಕಾರದ ಬೇಜವಾಬ್ದಾರಿತನ. ಸರಕಾರಿ ನೌಕರರ ನಡಾವಳಿಕೆಗೆ 'ಛೆ, ಛೆ' ಎಂದುಕೊಂಡೇ ಅವರು ಊರಿಗೆ ಹಿಂತಿರುಗಿದರು. ಅವರು ತಮ್ಮ ರಸ್ತೆಗೆ ಬಂದಾಗ ಆ ರೋಡ್ ರೋಲರ್ರು ಅಲ್ಲಿ ತಪಸ್ಸಿಗೆ ಕುಳಿತ ಮುದಿ ಸನ್ಯಾಸಿಯಂತೆ ನಿಂತಿತ್ತು. ನಿಧಾನವಾಗಿ ಸುತ್ತಲಿನ ಗಿಡಬಳ್ಳಿಗಳು ಅದನ್ನ ತಮ್ಮ ಸುಪರ್ದಿಗೆ ತೆಗೆದುಕೊಳ್ಳತೊಡಗಿದ್ದವು. ಮರದ ಮೇಲಿನ ಒಂದೆರಡು ಕೋತಿಗಳು ರೋಲರ್ ಮೇಲೆ ಹತ್ತಿ ತಮ್ಮ ಚೇಷ್ಟೆಯನ್ನು ಆರಂಭಿಸಿದ್ದವು. ಕೆಲಹುಡುಗರು ಈ ಕೋತಿಗಳಿಗೆ ಸಂಗಾತಿಗಳಾಗಿ ನಿಂತಿದ್ದರು.

ದಿನನಿತ್ಯ ಬೆಳಿಗ್ಗೆ ವಾಯುವಿಹಾರ ಹೋಗುವ ರಾಯರು ಅನಿವಾರ್ಯವಾಗಿ ಆ ರೋಡ್ ರೋಲರ್‌ನ್ನ ನೋಡಬೇಕಾಗುತ್ತಿತ್ತು. ಅದನ್ನ ನೋಡಿದಾಗೆಲ್ಲ ಇವರ ಮನಸ್ಸಿನಲ್ಲಿ ಸೂಜಿ ಚುಚ್ಚಿದ ಹಾಗೆ ನೋವಾಗುತ್ತಿತ್ತು. ಸದ್ಯದಲ್ಲಿಯೇ ಅದನ್ನು ತರಿಸಿಕೊಳ್ಳುವುದಾಗಿ ಹೇಳಿದ ಸೊರಬದ ಅಧಿಕಾರಿ ಆ ಕೆಲಸವನ್ನು ಮಾಡಿರಲಿಲ್ಲ. ಆ ಯಂತ್ರ ಹಿಂದಿನ ಜಾಗದಲ್ಲಿಯೇ ಬಲವಾಗಿ ಕಾಲೂರಿ ನಿಂತುಬಿಟ್ಟಿತ್ತು. ಕಾಡು ಅದನ್ನ ಮತ್ತೂ ಆಕ್ರಮಿಸಿಕೊಂಡಿತ್ತು.

ಮುಂದೊಂದು ದಿನ ಶಿವಮೊಗ್ಗಕ್ಕೆ ಹೋದ ರಾಯರು ಅಲ್ಲಿಯ ಅಧೀಕ್ಷಕರ ಕಛೇರಿಗೂ ಹೋದರು. ಅಲ್ಲಿ ಬಾಗಿಲಲ್ಲಿ ನಿಂತ ಜವಾನನಿಗೆ ತಮ್ಮ ಗುರುತಿನ ಪತ್ರ ಕೊಟ್ಟು ಒಳಹೋದಾಗ ಇಲಾಖೆಯ ಅಧೀಕ್ಷಕ ಇಂಜಿನಿಯರ್ ಅವರನ್ನು ಬರಮಾಡಿಕೊಂಡ.

''ಅಲ್ಲ ಸ್ವಾಮಿ, ನಿಮ್ಮ ಇಲಾಖೆಯಲ್ಲಿ ಒಂದು ಕೆಲಸವನ್ನು ಮಾಡಲಿಕ್ಕೆ ಅಂತ ತಂದ ಡಿಪಾರ್ಟ್‌ಮೆಂಟಲ್ ವೆಹಿಕಲ್ಲನ್ನು ರಸ್ತೆಯ ಮೇಲೇನೆ ಬಿಡೋ ಪರಿಪಾಠ ಉಂಟೇ ? ಯಾರಾದರೂ ಖಾಸಗಿಯವರು ಹೀಗೆ ಮಾಡೋದನ್ನ ನೀವು ಎಲ್ಲಿಯಾದರೂ ನೋಡಿದೀರಾ ? ಸರಕಾರಿ ವಸ್ತು ಅಂದರೆ ಇಷ್ಟೊಂದು ನಿರ್ಲಕ್ಷ್ಯ ಸರಿಯೇ ?'' ಎಂದು ತುಸು ಖಾರವಾಗಿಯೇ ಪೀಠಿಕೆ ಹಾಕಿದ ರಾಯರು ಏನೂ ಅರ್ಥವಾಗದೆ ಮುಖ ಮುಖ ನೋಡುತ್ತ ಕುಳಿತ ಆ ಹಿರಿಯ ಇಂಜಿನಿಯರಿಗೆ ಇರುವ ವಿಷಯ ತಿಳಿಸಿದರು. ಜೊತೆಗೆ, ''ಸರಕಾರಿ ನೌಕರರು ಕೆಲಸ ಮಾಡದೆ ಕುಳಿತುಕೊಳ್ಳೋದು ಹೇಗೆ ಅಪರಾಧವೋ, ಹಾಗೆಯೇ ಒಂದು ಸರಿಯಾಗಿರೋ ಯಂತ್ರ ಹೀಗೆ ಕೆಲಸ ಮಾಡದೆ ಒಂದು ಕಡೆ ನಿಲ್ಲೋದು ತಪ್ಪು ಅಲ್ಲವೇ ? ಈ ಯಂತ್ರ ಅಲ್ಲಿ ಕೆಲಸ ಮಾಡದೇ ತುಕ್ಕು ಹಿಡಿಯೋದು,

ಅದರ ಬಿಡಿಭಾಗಗಳನ್ನ ಯಾರೋ ಕದ್ದುಕೊಂಡು ಹೋಗೋದು, ಇದರಿಂದ ಆಗುವ ನಷ್ಟವನ್ನು ಯಾರು ತುಂಬಿಸಿಕೊಡತಾರೆ ? ಇದೆಲ್ಲವನ್ನು ನೀವು ಯೋಚನೆ ಮಾಡಿದೀರಾ ?'' ಎಂದು ಕೇಳಿದರು.

ಆತ ಇವರಿಂದ ಎಲ್ಲ ಮಾಹಿತಿ ಕೇಳಿ ಪಡೆದುಕೊಂಡ. ನಂತರ ''ಸಾರ್, ನಾನಿದನ್ನ ಸರಿಪಡಿಸುತ್ತೇನೆ... ಇನ್ನೆರಡು ದಿನಗಳಲ್ಲಿ ಅಲ್ಲಿ ಆ ರೋಡ್ ರೋಲರ್ ಇರೋದಿಲ್ಲ ಅಂತ ತಿಳಿದುಕೊಳ್ಳಿ'' ಎಂಬ ಭರವಸೆ ನೀಡಿದ. ತಮಗಿಂತ ಕಡಿಮೆ ವಯಸ್ಸಿನವನೂ, ತುಸು ಆಸಕ್ತಿ, ಉತ್ಸಾಹ ಇರುವವನೂ ಆಗಿ ಕಂಡ ಅವನ ಮಾತನ್ನು ನಂಬಿ ರಾಯರು ಅಲ್ಲಿಂದ ಎದ್ದುಬಂದರು.

ಇದಾದ ನಂತರ ರಾಯರು ದಿನಾ ಕಾಯುವುದು, ಯಾರಾದರೂ ಬಂದು ಆ ರೋಡ್ ರೋಲರನ್ನ ಅಲ್ಲಿಂದ ತೆಗೆದುಕೊಂಡು ಹೋಗುತ್ತಾರೆಯೇ, ಆ ನಂದಿ ಮರದ ಕೆಳಗಿನ ಜಾಗ ಬರಿದಾಗುತ್ತದೆಯೇ ಎಂದು ಅವರು ಅತ್ತ ಹೋದಾಗಲೆಲ್ಲ ನೋಡುವುದು. ಆದರೆ, ಮತ್ತೆ ಎರಡು ತಿಂಗಳು ಕಳೆದರೂ ಅದು ಅಲ್ಲಿಯೇ ಇತ್ತು. ಇಡೀ ಸರಕಾರಿ ವ್ಯವಸ್ಥೆಯೇ ಜಡವಾಗಿದೆಯೇನೋ ಎಂಬಂತೆ ಅದು ಅಲ್ಲಿ ನಿಂತಿತ್ತು. ಕರ್ನಾಟಕ ಸರಕಾರ ಎಂಬ ಅದರ ಮೇಲಿನ ಬರಹ ಕೂಡ ಅಳಿಸಿಹೋಗುವಂತಾಗಿ, ಆ ರೋಡ್ ರೋಲರ್, ಕಾಡಿನ ಪಾಲಾಗಿತ್ತು.

ಈ ನಡುವೆ ಲೋಕೋಪಯೋಗಿ ಇಲಾಖೆಯ ಮುಖ್ಯ ಇಂಜಿನಿಯರ್ ಜೋಗಕ್ಕೆ ಬರಲಿದ್ದಾರೆ ಎಂಬ ವಿಷಯ ರಾಯರ ಕಿವಿಗೆ ಬಿದ್ದಿತ್ತು. ರಾಯರು ಮತ್ತೆ ತಯಾರಾದರು. ಬಸ್ಸಿನಲ್ಲಿ ಕುಳಿತು ಜೋಗದವರೆಗೂ ಅವರು ಹೋದರು. ಅಲ್ಲಿಯ ಪ್ರವಾಸಿ ಮಂದಿರದಲ್ಲಿ ಕುಳಿತ ಮುಖ್ಯ ಇಂಜಿನಿಯರ್ ಅವರನ್ನ ಕಂಡರು.

''ಸ್ವಾಮಿ, ಹೀಗೊಂದು ರೋಡ್ ರೋಲರ್ ನಮ್ಮ ಮನೆ ಮುಂದಿನ ಬೀದಿಯಲ್ಲಿ ಕಳೆದ ಒಂದು ವರ್ಷದಿಂದ ನಿಂತಿದೆ'' ಎಂದು ಎಂದಿನ ಪ್ರವರವನ್ನು ಹೇಳಿದರು. ಮುಖ್ಯ ಇಂಜಿನಿಯರ್ ಅವರು ''ಹೌದೆ, ಹೌದೆ'' ಎಂದು ಮಿಡುಕಾಡಿ ''ನಾನು ಅದನ್ನ ಅಲ್ಲಿಂದ ತೆಗೆಸಲಿಕ್ಕೆ ಕ್ರಮ ತೊಕೋತೀನಿ ಬಿಡಿ'' ಎಂದು ಆಶ್ವಾಸನೆ ನೀಡಿದರು. ಜೊತೆಗೆ –

''ಸರಕಾರಿ ಪ್ರಾಪರ್ಟಿ ಬಗ್ಗೆ ನಿಮಗೆ ಇರೋ ಆಸಕ್ತಿ ನೋಡಿ ನನಗೆ ಸಂತೋಷ ಆಗಿದೆ'' ಎಂದರು. ಇನ್ನಾದರೂ ಆ ರೋಡ್ ರೋಲರ್ ಅಲ್ಲಿಂದ ಕಾಣೆಯಾದೀತು ಅನ್ನುವ ಆಶಾಭಾವನೆಯನ್ನ ಹೊತ್ತು ರಾಯರು ಊರಿಗೆ ಬಂದರು.

ಆದರೆ ಆ ರೋಡ್ ರೋಲರನ್ನ ಅಲ್ಲಿಂದ ತೆಗೆದುಕೊಂಡು ಹೋಗಲು ಯಾರೂ ಬರಲಿಲ್ಲ.

ರಾಯರ ತಾಳ್ಮೆ, ಸಹನೆ, ದೇಶಾಭಿಮಾನ, ಎಲ್ಲವನ್ನು ಪಣಕ್ಕೆ ಒಡ್ಡಿದ ಹಾಗೆ ಆಗಿ ರಾಯರು ನಿದ್ದೆ ಬಾರದೆ, ಊಟ ಸೇರದೆ, ಶಾಂತಿ ತಾಳ್ಮೆಯನ್ನು ಕಳೆದುಕೊಂಡವರಂತೆ ದಿನ ಕಳೆದರು.

ಇದೇ ಸಮಯದಲ್ಲಿ ಅವರ ಮೇಲೆ ಪ್ರೀತಿ ಅಭಿಮಾನವಿರಿಸಿಕೊಂಡ ಲೋಕೋಪಯೋಗಿ ಇಲಾಖೆಯ ಮಂತ್ರಿ ಬಸವಣ್ಣಪ್ಪನವರು ಶಿವಮೊಗ್ಗಕ್ಕೆ ಬರುವ ಒಂದು ಸಂದರ್ಭ ಬಂದಿತು. ಕೂಡಲೇ ರಾಯರು ಸನ್ನದ್ಧರಾದರು. ಅವರ ಖಾದಿ ಶರಟು ಪಂಚೆಗಳು ಹೊರಬಂದವು. ಅವುಗಳನ್ನ ಧರಿಸಿ ರಾಯರು ಶಿವಮೊಗ್ಗೆಯ ಸರ್ಕ್ಯೂಟ್ ಹೌಸಿಗೆ ಹೋದರು. ಇರಲಿ ಎಂದು ಆ ರೋಡ್ ರೋಲರಿನ ಕತೆಯನ್ನ ಒಂದು ಬಿಳಿ ಕಾಗದದಲ್ಲಿ ಬರೆದು ಕೈಯಲ್ಲಿ ಹಿಡಿದುಕೊಂಡೇ ಹೋದರು.



ಬಸವಣ್ಣಪ್ಪನವರು ಅವರನ್ನು ಭಾರೀ ಗೌರವದಿಂದ ಸ್ವಾಗತಿಸಿದರು.

''ಏನು ರಾಯರೇ ಇಷ್ಟು ದೂರ, ಏನಾಗಬೇಕಿತ್ತು ?'' ಎಂದು ಪಕ್ಕದಲ್ಲಿ ಕೂರಿಸಿಕೊಂಡು ಕೇಳಿದರು.

ರಾಯರು ತಾವು ಬಂದ ಕಾರಣ ಹೇಳಿ, ಬರೆದುಕೊಂಡು ಹೋದುದನ್ನ ಅವರ ಕೈಗೆ ಕೊಟ್ಟರು.

''ಒಂದು ವರ್ಷದಿಂದ ಅಲ್ಲಿ ನಿಂತಿದೆ ಬಸವಣ್ಣಪ್ಪ ಆ ರೋಲರ್ರು. ಸರಕಾರಕ್ಕೆ ಒಂದು ಹೊಣೆಗಾರಿಕೆ ಬೇಡವೇ, ಒಂದು ಜವಾಬ್ದಾರಿ ಬೇಡವೇ. ಚೆನ್ನಾಗಿರೋ ಒಂದು ಯಂತ್ರಾನ ಹೀಗೆ ಕಾಡಿನ ಪಾಲಾಗಲಿಕ್ಕೆ ಬಿಟ್ಟಿರೋ ನಿಮ್ಮ ಇಲಾಖೆ ಇಂಜಿನಿಯರುಗಳು ಈ ದೇಶಾನ ಹೇಗಯ್ಯ ರಕ್ಷಣೆ ಮಾಡತಾರೆ'' ಎಂದು ತುಸು ಕಠಿಣವಾಗಿಯೇ ನುಡಿದರು ರಾಯರು.

''ಹೌದಾ, ಹೌದಾ, ನಮ್ಮ ಆಫೀಸರುಗಳ ಗಮನಕ್ಕೆ ನಾನಿದನ್ನ ತರತೀನಿ, ನೀವು ಯೋಚನೆ ಮಾಡಬೇಡಿ'' ಎಂದರು ಮಂತ್ರಿಗಳು.

ಮಂತ್ರಿಗಳು ಮತ್ತೂ ಒಂದೆರಡು ಮಾತು ನುಡಿದ ನಂತರ ರಾಯರು ಅಲ್ಲಿಂದ ಎದ್ದುಬಂದರು.

ಮತ್ತೆ ಒಂದು ತಿಂಗಳು ಉರುಳಿತು. ರೋಡ್ ರೋಲರ್ರು ಕಾಣಿಸುವುದೇ ಇಲ್ಲವೇನೋ ಅನ್ನುವಹಾಗೆ ಕಾಡಿನಬಳ್ಳಿ ಅದನ್ನ ಆವರಿಸಿಕೊಂಡಿತು.

ಈ ಪರಿಸ್ಥಿತಿಯಲ್ಲಿಯೇ ಆ ಯಂತ್ರ ಅಲ್ಲಿ ಉಳಿಯಿತು.

ಒಂದು ದಿನ ಬೆಳಿಗ್ಗೆ ಆ ಯಂತ್ರ ನಿಂತ ದಿಕ್ಕಿನಿಂದ ಏನೋ ಸದ್ದು ಬರಲು ರಾಯರು ವಾಕಿಂಗ್ ಹೊರಟವರು ತುಸು ಬೇಗನೆ ಅಲ್ಲಿಗೆ ಹೋದರು.

ಸಿಂಜಾವ ಯಂತ್ರದ ಮೇಲೆ ಕುಳಿತಿದ್ದ. ಅದರ ಮೇಲೆ ಬೆಳೆದ ಬಳ್ಳಿಗಿಡಗಳನ್ನು ಕಡಿದುಹಾಕಿದ್ದ. ಸುತ್ತ ಹಬ್ಬಿಕೊಂಡ ಕಾಡುಬದನೆ, ತುತ್ತೂರಿಗಿಡ, ಚದುರಮಟ್ಟಿಯನ್ನು ತೆಗೆದುಹಾಕಿದ್ದ. ರಾಯರು ಅದರ ಬಳಿ ಸಾರಿ –

''ಸಿಂಜಾವ'' ಎಂದರು.

''ನಮಸ್ಕಾರ ಸ್ವಾಮಿ'' ಸಿಂಜಾವ ಕೈಮುಗಿದ.

''ಅಬ್ಬ ಕೊನೆಗೂ ಸರಕಾರದ ಕಣ್ಣು ಇದರ ಮೇಲೆ ಬಿತ್ತು ಅಲ್ಲ ?''

''ಇಲ್ಲ ಸ್ವಾಮಿ, ಸರಕಾರ ನನ್ನ ಕಳುಹಿಸಲಿಲ್ಲ, ನಾನೇ ಬಂದೆ. ನನಗಿನ್ನೂ ಹುಷಾರಾಗಿಲ್ಲ. ಡಾಕ್ಟರು ಈಗಲೂ ವಿಶ್ರಾಂತಿ ತೊಕೋ ಅಂದಿದಾರೆ. ಆದರೂ ನಾನು ಬಂದಿದೀನಿ... ಸದಾಕಾಲ ಕೆಲಸ ಮಾಡುತ್ತಿದ್ದ ಯಂತ್ರ ಇದು. ಇದು ಹೀಗೆ ಕಾಡಿನ ಪಾಲಾಗಬಾರದು ಅಂತ ಬಂದಿದೀನಿ. ನಾನೇ ಫ್ಯೂಯಲ್ಲು, ಆಯಿಲ್ಲು ತಂದುಹಾಕಿ ಸ್ಟಾರ್ಟ್ ಮಾಡ್ತಿದೀನಿ... ಇದನ್ನೊಯ್ದು ಉಪವಿಭಾಗ ಕಛೇರಿ ಮುಂದೆ ಬಿಡತೇನೆ...''

ಆತ ಯಂತ್ರವನ್ನು ಸ್ಟಾರ್ಟ್ ಮಾಡಿದ. ಸುಮಾರು ಒಂದು ವರ್ಷದಿಂದ ಬಂದ್ ಬಿದ್ದ ಅದು ಕೂಡಲೇ ಕೆಲಸ ಮಾಡಲು ಒಪ್ಪಲಿಲ್ಲ. ಆದರೂ ಸಿಂಜಾವ ಬಿಡಲಿಲ್ಲ.

ಕೊನೆಗೂ ಅದರ ಮುಂದಿನ ಕೊಳವೆಯಲ್ಲಿ ನೀಲಿ ಹೊಗೆ ಹೊರಹೊಮ್ಮಿ ಅದು ಕೆಲಸ ಮಾಡಲಾರಂಭಿಸಿತು.

ಸಿಂಜಾವ ರಾಯರ ಮನೆಗೆ ಬಂದು ಅವರನ್ನು ಮಾತನಾಡಿಸಿಕೊಂಡು ಹೋದ.

ಅಂದು ಸೂರ್ಯ ನಡುನೆತ್ತಿಗೆ ಏರಿದಾಗ ಹಳ್ಳಿರಸ್ತೆಯ ಮೇಲೆ ನಿಂತಿದ್ದ ಆ ರೋಡ್ ರೋಲರ್ರು ಕೊನೆಗೂ ಅಲ್ಲಿಂದ ಹೊರಟು ಸೊರಬದ ದಾರಿ ಹಿಡಿದಾಗ ಹಳ್ಳಿ ಮಕ್ಕಳೆಲ್ಲ ಕೊಂಚ ದೂರ ಅದರ ಹಿಂದೆ ಓಡಿದರು.

ಅನಂತರಾಯರು ರೋಡ್ ರೋಲರ್ ಹೋಗುತ್ತದೆಂದು ನೋಡಲು ಬಂದವರು ಸಿಂಜಾವನತ್ತ ತಿರುಗಿ ಕೈ ಬೀಸಿದರು. ಅವನ ಆರೋಗ್ಯ ಇನ್ನೂ ಸರಿಯಾಗಿರಲಿಲ್ಲ. ಆತ ಮತ್ತೂ ನಿತ್ರಾಣಗೊಂಡಿದ್ದ, ಅಶಕ್ತನಾಗಿದ್ದ.

''ಸಿಂಜಾವ, ನಿನ್ನ ಆರೋಗ್ಯದ ಬಗ್ಗೆ ಗಮನ ಇರಲಿ'' ಎಂದು ಕೂಗಿ ಹೇಳಿದರು ರಾಯರು. ಆತ ಅಲ್ಲಿಂದಲೇ ತಲೆಯಾಡಿಸಿದ. ರೋಡ್ ರೋಲರು ಗಡಗಡ ಸದ್ದು ಮಾಡುತ್ತ ಹೋಗುವುದನ್ನು ನೋಡುತ್ತ ನಿಂತಿದ್ದು ರಾಯರು ಮನೆಯತ್ತ ತಿರುಗಿದರು. ತಮ್ಮ ಒಂದು ಹೋರಾಟ ಕೊನೆಗೂ ಯಶಸ್ವಿ ಆಯಿತಲ್ಲ ಎಂದು ಅವರಿಗೆ ಸಮಾಧಾನವಾಯಿತು.

ರೋಡ್ ರೋಲರ್ ನಿಂತ ಜಾಗದಲ್ಲಿ ಹುಲ್ಲು, ಗಿಡಗಳೆಲ್ಲ ಒಣಗಿಹೋಗಿ ಅದು ಒಂದು ಗುರುತನ್ನು ಅಲ್ಲಿ ಬಿಟ್ಟುಹೋಗಿತ್ತು. ಈ ಗುರುತು ಅಲ್ಲಿ ತಿರುಗಾಡುವ ರಾಯರನ್ನ ಬಹಳ ದಿನಗಳವರೆಗೆ ಕಾಡಿತು.

ಡಾ|| ನಾ. ಡಿಸೋಜ
೧೫/೧೪, ೨ನೇ ಕ್ರಾಸ್, ನೆಹರುನಗರ, ಸಾಗರ - ೫೭೭ ೪೦೧



# ಧರ್ಮ

## ಬಸವಣ್ಣ ಮತ್ತು ಕಾರ್ಲ್ ಮಾರ್ಕ್ಸ್‌ರ ಚಾರಿತ್ರಿಕ ವಿಶ್ಲೇಷಣೆ



**ಭಾ**ರತೀಯ ದಾರ್ಶನಿಕರು ಅಂತರಂಗದಲ್ಲಿ ಭೌತವಾದಿಗಳಾಗಿದ್ದರೂ ಬಹಿರಂಗದಲ್ಲಿ ಧರ್ಮದ ಪರಿಕರಗಳನ್ನು ಬಳಸಿಕೊಂಡರು. ಬುದ್ಧ, ಬಸವ, ಗಾಂಧಿ, ಅಂಬೇಡ್ಕರ್ ಮುಂತಾದವರನ್ನು ಇಲ್ಲಿ ಸ್ಥೂಲವಾಗಿ ಹೆಸರಿಸಬಹುದು. ಪಾಶ್ಚಾತ್ಯರು ಅಂತರಂಗದಲ್ಲಿ ಭಾವನಾವಾದದ ಪರವಾಗಿದ್ದು ಬಹಿರಂಗದಲ್ಲಿ ಭೌತವಾದಿಗಳಾಗಿದ್ದರು. ಇಮ್ಯಾನುಯಲ್ ಕಾಂಟ್, ಹೆಗೆಲ್, ಎರಿಕ್ ಫ್ರಾಂ ಮುಂತಾದವರು. ಇವರು ಧರ್ಮದ ಬಗ್ಗೆ ಇರುವ ಕುರುಡು ನಂಬಿಕೆಗಳು, ಮನುಷ್ಯನ ಅಧಃಪತನಕ್ಕೆ ದಾರಿಯಾಗುವ ಧಾರ್ಮಿಕಾಚರಣೆಗಳು, ಶೋಷಣೆಯ ಮೂಲವಾಗುವ ಧರ್ಮದ ಕಾನೂನು ಮುಂತಾದವುಗಳನ್ನು ವಿರೋಧಿಸಿದರೂ ಧಾರ್ಮಿಕ ನಂಬಿಕೆಯನ್ನಾಧರಿಸಿದ ನೈತಿಕತೆಯ ತಳಹದಿಯನ್ನು ತಿರಸ್ಕರಿಸಲಿಲ್ಲ. ಹೀಗಾಗಿ ಸಾರಾಸಗಟಾಗಿ ಅವರನ್ನೆಲ್ಲ ಧರ್ಮವಿರೋಧಿಗಳು, ಭಾರತೀಯರೆಲ್ಲ ಧರ್ಮ ದ್ರಷ್ಟಾರರು ಎಂಬಂತಹ ಕಪ್ಪುಬಿಳುಪು ಆಲೋಚನೆಗಳನ್ನು ಬದಿಗಿಟ್ಟು, ಧರ್ಮವು ಹೇಗೆ ಮನುಷ್ಯರನ್ನು ತೇಲಿಸುವ ಬೆಂಡೂ ಹೌದು; ಮುಳುಗಿಸುವ ಗುಂಡೂ ಹೌದು ಎಂಬುದನ್ನು ಅರಿಯಬೇಕಾಗಿದೆ.

ಬಸವಣ್ಣ ಮತ್ತು ಮಾರ್ಕ್ಸ್‌ರಿಬ್ಬರೂ ಧರ್ಮವನ್ನು ಈ ಎರಡು ಆಯಾಮಗಳಲ್ಲಿ ಕಂಡಿದ್ದಾರೆ. ಒಂದು, ಮನುಷ್ಯರ ಒಳತೋಟಗಳನ್ನು ನಿವಾರಿಸಿ ಅವರ ಆತ್ಯಂತಿಕ ಗುರಿಯಾದ ನೆಮ್ಮದಿಯನ್ನು (ಮೋಕ್ಷ) ತರುವ ಬೆಳಕಾಗುವ ಧರ್ಮ. ಇದು ಮನುಷ್ಯರಿಗೆ ಸ್ವಾತಂತ್ರ್ಯವನ್ನು, ನೈತಿಕತೆಯನ್ನು, ಜೀವನಪ್ರೀತಿಯನ್ನು, ಜೀವಪ್ರೀತಿಯನ್ನು ತುಂಬುವ ಮಾರ್ಗವಾಗಿ ಜೀವನ್ಮುಖಿಯಾಗಿರುತ್ತದೆ ಮತ್ತು ಇದು ಧರ್ಮದ ಆಧ್ಯಾತ್ಮಿಕ ಅಂಶಗಳಿಗೆ ಹೆಚ್ಚು ಹತ್ತಿರವಾಗಿದ್ದು ಬಿಡುಗಡೆಯ ಮಾರ್ಗವನ್ನು ತೆರೆಯುತ್ತದೆ. ಇನ್ನೊಂದು, ಬೆಂಕಿಯಾಗಿ ಬದುಕನ್ನು ಸುಟ್ಟು ಕರಕಲಾಗಿಸುವ ಧರ್ಮ. ಅದು ಪ್ರಭುತ್ವದ ಜೊತೆಗೂಡಿ ರಾಜ್ಯದ ಉಪಕರಣವಾಗಿ ಜನರನ್ನು ಹಿಂಸಿಸುತ್ತದೆ. ಮನುಷ್ಯರ ಸುಖವನ್ನು ಇನ್ನೆಲ್ಲೋ ಹುಡುಕಲು ಹಚ್ಚಿ ಎದುರಿಗಿರುವ ಬದುಕನ್ನು ನರಕವಾಗಿಸುತ್ತದೆ. ಇದು ಧಾರ್ಮಿಕ ಆಚರಣೆಗಳಿಗೆ ಹೆಚ್ಚು ಒತ್ತು ಕೊಟ್ಟು ಬಹುತೇಕ ಬಂಧನವಾಗಿ ಪರಿಣಮಿಸುತ್ತದೆ. ತಾನು ಹುಟ್ಟುವಾಗ ಇಟ್ಟುಕೊಂಡಿರುವ ಚಾರಿತ್ರಿಕ, ಸಾಮಾಜಿಕ ಕಾರಣಗಳನ್ನು ಕಡೆಗಣಿಸಿ ಕೊನೆಯ ಮನುಷ್ಯನ ಪರವಾಗಿ ಇರುವ ತನ್ನ ನೀತಿಯನ್ನು ಸಮಾಜದ ಮೊದಲ ಮನುಷ್ಯನೆಡೆಗೆ ತಿರುಗಿಸುತ್ತದೆ. ಇಂತಹ ಧರ್ಮದ ಚಾರಿತ್ರಿಕ ಕಾರಣಗಳನ್ನು, ಸಾಮಾಜಿಕಾರ್ಥಿಕ ಮೂಲಗಳನ್ನು, ಸರಿಯಾಗಿ ವಿಶ್ಲೇಷಿಸಿ ಅದರ ಎರಡೂ ಆಯಾಮಗಳನ್ನು ಪರಿಚಯಿಸಿದವರು ಬಸವಣ್ಣ ಮತ್ತು ಕಾರ್ಲ್ ಮಾರ್ಕ್ಸ್‌ರು.

ಧರ್ಮವು ಪ್ರಭುತ್ವದೊಂದಿಗೆ ಕೈಜೋಡಿಸಿ ಜನಸಾಮಾನ್ಯರನ್ನು ತುಳಿಯುವಲ್ಲಿ ರಾಜ್ಯದ ಉಪಕರಣವಾಗಿ ಕೆಲಸ ಮಾಡುತ್ತದೆಂದು ಮಾರ್ಕ್ಸ್ ಹೇಳುತ್ತಾನೆ. ಮಧ್ಯಯುಗದ ಚರ್ಚ್‌ನ ಧೋರಣೆಗಳು, ವಿಜಯನಗರ ಕಾಲದ ಧಾರ್ಮಿಕ ದಾಳಿಗಳು, ಒಡೆಯರ ಕಾಲದ ಜಂಗಮರ ಹತ್ಯಾಕಾಂಡ ಇತ್ಯಾದಿಗಳನ್ನು ಮಾರ್ಕ್ಸ್‌ನ

ಡಾ॥ ಶಿವಗಂಗಾ ರುಮ್ಮ

ಮಾತಿಗೆ ಉದಾಹರಿಸಬಹುದು. ಪ್ರಭುತ್ವವು ತನ್ನ ಯಥಾಸ್ಥಿತಿಯನ್ನು ಕಾಯ್ದುಕೊಳ್ಳಲು ಧರ್ಮದ ನೆರವು ಪಡೆಯುತ್ತದೆ. ಪ್ರಭುತ್ವದ ಮೂಲಕ ಜನರ ಮೇಲೆ ಹಿಡಿತ ಸಾಧಿಸುವುದು ಧಾರ್ಮಿಕ ಮುಖಂಡರ ಉದ್ದೇಶವೂ ಆಗಿರುತ್ತದೆ. ಹೀಗಾಗಿ ಧರ್ಮದ ತಿರುಳಿನಲ್ಲಿ ಇರುವ ಜನಪರ ನಿಲುವು ಧಾರ್ಮಿಕ ಮುಖಂಡರ ಮುಖಾಂತರ ಜನವಿರೋಧಿಯಾಗಿ ಮಾರ್ಪಡುತ್ತದೆ. ಅದನ್ನೇ ಬಸವಣ್ಣ 'ಕೊಲುವೆನೆಂಬ ಭಾಷೆ ದೇವನದು' ಎನ್ನುತ್ತಾನೆ, 'ವೇದವನೋದಿದವರ ಮುಂದೆ ಅಳು ಕಂಡ್ಯಾ' ಎಂದು ಮರುಗುತ್ತಾನೆ. ಕಾಯುವ, ದಯವೇ ಜೀವಾಳವಾಗಿ ಇರುವ ಧರ್ಮ ಕೊಲ್ಲುವ ಉಪಕರಣವಾಗುವ ವಿಪರ್ಯಾಸವನ್ನು ಇಬ್ಬರೂ ಬಯಲಿಗೆಳೆಯುತ್ತಾರೆ.

ಅಸಹನೀಯ ಪರಿಸ್ಥಿತಿಯಲ್ಲಿ ಬದುಕುತ್ತಿರುವ ಜನರು ಬೇರೆ ದಾರಿ ಕಾಣದೆ ತಮ್ಮ ಬದುಕಿನ ಬೇಗುದಿಯ ಶಮನಕ್ಕಾಗಿ ಧರ್ಮವನ್ನು ಆಯ್ದುಕೊಳ್ಳುತ್ತಾರೆ ಎಂದು ಮಾರ್ಕ್ಸ್ ಹೇಳುತ್ತಾನೆ. ಈ ಹೃದಯಹೀನ ಜಗತ್ತಿನಲ್ಲಿ ಹೃದಯವಂತಿಕೆಯನ್ನು ಸಾರುವ, ಚೈತನ್ಯಹೀನ ಬದುಕಿನಲ್ಲಿ ಚೈತನ್ಯವನ್ನು ತುಂಬುವ, ಕೆಲಸವನ್ನು ಧರ್ಮವು ಮಾಡುತ್ತದೆ. ಇಲ್ಲಿನೆಲ್ಲ ದುಃಖಗಳನ್ನು ಮರೆಸುವ ಔಷಧಿಯಾಗಿಯೂ ಧರ್ಮವು ಬಳಕೆಯಾಗುತ್ತದೆ. ಆದ್ದರಿಂದಲೇ ಅದೊಂದು ಮತ್ತುಬರಿಸುವ ವಸ್ತು ಎಂದು ಮಾರ್ಕ್ಸ್ ವಿಶ್ಲೇಷಿಸುತ್ತಾನೆ. ಇಲ್ಲಿನ ಸಂಕಟಗಳಿಂದ ಪಾರಾಗುವ ಮಾರ್ಗವಾಗಿ ಜನರು ಧರ್ಮವನ್ನು ಆಯ್ದುಕೊಳ್ಳುತ್ತಾರೆ ಎಂದು ಆವನ ನಿಲುವು. ಅದನ್ನೇ ಬಸವಣ್ಣ ಈ ಮುಂದಿನ ಮಾತಿನಲ್ಲಿ ಹೇಳುತ್ತಾನೆ :

ಧರ್ಮದ ಸಾಮಾಜಿಕ ಮತ್ತು ಚಾರಿತ್ರಿಕ ವಿಶ್ಲೇಷಣೆಯನ್ನು ಮಾಡುವುದರ ಮುಖಾಂತರ ಅದು ಹುಟ್ಟುವ ಮತ್ತು ಅದನ್ನು ಜನರು ಎಂತಹ ಪರಿಸ್ಥಿತಿಯಲ್ಲಿ ಸ್ವೀಕರಿಸುತ್ತಾರೆ ಎನ್ನುವುದನ್ನು ಬಸವಣ್ಣ ಮತ್ತು ಮಾರ್ಕ್ಸ್‌ರಿಬ್ಬರೂ ಚಿಕಿತ್ಸಕ ರೀತಿಯಲ್ಲಿ ಹೇಳುತ್ತಾರೆ. ಜನರ ಧಾರ್ಮಿಕಾಚರಣೆಗಳ ಹಿಂದಿನ ಉದ್ದೇಶ ಮತ್ತು ಅವುಗಳ ಮುಖಾಂತರ ತಮ್ಮ ಅಸ್ತಿತ್ವವನ್ನು ಸ್ಥಾಪಿಸುವ, ಪ್ರತಿಭಟನೆಯನ್ನು ವ್ಯಕ್ತಪಡಿಸುವ ಅದ್ಭುತ ರೀತಿಯನ್ನು ಅವರಿಬ್ಬರೂ ಗುರುತಿಸುತ್ತಾರೆ.

ಬಸುರ ಬಾಳುವೆಗೆ
ನಿಮ್ಮಲ್ಲಿ ಮಸಿಯ ಹೂಸಿ ನೇರಿಲಹಣ್ಣ ಮಾರುವಂತೆ
ಕಾಲ ಸಾಲ ದಾರಿದ್ರ್ಯಕ್ಕಂಜಿ ನಿಮ್ಮ ಮೊರೆಹೊಕ್ಕೆನಯ್ಯ
ಆವುದ ಹುಸಿಯೆಂಬೆ ಆವುದ ಕಿರಿದೆಂಬೆ
ಇದ ನೀನೆ ಬಲ್ಲೆಯಯ್ಯ
ಕೂಡಲಸಂಗಮದೇವಾ, ನಾನು ಉದರ ಪೋಷಕನಯ್ಯ. (ವ.ಸಂ.೨೯೩)

ಧರ್ಮವು ಅಮೂರ್ತಲೋಕವನ್ನು ಪರಿಭಾವಿಸುವುದರ ಮೂಲಕ ಈ ಜಗತ್ತಿನಲ್ಲಿ ನಡೆಯುವ ಅನ್ಯಾಯಗಳಿಂದ ಬೇಸತ್ತವರಿಗೆ ಸಾಂತ್ವನವನ್ನು, ಭಯಗೊಂಡವರಿಗೆ ರಕ್ಷಣೆಯನ್ನು, ದಿಕ್ಕಿಲ್ಲದ ಅನಾಥ ಮನೋಭಾವನೆಯುಳ್ಳವರಿಗೆ ಆಶ್ರಯದ ತಾಣವಾಗಿ ಆಪ್ಯಾಯಮಾನವಾಗುತ್ತದೆ. ಹೊಟ್ಟೆಪಾಡಿಗಾಗಿ, ಆರ್ಥಿಕ ಸಂಕಷ್ಟಗಳಿಂದಾಗಿ ಕಾಲದ ಕಟ್ಟಳೆಗೊಳಗಾಗಿ, ಸಾಲಕ್ಕಂಜಿ ನಿಮ್ಮ ನೆನೆಯುತ್ತೇನೆ ಎಂಬ ಬಸವಣ್ಣನ ಮಾತು ಸಾಮಾಜಿಕಾರ್ಥಿಕವಾಗಿ ಕೊನೆಯ ಸಾಲಿನಲ್ಲಿ ಬದುಕುವವರ ವಾಸ್ತವ ಚಿತ್ರಣ ಕೊಡುತ್ತದೆ. ಆದ್ದರಿಂದ ಅಂತಹ ಹುಸಿ ಧರ್ಮಕ್ಕೆ ತಾನು ಮೊರೆಹೋಗದೆ ಆತ್ಮವಿಶ್ವಾಸದಿಂದ ಈ ಲೋಕದ ಬದುಕಿನ ಕಷ್ಟಕೋಟಲೆಗಳನ್ನು ಎದುರಿಸುತ್ತೇನೆ ಎಂಬ ಧೈರ್ಯ ಅವನಲ್ಲಿದೆ.

ಕಾಯದ ಕಳವಳಕ್ಕಂಜಿ 'ಕಾಯಯ್ಯಾ' ಎನ್ನೆನು
ಜೀವನೋಪಾಯಕ್ಕೆ 'ಈಯಯ್ಯಾ' ಎನ್ನೆನು
ಯದ್ ಭಾವಾ ತದ್ ಭವತಿ: ಉರಿ ಬರಲಿ, ಸಿರಿ ಬರಲಿ
ಬೇಕು ಬೇಡೆನ್ನೆಯ್ಯ
ಆನು ನಿಮ್ಮ ಹಾರೆನು, ಮಾನವರ ಬೇಡೆನು
ಆಣೆ ನಿಮ್ಮಾಣೆ ಕೂಡಲಸಂಗಮದೇವಾ ವ.ಸಂ.೬೯೬

ಅಂದರೆ ಮಾರ್ಕ್ಸ್ ಹೇಳುವಂತೆ ಬಸವಣ್ಣ ಕೂಡ ಜನರ ಅಸಹಾಯಕತೆಯು ಧಾರ್ಮಿಕತೆಯತ್ತ ಎಳೆದೊಯ್ಯುವ ಪರಿಯನ್ನು ಚಿತ್ರಿಸುತ್ತಾನೆ. ಅಷ್ಟೇ ಅಲ್ಲದೆ, ಅದರಿಂದ ಹೊರಬರುವ ಮಾರ್ಗವನ್ನೂ ಸೂಚಿಸುತ್ತಾನೆ.

ಧರ್ಮವು ಅಫೀಮು ಎಂಬ ಮಾರ್ಕ್ಸ್‌ನ ಮಾತುಗಳನ್ನೇ ಬಸವಣ್ಣ ಹೀಗೆ ಹೇಳುತ್ತಿದ್ದಾನೆ. ಭಕ್ತಿಯೆಂಬ ಪಿತ್ತ ತಲೆಗೇರಿ ಕೈಲಾಸದ ಬಟ್ಟೆಯ ಹತ್ತುವ ವ್ಯರ್ಥರ ಕಂಡು ಎನ್ನ ಮನ ನಾಚಿತ್ತು, ನಾಚಿತ್ತು. ಇದಲ್ಲದೆ 'ಭಕ್ತಿಯೆಂಬುದು ಅನಿಯಮ ನೋಡಯ್ಯ ಅದು ವಿಷದ ಕೊಡ' ಎಂಬ ಮಾತನ್ನೂ ಬಸವಣ್ಣ ನುಡಿಯುತ್ತಾನೆ.

ಧರ್ಮದ ಸಾಮಾಜಿಕ ಮತ್ತು ಚಾರಿತ್ರಿಕ ವಿಶ್ಲೇಷಣೆಯನ್ನು ಮಾಡುವುದರ ಮುಖಾಂತರ ಅದು ಹುಟ್ಟುವ ಮತ್ತು ಅದನ್ನು ಜನರು ಎಂತಹ ಪರಿಸ್ಥಿತಿಯಲ್ಲಿ ಸ್ವೀಕರಿಸುತ್ತಾರೆ ಎನ್ನುವುದನ್ನು ಬಸವಣ್ಣ ಮತ್ತು ಮಾರ್ಕ್ಸ್‌ರಿಬ್ಬರೂ ಚಿಕಿತ್ಸಕ ರೀತಿಯಲ್ಲಿ ಹೇಳುತ್ತಾರೆ. ಜನರ ಧಾರ್ಮಿಕಾಚರಣೆಗಳ ಹಿಂದಿನ ಉದ್ದೇಶ ಮತ್ತು ಅವುಗಳ ಮುಖಾಂತರ ತಮ್ಮ ಅಸ್ತಿತ್ವವನ್ನು ಸ್ಥಾಪಿಸುವ, ಪ್ರತಿಭಟನೆಯನ್ನು ವ್ಯಕ್ತಪಡಿಸುವ ಅದ್ಭುತ ರೀತಿಯನ್ನು ಅವರಿಬ್ಬರೂ ಗುರುತಿಸುತ್ತಾರೆ.

ದಾಸನ ವಸ್ತ್ರವ ಬೇಡದ ಮುನ್ನ
ತವನಿಧಿಯನಿತ್ತಡೆ ನಿಮ್ಮ ದೇವರೆಂಬೆ
ಸಿರಿಯಾಳನ ಮಗನ ಬೇಡದ ಮುನ್ನ
ಕಂಚಿಯಪುರವ ಕೈಲಾಸಕ್ಕೊಯ್ದಡೆ ನಿಮ್ಮ ದೇವರೆಂಬೆ
ಬಲ್ಲಾಳನ ವಧುವ ಬೇಡದ ಮುನ್ನ
ಸ್ವಯಲಿಂಗವ ಮಾಡಿದಡೆ ನಿಮ್ಮ ದೇವರೆಂಬೆ
ದೇಹಿ ನೀನು, ವ್ಯಾಪಾರಿಗಳು ನಮ್ಮವರು
ಬೇಡು ಕೂಡಲಸಂಗಮದೇವಾ, ಎಮ್ಮವರ ಕೈಯಲು (ವ.ಸಂ.೪೪೪)

ಧರ್ಮವನ್ನು ಕುರಿತು ವಿಜ್ಞಾನವಾಗಲಿ, ತತ್ತ್ವಶಾಸ್ತ್ರವಾಗಲಿ ಏನೇ ಹೇಳಿದರೂ ಜನರು ಮಾತ್ರ ತಮಗೆ ಸಂಸ್ಕಾರ ಸಿಕ್ಕ ಪರಿಸರಕ್ಕನುಗುಣವಾಗಿ ತಮಗೆ ತಿಳಿದಂತೆ ಸಂಪ್ರದಾಯ, ರೂಢಿಗಳ ಆಚರಣೆಯಲ್ಲಿ ತೊಡಗಿರುತ್ತಾರೆ. ಬೊಂಬೆಯಾಟದಲ್ಲಿ ತೊಡಗಿರುವ ಮಕ್ಕಳಂತೆ. ಮಕ್ಕಳಿಗೂ ಗೊತ್ತು ಇದು ಆಟವೆಂದು. ಆದರೂ ನಿಜವೆಂಬಂತೆ ಭಾವಿಸಿ ಅದರಲ್ಲಿ ಮುಳುಗಿಹೋಗಿರುತ್ತಾರೆ. ಅಂತೆಯೇ ಬಹುತೇಕ ಧಾರ್ಮಿಕಾಚರಣೆಯಲ್ಲಿ ಸಿಕ್ಕಿಕೊಂಡ ಮನುಷ್ಯರು ತಮಗೆ ಗೊತ್ತಿಲ್ಲದೆಯೆ ಕೆಲವೊಮ್ಮೆ ಜೀವವಿರೋಧಿಗಳಾಗಿ ಜನವಿರೋಧಿಗಳಾಗಿ ಮಾರ್ಪಡುತ್ತಾರೆ. ಹಾಗೆ ಮಾರ್ಪಡುವಲ್ಲಿ ಧರ್ಮವು ಬಹುದೊಡ್ಡ ಪಾತ್ರವನ್ನು ನಿರ್ವಹಿಸಿರುತ್ತದೆ. ಈ ಮೇಲಿನ ವಚನವು ಅನಿವಾರ್ಯವಾಗಿ ಮಗನನ್ನು ಕೊಲ್ಲುವಂತಹ, ಹೆಂಡತಿಯನ್ನು ಕೊಡುವಂತಹ, ಆಚರಣೆಗಳಲ್ಲಿ ಸಿಲುಕಿಕೊಂಡ ಸ್ಥಿತಿಯನ್ನು ಬಿಂಬಿಸುತ್ತದೆ. ಜೊತೆಗೆ ಅಂತಹ ಆಚರಣೆಗಳನ್ನು ಮಾಡಿಸುವ ಧರ್ಮ ಮತ್ತು ದೇವರು ಮನುಷ್ಯರಂತೆಯೇ ಕನಿಷ್ಠರು ಎನ್ನುವುದನ್ನು ವಿಡಂಬಿಸುತ್ತಿದೆ. ಜೊತೆಗೆ ಅಂತಹ ಆಚರಣೆಗಳಲ್ಲಿ ಅವರು ಕಂಡ ನೆಮ್ಮದಿಯ (ಮೋಕ್ಷ) ಭ್ರಮಾತ್ಮಕ ಕಲ್ಪನೆಗಳನ್ನು ಕೂಡ ಈ ವಚನ ಬಿಂಬುಸುತ್ತಿದೆ. ಆದ್ದರಿಂದಲೇ ಧರ್ಮವು ವಿಷ ಎಂದು ಬಸವಣ್ಣ ಹೇಳಿದರೆ ಅಫೀಮು ಎಂದು ಮಾರ್ಕ್ಸ್ ಹೇಳುತ್ತಾನೆ.

ಬಸವಣ್ಣ ಮತ್ತು ಮಾರ್ಕ್ಸ್‌ರು ಮನುಷ್ಯ – ಮನುಷ್ಯರ ನಡುವೆ ಘರ್ಷಣೆಗೆ, ಹಿಂಸೆಗೆ, ಅಸಮಾನತೆಗೆ ಮತ್ತು ಅವನತಿಗೆ ಕಾರಣವಾಗುವ ಇಂತಹ ಧರ್ಮವನ್ನು ತಿರಸ್ಕರಿಸುತ್ತಾರೆ. ದುಡಿಯುವ ಕೈಗಳಿಗೆ ಕೆಲಸವಿಲ್ಲದ, ದುಡಿದೂ ಹೊಟ್ಟೆ ತುಂಬದ ಧರ್ಮದ ಬದಲಿಗೆ ದುಡಿಯುವ ಮತ್ತು ಅದರ ಮೂಲಕ ಸಾಮಾಜಿಕಾರ್ಥಿಕ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ನೆರವಾಗದ ಧರ್ಮವನ್ನು ತಿರಸ್ಕರಿಸುತ್ತಾರೆ. ಬದಲಿಗೆ ದುಡಿಯುವ ಮತ್ತು ಅದಕ್ಕೆ ತಕ್ಕಂತೆ ಬದುಕುವ ಧರ್ಮವೇ ನಿಜವಾದ ಧರ್ಮವೆಂದು ಸಾರುತ್ತಾರೆ. ದಯೆ ಮತ್ತು ದುಡಿಮೆಗಳು ಧರ್ಮದ ಜೀವಾಳವಾದಾಗ ಮನುಷ್ಯರ ಬದುಕಿನ ಯಾವ ಮೂಲೆಯೂ ಅಸಮಾನತೆಯಿಂದ ಬಳಲುವುದಿಲ್ಲ, ಯಾರೂ ಹಸಿವಿನಿಂದ ಸಾಯುವುದಿಲ್ಲ ಎಂಬುದು ಅವರಿಬ್ಬರ ಖಚಿತ ನಿಲುವಾಗಿದೆ.

**ಡಾ|| ಶಿವಗಂಗಾ ರುಮ್ಮ**
ಸರಕಾರಿ ಮಹಾವಿದ್ಯಾಲಯ, ಕನ್ನಡ ವಿಭಾಗ, ಗುಲ್ಬರ್ಗಾ

# ಶಕ್ತಿ ಉಳಿಕೆಯ ಮೊಳಕೆ

ಎಸ್. ಸಾಯಿಲಕ್ಷ್ಮಿ

ಮನೆಗೆಲಸದ ವೇಣಿ ಅಪ್ಪಣೆಯಿಲ್ಲದ ರಜೆ, ಸ್ವಇಚ್ಛೆಯ ಮೇಲೆ ಪಡೆದು ತಮಿಳುನಾಡಿಗೆ ಹೋಗಿದ್ದಳು. ದೊಡ್ಡದಾಗಿ ಮನೆ ಕಟ್ಟುವುದಕ್ಕಿಂತ ಅದರ ನಿರ್ವಹಣೆಯ ಪಾತ್ರ ಬಲು ದೊಡ್ಡದು. ಮನೆಯೆಲ್ಲಾ ಒಂದೇ ಧೂಳು, ನೆಲವೆಲ್ಲಾ ಮಣ್ಣು. ಸರಿ, ವಾರದ ರಜೆಯ ಶನಿವಾರ ಸಂಕಲ್ಪಮಾಡಿ ಮನೆಯ ಶುದ್ಧೀಕರಣ ಕ್ರಿಯೆಯಲ್ಲಿ ಏಕಾಂಗಿಯಾಗಿ ಮಗ್ನಳಾದೆ. ಬಚ್ಚಲೆಲ್ಲಾ ಬ್ಲೀಚಿಂಗ್ ಪೌಡರ್‌ನಿಂದ ಮಿಂಚಲಾರಂಭಿಸಿತು. 'ಸಿಂಕ್' ತನ್ನ ಹಳೆ ಮಂಕ್‌ಪೊರೆ ಕಳಚಿತು. ನೆಲವೆಲ್ಲಾ ಓರಣವಾಗಿ, ಮನದ ಹಿಗ್ಗು ಹೆಚ್ಚಿಸಿ ಹಾಯೆನಿಸಿತು. ಎರಡೂವರೆ ತಾಸು ಕಬಳಿಸಿತು ಈ ಕ್ಲೀನಿಂಗ್ ಆಪರೇಷನ್. ಕಿರಿಪುತ್ರಿ ಮಾರ್ನಿಂಗ್ ಕ್ಲಾಸ್ ಮುಗಿಸಿ ಬಂದಳು. ಊಟಕ್ಕೂ ಕೂತಳು. ಯೂನಿಫಾರಂ ಬದಲಿಸದ ಮೇಧಾಗೆ ಹಿತವಚನದ ಮಹಾಪೂರ ನನ್ನೆಡೆಯಿಂದ : ''ಪುಟ್ಟಾ, ನೋಡು ಆ ಶೂ ಸಾಕ್ಸ್, ಇಲ್ಲಿ ಹೀಗೆ ಎಸಿತಾರಾ ಹೇಳು. ಕೈಕಾಲು ತೊಳೆದೆಯೋ ಇಲ್ವೋ? ಬಟ್ಟೆ ಬದಲಾಯಿಸದೆ ಊಟಕ್ಕೆ ಕೂತರೆ ಸರೀನಾ ? ಬೆಲ್ಟ್ ಬಿಸಾಕಿದೀಯಾ, ಬ್ಯಾಗ್ ಅನಾಥವಾಗಿ ಬಿದ್ದಿದೆ. ಮನೆ ಸರಿ ಮಾಡೋಕೆ, ಕೆಳಗೆ ಮೇಲೇಂತ ಇಷ್ಟು ಹೊತ್ತು ಹಿಡೀತು...'' ಹೀಗೆ ಹರಿಯುತ್ತಿರುವಾಗ, ಗೇಟ್ ತೆರೆದು, ಕೈಯಲ್ಲೊಂದು ರಿಜಿಸ್ಟರ್ ಹಿಡಿದು ಯುವಕನೊಬ್ಬ ಪ್ರವೇಶ ಮಾಡಿಬಿಟ್ಟ ಅಚಾನಕ್.

''ನಾನು ಕೆಇಬಿಯಿಂದ ಬಂದಿದೀನಿ. ನಿಮ್ಮ ಹಳೇ ಲೈಟ್ ಬಿಲ್ ತನ್ನಿ'' ಎಂದ.

ನೂರಾರು ಬಿಲ್ ನಡುವೆ ತಡಕಾಡಿದಾಗ ಅಂತೂ ಒಂದು ಸಿಕ್ಕಿತು. ಸದ್ಯ ಇವನನ್ನು ಸಾಗಹಾಕಿದರೆ ಸಾಕು ಎಂದುಕೊಳ್ಳುತ್ತಾ ಅವನಿಗೆ ಅದನ್ನು ಕೊಟ್ಟೆ. ನನ್ನದಿನ್ನೂ ಸ್ನಾನ, ಊಟ ಎಲ್ಲವೂ ಆಗಬೇಕಿತ್ತು. ಆಯಾಸದ ಶರಧಿಯಲ್ಲಿ ಅದ್ದಿ ತೆಗೆದ ಮೈಗೆ ಆರಾಮ ಬೇಕಿತ್ತು.

''ಹೌದು, ಇದು ನಿಮ್ಮದೇ ಬಿಲ್ಲು'' ಎಂದು ಮೀಟರ್ ನೋಡಿ ದೃಢಪಡಿಸಿದ ಆ ಭೂಪ. ''ಈ ಬಲ್ಬು ಇಲ್ಲಿ ಹಾಲ್‌ನಲ್ಲಿ ಹಾಕಿದೀರಲ್ಲ, ಇದರಲ್ಲಿ ಬೆಳಕು ಕಮ್ಮಿ, ಕರೆಂಟ್ ಉಳಿತಾಯವೂ ಇಲ್ಲ. ನಾವು ನೋಡಿ ಮಹಾರಾಷ್ಟ್ರ, ಆಂಧ್ರಪ್ರದೇಶದಿಂದ ಪವರ್ ತೆಗೋತಿದೀವಿ. ಅದಕ್ಕೆ ಕೆಇಬಿ, ಪ್ರತಿಯೊಂದು ಮನೆಯ ಬಳಕೆ ನೋಡಿಕೊಂಡು, ಇದಕ್ಕಿಂತಲೂ ಒಳ್ಳೇ ಕರೆಂಟ್ ಉಳಿಸೋ 'ಬಲ್ಬ್'ನ್ನ ಉಚಿತವಾಗಿ ಕೊಡ್ತಾ ಇದೆ. ಟೈಮ್ಸ್ ಆಫ್ ಇಂಡಿಯಾದಲ್ಲಿ ಕಳೆದ ತಿಂಗಳು ಬಂದಿತ್ತಲ್ಲ ಈ ಸುದ್ದಿ? ನೋಡಲಿಲ್ವಾ ?'' ನಾನು ಅವನ ಮಾತು ಕೇಳುತ್ತಲೇ ನಿಂತೆ.

''ಅಮ್ಮಾ, ಮೊಸರು'' ಎಂದ ಮಗಳಿಗೆ ''ಅಲ್ಲೇ ಇದೆ, ನೀನೇ ಹಾಕ್ಕೋ ಪುಟ್ಟಾ'' ಎಂದು ಈ 'ಪವರ್' ಮನುಷ್ಯನ ಪ್ರವರಕ್ಕೆ ಪುನಃ ಕಿವಿ ಕೊಟ್ಟೆ.

''ನಿಮ್ಮ ಮಗಳಾ ಮೇಡಂ'' ಎಂದ.

''ಹೌದು'' ಎಂದೆ.

''ನಿಮಗೆ ಇಷ್ಟು ದೊಡ್ಡ ಮಗಳಿದಾಳೇಂತ ಹೇಳೋಕೆ ಆಗೋಲ್ಲ'' ಎಂದನವ. ಕಾಗೆ ನರಿಯ ಹೊಗಳಿಕೆಯ ಆಸೆಗೆ ಬಾಯಿತೆರೆದು ರೊಟ್ಟಿಬಿಟ್ಟಂತೆ ''ಇನ್ನೂ ಇವಳಿಗಿಂತ ದೊಡ್ಡ ಮಗಳಿದಾಳೆ. ಅವಳು ಪಿಯುಸಿ ಓದತಿದಾಳೆ'' ಅತಿ ಉತ್ಸಾಹದಿಂದ ಹೇಳಿದೆ.

''ಖಂಡಿತಾ ಮೇಡಂ, ನಂಬೋಕೆ ಆಗೋಲ್ಲ'' ಕಣ್ಣರಳಿಸಿದ. ತಲೆಗೆ ಡೈ ಬಳಸುವವಳಲ್ಲ ನಾನು, ಅತಿ ಹೆಚ್ಚು ಮೇಕಪ್ ಪ್ರಿಯಳೂ ಅಲ್ಲ. ಬೆಳೆದ ಮಕ್ಕಳ ತಾಯಿಯಂತೆ ಕಾಣುವುದಿಲ್ಲವೆಂದ ಆ 'ಪವರ್' ಸರದಾರನಿಗೆ ಒಂದು ಲೋಟ ಕಾಫಿ ಕೊಡುವ ಭಗವತ್ ಪ್ರೇರಣೆಯಾಯಿತು. ಆ ಕ್ಷಣದಲ್ಲೇ, ಅವನ ಮಾತಿನ ಜಾಡು ಬದಲಾಯಿಸಲು ಕೇಳಿದೆ, ''ಎಷ್ಟು ಬಲ್ಬ್ ಕೊಡ್ತೀರಾ ಜಾಸ್ತಿ ಅಂದ್ರೆ ?''

ಮ್ಯಾಕ್ಸಿಮಮ್ ೧೨. ಆದರೆ ಈಗ ನೀವು ಮಾಡಬೇಕಾದ್ದು ಇಷ್ಟೇ. ಈ ಬಲ್ಬು ಒಂದರ ಬೆಲೆ ಹೊರಗೆ ೨೪೦ ರೂ. ಕೆಇಬಿಯವರು ಇದನ್ನ ೨೦೦ ರೂ.ಗೆ ಕೊಂಡುಕೊಂಡು ಸಪ್ಲೈ ಮಾಡ್ತಿದ್ದಾರೆ. ೧೨ ಬಲ್ಬ್ ಮಾತ್ರ ನೀವು ಕೊಂಡುಕೋಬೇಕು. ಉಳಿದ ೧೨ ಫ್ರೀ. ಈಗ ನೀವು ೧೨ಕ್ಕೆ ೨೪೦೦ ರೂ. ಕೊಟ್ರೆ, ಅದನ್ನ ಮೂರು ತಿಂಗಳ ಬಿಲ್‌ನಲ್ಲಿ, ೮೦೦ ರೂ. ತರ ಬಿಲ್‌ನಲ್ಲಿ ಆಡ್ಜೆಸ್ಟ್ ಮಾಡಕೋತಾರೆ. ಆಮೇಲೆ ಸೋಲಾರ್. ಅದೂ ಫ್ರೀ ಕೊಡತ್ತೆ ಕೆಇಬಿ'' ಎಂದ. ನಿಜಕ್ಕೂ ಕೆಇಬಿ ಸರಕಾರದ ಪರವಾಗಿ, ಜನಸಾಮಾನ್ಯರ ಕರೆಂಟ್ ಉಳಿತಾಯದ ಬಗ್ಗೆ ವಹಿಸಿರುವ ಕಾಳಜಿಗೆ ಮನದಲ್ಲೇ ಧನ್ಯವಾದ ಸಮರ್ಪಿಸಿದೆ. ಪವರ ಮ್ಯಾನ್ ಹೇಳುತ್ತಲೇ ಹೋದ. ನನ್ನದೋ ಮಂತ್ರಮುಗ್ಧ ಸ್ಥಿತಿ. ''ನಾನು ಕೆಇಬೀಲಿ ಜ್ಯೂನಿಯರ್ ಇಂಜನೀಯರ್ ಶ್ರೀನಿವಾಸ ಅಂತ''. ''ಓ, ನನ್ನ ನಾದಿನಿ ಗಂಡ ಶಶಿಕಾಂತ ಅಲ್ಲಿ ಹಿರಿಯ ಇಂಜಿನಿಯರ್'' ಅಂದೆ. ''ಗೊತ್ತು, ಅವರು ಕಾವೇರಿ ಭವನ್‌ನಲ್ಲಿದ್ದಾರೆ. ಬಹಳ ಪ್ರಾಮಾಣಿಕ ವ್ಯಕ್ತಿ, ಒಳ್ಳೇ ಹೆಸರು ಮಾಡಿದಾರೆ.''

ಹೃದಯ ಹಿಗ್ಗಿಂದ ಹೂವಾಯಿತು.

''ನಿಮಗೆ ಎಷ್ಟು ಬಲ್ಬ್ ಬೇಕು ?''

''೧೨ ಬೇಕು. ಆದರೆ ತಕ್ಷಣಕ್ಕೆ ದುಡ್ಡಿಲ್ಲ. ಎಟಿಎಂನಿಂದ ತರಬೇಕು. ಸೋಮವಾರ ತಗೋತೀವಿ ಬಿಡಿ.''

''ಈ ಆಫರ್ ಇವತ್ತು ಮಾತ್ರ. ಮನೆ ಮನೆಗೆ ಬಂದು ಕೊಡೋದು. ಈ ಏರಿಯಾಗೇ ಇನ್ನೊಂದು ಸಲ ಇಲ್ಲ. ಯಜಮಾನರು ಇದ್ದ ಹಾಗೆ ಇಲ್ಲ. ಬೇಕಾದರೆ ಫೋನ್ ಮಾಡಿ, ಇಲ್ಲ ಅಕ್ಕಪಕ್ಕದವರ ಹತ್ತಿರ ಕೇಳಿ ಆಮೇಲೆ ಕೊಟ್ಟರಾಯಿತು. ಚೆಕ್ ತೆಗೊಳ್ಳೋಣ ಅಂದ್ರೆ ಬ್ಯಾಂಕ್ ಟೈಂ ಆಗಿಹೋಗಿದೆ.'' ಸರಿ ಇದು ಎಲ್ಲಕ್ಕಿಂತ ಈ ಯಜಮಾನ್ರಿಗೆ ಫೋನ್ ಮಾಡಿ ಕೇಳೋದೇ ಕ್ಷೇಮ ಎಂದು ನಿರ್ಧರಿಸಿ, ಅವರ ಸಂಖ್ಯೆ ಒತ್ತಿದೆ. ವಿಷಯ ತಿಳಿಸಿದೆ.

''ಅಯ್ಯೋ ಅಷ್ಟೊಂದು ದುಡ್ಡು ಮನೇಲಿಲ್ಲಾ. ನಾನು ಬರೋದು ಇನ್ನು ಎರಡು ಗಂಟೆ ಆಗತ್ತೆ. ಸೋಮವಾರ ತೆಗೊಂಡ್ರೆ ಆಯಿತುಬಿಡು'' ಎಂದ ಯಜಮಾನ್ರಿಗೆ ಪರಿಸ್ಥಿತಿಯ ತುರ್ತು ನಿವೇದಿಸಿ ''ಪಕ್ಕದ ಮನೇಫ್ರೆಂಡ ಪಡೆಯಲೇ'' ಎಂದು ಕೇಳಿ ಒಪ್ಪಿಗೆ ಪಡೆದೆ. ಆ ಪಕ್ಕದ ಮನೆಗೂ ಸಂಪರ್ಕಿಸಿದೆ. ಜಯಸಿಂಹ ಅವರಿಗೆ ಹಣ ಬೇಕೆಂದು ಮಾತ್ರ ಹೇಳಿ ''ಇದೆ'' ಎಂದ ನಂತರ ಊಟ ಪೂರೈಸಿದ್ದ ಮೇಧಾಳನ್ನು ಕಳಿಸಿ ತರಿಸಿಕೊಂಡೆ. ಅವರು ಅಚ್ಚುಕಟ್ಟಾಗಿ, ಕವರ್‌ಲ್ಲಿ ಹಣ ಕಳಿಸಿದ್ದರು. ''ತಾಳಿ, ಬಲ್ಬ್ ತಂದೆ'' ಎಂದು ಎದ್ದುಹೋಗಿ



ಎರಡು ನಿಮಿಷದಲ್ಲಿ ೨೪ ಬಲ್ಬ್ ತಂದು, ಟೀಪಾಯಿಯ ಮೇಲೆ, ಒಂದೇ ಏಟಿಗೆ ಜೋಡಿಸಿಯೇ ಬಿಟ್ಟ ಆ ಮಹಾನುಭಾವ.

''ನೋಡಿ ಮೇಡಂ, ಈ ರಿಯಾಯ್ತಿ, ಸ್ವಂತ ಮನೇಲಿದ್ದು, ಟ್ಯಾಕ್ಸ್ ಕಟ್ಟೋ ನಿಮ್ಮಂತವರಿಗೆ ಮಾತ್ರ.''

''ಮನೆ ಟ್ಯಾಕ್ಸ್ ಅಲ್ಲದೇ, ಮನೆ ಬಾಡಿಗೆ ಭತ್ಯೆಗೆ ಇನ್‌ಕಮ್ ಟ್ಯಾಕ್ಸ್ ಕಟ್ತೀನಿ'' ಎಂದೆ ಅಭಿಮಾನದಿಂದ. ನಂತರ ''ಶ್ರೀನಿವಾಸ, ಬಲ್ಬ್ ಇನ್ನೂ ಇದೇ ತಾನೇ ? ಯಾಕೆಂದರೆ, ಎಲ್ಲಾ ನಮಗೆ ಕೊಟ್ರೆ ಪಕ್ಕದಲ್ಲೇ ಇದಾರೆ ಜಯಸಿಂಹ ಅಂತಾ. ಇಸ್ರೋದಲ್ಲಿ ಕೆಲಸ ಅವರಿಗೆ. ಅವರ ಮನೆಗೂ ಬೇಕಲ್ಲಾ, ಅವರದ್ದು ಸ್ವಂತ ಮನೆ. ಅವರೇ ಓನರ್'' ಎಂದು ಶಿಫಾರಸ್ ಮಾಡಿದೆ.

''ಅವರಿಗೂ ಕೊಡ್ತೀನಿ ಮೇಡಂ. ಏನೇ ಅಂದ್ರೂ ನಿಮಗೆ ಇಷ್ಟು ದೊಡ್ಡ ಮಗಳಿದಾಳೇಂತ ಹೇಳೋಕೆ ಆಗೋಲ್ಲ'' ಎಂದವನಿಗೆ ''ಕಾಫಿ ರೆಡಿ ಇದೆ'' ಎಂದೆ.

''ಇಲ್ಲಾ ಮೇಡಂ, ತುಂಬಾ ಮನೆಗಳಿವೆ ಕೊಡೋಕೆ. ತಾಳಿ ನಿಮ್ಮ ಹಣಕ್ಕೆ ಬಿಲ್ ತರ್ತೀನಿ'' ಎಂದವ ಕವರಿನಿಂದ ೨೪೦೦ ಎಣಿಸಿ, 'ನೂರು ರೂ. ಹೆಚ್ಚಿದೆ' ಎಂದು ಹಿಂತಿರುಗಿಸಿ ಬರುವೆನೆಂದು ಹೊರಟ. ಎರಡು ನಿಮಿಷ ಎರಡು ಗಂಟೆಯಾದರೂ ಅವನ ಸುಳಿವಿಲ್ಲದಾಗ, ಎಲ್ಲ 'ಎನರ್ಜಿ ಸೇವರ್ ಬಲ್ಬ್' ಅಲ್ಲಾಡಿಸಿ ಖಾತ್ರಿಪಡಿಸಿಕೊಂಡೆ.

ಅಕ್ಕಪಕ್ಕದ ರಸ್ತೆಯಲ್ಲೆಲ್ಲಾ ಒಂದು ಬಲ್ಬ್ ಹಿಡಿದು ಹುಡುಕಿ ಬಂದೆ. ಎಲ್ಲೂ ಆತನ ಪತ್ತೆಯಾಗಲಿಲ್ಲ. ಜಯಸಿಂಹ ಅವರಲ್ಲಿ ವಿಚಾರಿಸಲಾಗಿ, ಆತ ಅವರ ಮನೆಗೆ ಭೇಟಿ ನೀಡಿದ್ದು ತಿಳಿಯಿತು. ಅವರೇ ಸಮಾಧಾನಪಡಿಸಿದರು.

''ಅವನು ಈ ಬಲ್ಬನ್ನ ನಿಮಗೆ ಮಾರಿದಾನೆ. ಇಟ್ಟುಕೊಳ್ಳಿ. ಒಳ್ಳೇ ಬಲ್ಬ್. ಎಲೆಕ್ಟ್ರಿಕ್ ಶಾಪ್ ತೆಗೆದ ಮೇಲೆ, ಎಲ್ಲಾ ಚೆಕ್ ಮಾಡಿಸಿ ಕೆಲಸ ಮಾಡತ್ತಾಂತ ನೋಡಿ'' ಎಂದು ಅವರ ಹೆಂಡತಿ ಸುಮಾ ಹೀಗೆ ಪೇಚಿಗೆ ಸಿಲುಕಿದ ಸಂದರ್ಭ ಬಣ್ಣಿಸಿದರು.

'ಈ ಹಿಂದೆ ಒಬ್ಬ ಹೆಚ್ಚು ಕಮ್ಮಿ ಹೀಗೆ, 'ಬಿಎಸ್‌ಎನ್‌ಎಲ್‌ನಿಂದ ಬಂದಿದೀವಿ. ಕಾಲರ್ ಐ.ಡಿ. ಫೋನ್, ಒಂದಕ್ಕೆ ಬರಿ ೨೫೦ ರೂ.' ಎಂದಾಗ ಆಸೆಯಿಂದ ಇರಲಿ ಎರಡು ಅಂತಾ ಕೊಂಡುಕೊಂಡಳು. ಎರಡು ದಿನ ಕೆಲಸ ಮಾಡಿತು. ಆಮೇಲೆ ಮೂಲೆಗೆ ಹಾಕಬೇಕಾಯಿತು.''

ಇನ್ನು ಮನೆಯೊಡೆಯ ಬಂದನಂತರ ಏನೇನೋ ಕೇಳಬೇಕಾದೀತು ಎಂಬ ಆತಂಕ ಕಾಡಲಾರಂಭಿಸಿತು. ಅಪ್ಪ ಬಂದ ಕೂಡಲೇ, ಮೇಧಾ ಆ ಬಲ್ಬ್‌ಗಳ ಭಂಡಾರ ತೋರಿ, ಹೇಳಿಯೇಬಿಟ್ಟಳು.

''ಸರಿಯಾಗಿ ಟೋಪಿ ಹಾಕಿದಾನೆ. ಅಂತಹವರನ್ನು ಯಾರಾದ್ರೂ ಮನೇಲಿ ಬಿಟ್ಕೋತಾರಾ ?''

ಸಾಲದ್ದಕ್ಕೆ ಮೇಧಾ ಸೇರಿಸಿಯೂ ಬಿಟ್ಟಳು, ''ನಿಮಗಿಷ್ಟು ದೊಡ್ಡ ಮಗಳಿದಾಳೇಂತ ನಂಬೋಕೆ ಆಗೋಲ್ಲ ಅಂದಾಪ್ಪಾ.''

''ಅದಕ್ಕೇ ನಿಮ್ಮಮ್ಮ ಹಳ್ಳಕ್ಕೆ ಬಿದ್ದಿದ್ದು'' ಎಂದು ಇನ್ನಷ್ಟು ಬೈದರು. ''ನಾನೇ ಈ ಕೆಲಸ ಮಾಡಿದ್ದರೆ ಸುಮ್ಮನಿರತಿದ್ದೆಯಾ ? ತರಕಾರಿ, ಹಣ್ಣಂಗಡೀಲಿ ಚೌಕಾಸಿ ಮಾಡ್ತೀಯಾ'' ಎಂದು ಹಂಗಿಸಲೂ ಮರೆಯಲಿಲ್ಲ. ''ಹೋಗಲಿ ಒಂದು ಬಲ್ಬ್ ಸಾಕೆಟ್‌ಗೆ ಹಾಕಿ ಟೆಸ್ಟ್ ಮಾಡಿ'' ಎಂದು ವಿನಂತಿಸಿಕೊಂಡೆ. ಪರೀಕ್ಷೆ ನಡೆದು ಬಲ್ಬ್ ನಗುತ್ತಾ ಬೆಳಕು ಚೆಲ್ಲಿತು. ಸದ್ಯ ಬೇಸ್ತು ಬಿದ್ದಿಲ್ಲ ಎಂದು ಸಮಾಧಾನವಾಯ್ತು.

ಈಗ ನಾವೊಂದು ನಿರ್ಣಯಕ್ಕೆ ಬಂದಿದೀವಿ. ಇನ್ನು ಯಾವ ಮದುವೆ, ಮುಂಜಿ, ಶಾಂತಿ, ಹುಟ್ಟು ಹಬ್ಬಾಂತ ನಮ್ಮನ್ನು ಆಮಂತ್ರಿಸಿದರೆ, ಉಡುಗೊರೆ ಸಿದ್ಧವಾಗಿದೆ. ಪ್ಯಾಕಿಂಗ್ ಮಾತ್ರ ಬಾಕಿ, ಕೊಟ್ಟವರ ಬದುಕಲ್ಲಿ ಬೆಳಕು ಧಂಡಿಯಾಗಿರಲಿ, ಖರ್ಚು ಮಿತವಾಗಿರಲಿ ಎಂಬುದೇ ನಮ್ಮ ಆಶಯ. ನೀವು ಕರೆಯೋಕೆ ಮರೀಬೇಡಿ. ಒಂದಲ್ಲ ಎರಡಲ್ಲ ೨೪ ಇದೆ ನಮ್ಮ ಹತ್ರ.

ಎಸ್. ಸಾಯಿಲಕ್ಷ್ಮಿ
ಪ್ರೋಗ್ರಾಂ ಎಕ್ಸಿಕ್ಯೂಟಿವ್, ಆಲ್ ಇಂಡಿಯ ರೇಡಿಯೋ
ರಾಜಭವನ ರಸ್ತೆ, ಬೆಂಗಳೂರು - ೫೬೦ ೦೦೧

## ಸಾದರ ಸ್ವೀಕಾರ

**ವಾರೆ ವ್ಹಾ...!** (ವ್ಯಂಗ್ಯ ಚಿತ್ರಕಾರರ ಕುರಿತ ಮಾಹಿತಿ)
ವಸಂತ ಹೊಸಬೆಟ್ಟು
**ಪುಟ :** ೧೨೦ **ಬೆಲೆ :** ರೂ. ೫೦
**ಸಾಧನಾ ಪ್ರಕಾಶನ**, ನಂ. ೧೨೦, ಮೊದಲನೇ ಮಹಡಿ, ಬಳೇಪೇಟೆ ಮುಖ್ಯರಸ್ತೆ, ಬೆಂಗಳೂರು - ೫೬೦ ೦೫೩

**ನಾಳೆಯ ಸೂರ್ಯ** (ಮಕ್ಕಳ ಕಾದಂಬರಿ)
ಬಸು ಬೇವಿನಗಿಡದ
**ಪುಟ :** ೮೮ **ಬೆಲೆ :** ರೂ. ೬೦

**ಕರೆಯುವುದು ಕೋಗಿಲೆ** (ಕವನ ಸಂಕಲನ)
ಚೈತ್ರ ಬೇವಿನಗಿಡದ
**ಪುಟ :** ೬೯ **ಬೆಲೆ :** ರೂ. ೪೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಚೈತ್ರ ಪ್ರಕಾಶನ**, 'ಸಿರಿಚೈತ್ರ', ವಿಜಯನಗರ, ಕೆಲಗೇರಿ ರಸ್ತೆ, ಧಾರವಾಡ - ೫೮೦ ೦೦೮

**ಗುಜರಿ ಅದ್ದಿಲಿಚ್ಚನ ಜಿಹಾದಿಯು** (ಕಥಾ ಸಂಕಲನ)
ಡಾ|| ಬಿ. ಪ್ರಭಾಕರ ಶಿಶಿಲ
**ಪುಟ :** ೮೮ **ಬೆಲೆ :** ರೂ. ೫೦
**ರಾಜ್ ಪ್ರಕಾಶನ**, ನಂ. ೮೩, ಕೆಎಸ್‌ಆರ್‌ಟಿಸಿ ಬಡಾವಣೆ, ಹನುಮಂತನಗರ, ಬನ್ನಿಮಂಟಪ, ಮೈಸೂರು - ೧೫

**ಟೋಪಿವಾಲಾ ಮತ್ತು ಇಲಿಗಳು** (ಮಕ್ಕಳ ನಾಟಕಗಳು)
ಶೈಲಿ ಪ್ರಭಾಕರ್
**ಪುಟ :** ೭೫ **ಬೆಲೆ :** ರೂ. ೪೫
**ರಂಗಮನೆ ಪುಸ್ತಕ ಲೋಕ**, ಜಯನಗರ, ಸುಳ್ಯ, (ದ. ಕ.)

**ಬಿಸಿಲ ಭೂಮಿಯ ಕೋಗಿಲೆ** (ಕವನ ಸಂಕಲನ)
ಜಿ. ಬಿ. ಪೂಜಾರಿ
**ಪುಟ :** ೮೦ **ಬೆಲೆ :** ರೂ. ೫೫
**ಸುಜಾತಾ ಪ್ರಕಾಶನ**, C/o ಜಿ. ಬಿ. ಪೂಜಾರಿ, ಹಿರೇ ವಡಗೇರಾ - ೫೮೫ ೩೫೫, ಶಹಾಪುರ ತಾಲೂಕು, ಗುಲಬರ್ಗಾ ಜಿಲ್ಲೆ

**ದೂರ ಸರೋವರ** (ಸಣ್ಣ ಕತೆಗಳು)
ಪ್ರೊ|| ಟಿ. ಎಸ್. ನಾಗರಾಜ ಶೆಟ್ಟಿ
**ಪುಟ :** ೧೦೨ **ಬೆಲೆ :** ರೂ. ೬೫
**ನಿರ್ಮಲ ಪ್ರಕಾಶನ**, ೯೫೭, ಸಂತೋಷ ಸಾಗರ, ೫ನೇ ಅಡ್ಡರಸ್ತೆ, ಗೋವಿನಪುರ, ತಿಪಟೂರು - ೫೭೨ ೨೦೨

**ಒಂದನೇ ತರಗತಿಯಿಂದ ಇಂಗ್ಲಿಷ್ ಕಲಿಕೆ ಏಕೆ ಬೇಡ ?**
ಡಿ. ಎಸ್. ನಾಗಭೂಷಣ
**ಪುಟ :** ೫೬ **ಬೆಲೆ :** ರೂ. ೩೦

**ಮಕ್ಕಳ ಕಥೆಗಳು** (ನೀತಿ ಕತೆಗಳು) ಬಸವರಾಜ ಹೂಗಾರ
**ಪುಟ :** ೧೫೧ **ಬೆಲೆ :** ರೂ. ೪೫

**ತುಂತುರು ಹನಿ ಹನಿ ಮಳೆಗಳು** (ಕವನ ಸಂಕಲನ)
ಊರ್ಮಿಳಾ ರಾವ್
**ಪುಟ :** ೫೨ **ಬೆಲೆ :** ರೂ. ೧೯

**ಶಿವಮೊಗ್ಗ ನಗರದ ಇತಿಹಾಸ ದರ್ಶನ** ಬಿ. ಎಸ್. ರಾಮಭಟ್ಟ
**ಪುಟ :** ೧೧೦ **ಬೆಲೆ :** ರೂ. ೪೦

**ಅಮೃತ ಬಿಂದು** (ಶ್ರೀಧರ ಕಾವ್ಯ ವಾಚಿಕೆ)
ಸಂ.: ಡಾ|| ಎಂ. ಜಿ. ಹೆಗಡೆ
**ಪುಟ :** ೧೦೨ **ಬೆಲೆ :** ರೂ. ೪೦

**ಅನುರಾಗ ಯಾಗ** (ನಾಟಕ) ಕೃಷ್ಣ ಎಂ. ಜಾದವ್
**ಪುಟ :** ೪೮ **ಬೆಲೆ :** ರೂ. ೧೧

**ಅನಘ** (ಕವನ ಸಂಕಲನ) ಕುಮಾರಿ ಗಾಯನ ಎಂ.
**ಪುಟ :** ೪೨ **ಬೆಲೆ :** ರೂ. ೧೫

**ಕನ್ನಡ ಗ್ರಂಥ ಸಂಪಾದನೆ : ಬಂಧ-ವಿನ್ಯಾಸ**
ಡಾ|| ಎಸ್. ಎಸ್. ಅಂಗಡಿ
**ಪುಟ :** ೨೦೩ **ಬೆಲೆ :** ರೂ. ೫೫

**ಹೂಗುಚ್ಛ** (ಮಕ್ಕಳ ಕವನ ಸಂಕಲನ)
ಶ್ರೀಮತಿ ಸುನೀತಾ ರಾವ್
**ಪುಟ :** ೪೦ **ಬೆಲೆ :** ರೂ. ೧೫

**೨೦೫೦ರಲ್ಲಿ ನಾವು-ನೀವು** (ವೈಜ್ಞಾನಿಕ ಭವಿಷ್ಯ ಶಾಸ್ತ್ರ)
ಪ್ರೊ|| ರಾಜಶೇಖರ ಭೂಸನೂರಮಠ
**ಪುಟ :** ೧೧೭ **ಬೆಲೆ :** ರೂ. ೪೦

**ಕುವೆಂಪು ಕಂಡ ಮಂಥರೆ ಮತ್ತು ಇತರ ನಾಟಕಗಳು**
ಹೆಚ್. ಬಿ. ರಮೇಶ್
**ಪುಟ :** ೧೭೧ **ಬೆಲೆ :** ರೂ. ೫೦

**ಸತ್ಯದ ನಿಲವ** (ಲೇಖನಗಳ ಸಂಕಲನ)
ಸಂ.: ಡಾ|| ಜಗನ್ನಾಥ ಹೆಬ್ಬಾಳೆ, ಡಾ|| ಬಂಡಯ್ಯ ಸ್ವಾಮಿ
**ಪುಟ :** ೧೬೪ **ಬೆಲೆ :** ರೂ. ೫೦

**ಅಂತರ್‌ಮತೀಯ ವಿವಾಹಗಳು : ಸಿಹಿ-ಕಹಿ ಅನುಭವಗಳು**
ಡಾ|| ಮುಮ್‌ತಾಜ್ ಅಲಿ ಖಾನ್
**ಪುಟ :** ೧೩೨ **ಬೆಲೆ :** ರೂ. ೪೫

**ಬೊಗಸೆಯೊಳಗಿನ ಸಂಜೆ** (ಕವನ ಸಂಕಲನ)
ಭಾರತಿ, ಗದಗ
**ಪುಟ :** ೯೨ **ಬೆಲೆ :** ರೂ. ೩೦
ಮೇಲಿನ ಹದಿನಾಲ್ಕು ಪುಸ್ತಕಗಳ ಪ್ರಕಾಶಕರು
**ಕನ್ನಡ ಸಾಹಿತ್ಯ ಪರಿಷತ್ತು**, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

## ಬೇತಾಳ ಪ್ರಿಯರಿಗಾಗಿ

# ಯಾವನು ದೇವಾ ಊರ್ಣ ತಿಂದವನು?

## (ದೇವನೂರು ಮಹಾದೇವರ ಕ್ಷಮೆ ಇರಲಿ)



ಥತ್‌ತೇರೀಕೆ ಇದ್ರ ವಂಸ ಎಕ್ಕುಟ್ಟೋಗ ಅಂತಾ ಬಯ್ಕೊಂಡೇಯ ಇಕ್ರಮ ಮಾರಾಜ ಮತ್ತೆ ಮಸಾಣಕ್ ಬಂದೂ ನೇತಾಡ್ತಿದ್ದ ಸವವನ್ನ ಎತ್ತಿ ಬೆನ್ ಮೇಲಾಕ್ಕೊಂಡಿ ಮನಸ್ನಾಗೇ ''ಈ ದಪ ಬುಟ್ಟೇನಾ! ನಿನ್ನಾ ಆ ವಯ್ಯನ್‌ತಾಗೆ ಕರಕೊಂಡ್ ಓಗೇ ಓಯ್ತೀನಿ'' ಅಂದ್ ಕೊಂಡಿ ಧಪಾ ಧಪಾ ವಾಟ ಕಿತ್‌ತಾ ಇರೋವಾಗೇಯ ಆ ಬೇತಾಳ ಮುಸಿ ಮುಸಿ ನಗಕತ್ತಿ ಕೆಮ್ಮಿ ಕ್ಯಾಕರ್ಸೀ ಗಂಟಲಾ ಸರಿ ಮಾಡ್ಕೊಂಡೀ ''ಏನಯ್ಯಾ ಇಂಗ್ ಓಟ ಕಿತ್ಕೊಂಡ್ ಬುಟ್ಟೀ? ನಿಂಗೇನೋ ಇದು ಸ್ಯಾನೇ ಖುಸೀ ಇರಬ್ಬೈದು ನಂಗಾಯಾಸಾಗಕಿಲ್ವ? ವಸಿ ಮೆತ್ತಗ್ ನಡಿ, ನನ್ ಏಳ್ ಬ್ಯಾಡ್ವಾ ಒಂದು ಕತೆಯಾ? ಅದು ಲಾಗಾಯ್ತಿಂದ ಬಂದಿದ್ದಲ್ಲವಾ? ಸುಮ್ಕೆ ಇದ್ರೆ ನನ್ನ್ಯಾರಾದ್ರೂ ಬೇತಾಳಾಂತ ಕರೀತಾರಾ? ನನ್ ರೆಪ್ಯುಟೇಸನ್ ಎಕ್ಕುಟ್ಟೋಗಕಿಲ್ವಾ? ಇಸ್ಟ್ ಬಿರೀನ್ ಎಜ್ಜೆ ಆಕಿದ್ರೆ ನಾ ಎಂಗ್ಲಾ ಕತೆ ಏಳಾದೂ?'' ಅಂತ ದಬಾಯಿಸಲಾಗಿ ಆಟೊತ್ಗೇ ಏದುಬ್ಬಸ ಬಂದಂತಾಗಿ ಮಾರಾಜ್ನೂನೂವೆ ಈ ದರಿದ್ರ ಬೇತಾಳ ಒಟ್ಗೆ ಏನ್ ತಿಂತೈತೋ ಏನೋ ಈ ಪಾಟಿ ಆನಗಾತ್ರ ಊದ್ಕೊಂಡ್ ಬುಟ್ಟೈತಲ್ಲಾಂತವ ಬೊಯ್ಕೊಂಡೇಯ ವಸಿ ವಾಟ ಕಮ್ಮಿ ಮಾಡಿ ಸುಮ್ಕೆ ನಡೆಯಾಕ್ ಸುರು ಮಾಡಿದ್ ಮ್ಯಾಗೆ ಬೇತಾಳ ''ಇದು ಸರಿಯಪ್ಪ, ನಂಗೂ ವಸಿ ಟೇಮ್ ಸಿಕ್ಕಂಗಾಯ್ತು'' ಅಂತ ಕುಸಿ ಪಟ್ಟು, ''ಅಲ್ಲಯ್ಯಾ ರಾಜ ನೀಯೇನ್ ಮನ್ಸಾನೇನಯ್ಯ? ನಾನೂ ಲಾಗಾಯ್ತಿಂದ ನೋಡ್ತಾನೇ ಇವ್ನಿ, ಒಂದೇ ಕೆಲ್ಸಾವಾ ಬ್ಯಾಜಾರಿಲ್ದೇ ಮಾಡ್ತಾಯಿದೀಯಪ್ಪ, ಈಗಿನ್ ಕಾಲ್ದೋರ್ನ ನೋಡಾದ್ರೂ ವಸಿ ಕಲೀಬಾರ್ದ? ನೋಡು ಹುಟ್ಟಿದ್ ಹೈಕಳೆಲ್ಲಾ ಎಂಗೆ ಕೈಲಿ ಅದೆಂಥೇದೋ ಮೊಬೈಲೋ ಏನೋ ಅಂತಾರಪ್ಪ ಅದ್ನ ಮಡಿಕೊಂಡಿ ಒಬ್ಬೊಬ್ರೇ ಒಳ್ಳೆ ಉಚ್ಚರಂಗೆ ದಾರೀಗುಂಟಾ ಮಾತಾಡ್‌ಕೊಂಡಿ, ಎದ್ರುಗ್ ಬಂದವರ್ನ ಕ್ಯಾರೇ ಅಂದೇ ತಮ್ಮದೇ ಲೋಕದಲ್ಲಿರೂವಾಗ ನೀಯಾವ ಸೀಮೆ ರಾಜನಪ್ಪ, ತಲತಲಾಂತರದಿಂದ ನನ್ನ ಹೊತ್ಗೊಂಡಿ ಇದ್‌ಬದ್ ಕೆಲ್ಸಾನೆಲ್ಲ ಬುಟ್‌ಬುಟ್ಟಿ ಇದೇನ್ ಸೆಂದಾಕಿಲ್ಲ ಬುಡು'' ಅಂತಾನೇ ಕೈ ಝಾಡಿಸಿ ಓಗ್ಲಿ ಬುಡು ನಂ ಪ್ಯಾಕೇಜ್ ಟೂರ್ನ ಈ ದಪಾನೂ ಇಂಗೇ ಮುಂದ್ ವರೆಸೂವಾ, ನಾನೊಂದ್ ಕತೆ ಏಳೀನಿ, ಒಂದು ಪ್ರಸ್ನೆ ಕೇಳ್ತೀವ್ನಿ, ನೀ ಒಳ್ಳೆ ಪೆದ್ದಯ್ಯನ ತರ ಬಾಯ್ಬುಡ್ತೀಯಾ. ನಾ ವಾಪಸ್ ನನ್ ಮಸಾಣಕ್ಕೋಗಿ ನಂದೇ ಮರವ ಆಯ್ಕೊಂಡಿ ನೇತಾಕ್ಕೋತೀನಿ, ಇದೇ ನಿಂಗೂ ಕುಸಿ ನಂಗೂ ಕುಸಿ ಅಲ್ಲವಾ? ಇಗೇನಾಗಿದೆ ಈ ಬೂಲೋಕ್ದಾಗೆ? ವಸಿ ಕಣ್‌ಬುಟ್ ನೋಡೀಯಾ? ಅದ್ಯಾರೋ ಅನ್ನೆರಡನೇ ಸತಮಾನದೋನಂತೆ ಆಸಿಯಣ್ಣಾಂತ ಅವ್ನಿಗೆ ಸದಾ ಗ್ಯಾನದ ಆಸಿವಂತ ಓದೀ ಓದೀ ಗುಡ್ಡೆ ಆಕ್ಬುಟ್ಟಿ ಅದೇನೋ ಬರ್ದೂ ಬರ್ದೂ ಮಡಗವನಂತ. ಅವನ್ ಬರೆದದ್ದೆಲ್ಲಾ ಓದೀ ಓದೀ ಈ ಕಾಲ್ದಾವ್ರೂ ಇದ್ವಾಂಸ ಅನ್ನಿಸ್ಕೊಳ್ಳಾಕೆ ಅವನ್ ಮ್ಯಾಗೇಯ ಬುಕ್ ಬರೀತವ್ನಂತೆ ಅದ್ಯಾವೋನೋ ಒಬ್ಬ. ಆ ಆಸಿವಣ್ಣಂಗೆ ಬರೀ ಗ್ಯಾನದ ಆಸಿವಲ್ಲ ಇದ್ದದ್ದೂ ಅವುನ್ಗೆ ಒಟ್ಟೇಗೆ ಇಟ್ಟೂ ಇರ್ನಿಲ್ಲಾ ಅದ್ಕೇ ಆಸಿವೂ ಆಸಿವೂ ಅಮ್ತ ಬರೆದವ್ನೆ ಅಂತಾ 'ಯಾವನು ದೇವಾ ಊರ್ಣ ತಿಂದವನು' ಅಂತ ಒಂದು ಪುಸ್ತುಕಾವ ಬರೆದ್ ಬುಟ್ಟೇ ಸ್ಯಾನೆ ಜನಕ್ ಅಂಚ್‌ಬುಟ್ಟಿ ಆ ಆಸಿವಣ್ಣನ್ ಬಕ್ತರ್ಗಳ್ಗೆ ಅಂಗಾಲಿಂದ ನೆತ್ತೀಗಂಟಾ ಉರಿಕಿತ್ಗಂಡಿ ಈ ವಯ್ಯನ್ ಸುಮ್ಕೆ ಬುಡ್‌ಬಾರದು ಅಂತಾವಾ ಸ್ಯಾನೆ ಗಲಾಟ ಮಾಡೀ ರೋಸಾನೇ ಎಲ್ಲಾರ್ ಉಸಿರಾಗೀ ಉಸುರು ಊರೆಲ್ಲಾ ತುಂಬ್ಕೊಂಡೀ ಈ ಪುಸ್ತೂಕಾನೆಲ್ಲಾ ಬೆಂಕೀಗ್ ಆಕ್‌ಬುಟ್ಟೀ ಸರ್ಕಾರದ್ ಮ್ಯಾಗೆ ಸ್ಯಾನೆ ಆಕ್ರೋಸಾ ತೋರಿಸ್ತಾ ಸ್ವಾಮ್ ಗೋಳೂ ಅಯ್ಯಗೋಳೂ ಮಾರಾಜನ ಅರಮನೇ ತಾವ ಸ್ಯಾನೇ ಗಲಾಟ ಮಾಡ್ತಾ ಇರೋವಾಗ್ಲೇ ನಾನೊಂದ್ ತಮಾಸೆ ಕಂಡನಪ್ಪ, ನಮ್ ಆರಿಸ್ಚಂದ್ರ ಗಾಟ್ ಅತ್ತಿರ ಸುತ್ತಾ ಮುತ್ತಾ ಮನೆಗೋಳಾಗಿ ನಾ ನೇತಾಡ್ತಿರೂವಾಗ್ಲೇಯ ಯಾರ್ದಾರಾ ಮನೆ ಟಿ.ವಿ. ಒಳಗಡ್ಲೇಯ ಈ ಉಡ್ಗೀರು ಅರೆಬರೆ ಬಟ್ಟೆ ಆಕ್ಕೊಂಡೀ ಥಕಾ ಥೈ ಅಂತಾ ಕುಣೀತಾರಲ್ಲ, ಅದ್ನ ನೋಡ್ತಾ ಕುಸೀ ಪಡೂವಾಗ್ಲೇಯ ಅದೆಂತದೋ 'ಚೆಲ್ಲಾಟ' ಅನ್ನೋ ಸಿನೀಮ್‌ದಾಗೆ 'ಇಂದು ಎನಗೆ ಗೋವಿಂದ' ಅಂಬ್ತ ಆಡೇಳ್ಕೊಂಡಿ ಕುಣಿಯಾಕ್ ಸುರೂ ಅಚ್ಕೊಂಡ್ರಪ್ಪ. ನನ್ನ ಪಕ್ಕದ್ ಮರನಾಗಿರೂ ದೆಯ್ಯಾ ಗೋಳೋ ಅಂತ ಅಳಾದೇನೂ ಬಿಕ್ಕೀಬಿಕ್ಕೀ ಬೀಳೋದೇನು? ಪಾಪ ಆ ತಾಪ ನೋಡಕಾಗಕಿಲ್ಲ, ಯಾಕಯ್ಯಾ ಈ ಪಾಟಿ ಅಳ್ತೀ ಅಂದ್ರೆ 'ಅಯ್ಯೋ ನಾನ್ನೂರು ವರ್ಷದ ಹಿಂದೆ ಇದ್ದ ನಮ್ ಸ್ವಾಮಿಗಳು ಬರೆದಿದ್ದ ಹಾಡು ಇದು. ಈ ಕೆಟ್ಟ್ ಜನ ಸಿನಿಮಾಗೆ ಇದನ್ನೂ ತಗೋಳೋದು ಬಿಟ್ಟಿಲ್ಲವಲ್ಲ? ಬೇರೆ ಜಾತಿಯವರ ಸಾಹಿತ್ಯಾನ ಒಂದು ಅಕ್ಷರ ಕೆಡಿಸಿದ್ರೂ ಸ್ವಾಮಿಗಳಿಂದ ಹಿಡಿದು ಸಾಮಾನ್ಯನವರೆಗೆ ತರಾಟೆಗೆ ತಗೋತಾರೆ, ನಮ್ ಜನ ಎಂಥಾ ಹೃದಯಹೀನರು, ಸ್ವಾಭಿಮಾನವೇ ಇಲ್ಲದವರು. ಜೀವ ಇರೋವಾಗ್ಲೇ ತಮ್ಮ ತಲೇ ಮೇಲೆ ನೂರಾ ಎಂಟು ತೆಂಗಿನಕಾಯಿ ಒಡೆಸಿಕೊಂಡು ಜೀವ ಬಿಟ್ಟು, ಬೃಂದಾವನ ಸೇರಿದ ಮಹಾತ್ಮ ಆತ ಅವರು ಬರೆದ ಹಾಡನ್ನ ಹೇಳಿಕೊಂಡು ಈ ತುಂಡುಲಂಗದ ಹುಡುಗಿಯರೂ ಜುಟ್ಟು ಬಿಟ್ಕೊಂಡು ಲೋಲಾಕ್ ಹಾಕ್ಕೊಂಡು ಇರೋ ಈ ಹುಡಗರೂ ಯದ್ವಾತದ್ವಾ ಕುಣೀತಿದಾರಲ್ಲಾ? ಏನ್ ಕಾಲ ಬಂತಪ್ಪಾ 'ಶ್ರೀರಾಘವೇಂದ್ರಾ' ಅಮ್ತಾ ಗೋಳೋ ಅಂತು ಈಗೇಳಪ್ಪ? ಎಂಟು ನೂರು ವರ್ಸಗಳ ಕೆಳಗೆ ಇದ್ದ ಆಸಿವಣ್ಣನ ಪದಗಳ್ನ ಒಬ್ಬರೂ ಮುಟ್ಟಕ್ಯಾಗದು. ನಾನೂರು ವರ್ಸದ ಕೆಳಗೆ ಇದ್ದ ರಾಘವೇಂದ್ರ ಸ್ವಾಮಿಗಳ ಪದಕ್ಕೆ ಕುಣೀಬ್ಬೈದು ಅಂದ್ರ ಎಂಗಾಗ್ತೈತೆ? ಈ ಪಸ್ನೇಗೆ

ಮುಂದಿನ ಪುಟಕ್ಕೆ

# ಬಸವಣ್ಣ ಲಿಂಗಪೂಜಕನೆ ? ಅನ್ಯರಿಗೆ ಲಿಂಗ ಧರಿಸಲು ಉಪದೇಶಿಸುತ್ತಿದ್ದನೆ ?

■ ಕೆ. ಡಿ. ಮುತ್ತೂರ

('ಹೊಸತು' ೨೦೦೭ರ ಅಕ್ಟೋಬರ್ ಸಂಚಿಕೆಯಲ್ಲಿ ಪ್ರೊ॥ ಸಿ. ಹೆಚ್. ಮರಿದೇವರು ಬರೆದ 'ಬಸವಣ್ಣ ಮಾಡಿದ ಬಹು ದೊಡ್ಡ ತಪ್ಪು' ಎಂಬ ಲೇಖನ ಪ್ರಕಟವಾಗಿದೆ. ಆ ಲೇಖನಕ್ಕೆ ಇದೊಂದು ಪ್ರತಿಕ್ರಿಯೆ.)

ಮನುಷ್ಯ ಯಾವುದೇ ಕೆಲಸ ಮಾಡುವ ಮೊದಲು ಕೆಲವು ಪೂರ್ವ ತಯಾರಿ ಮಾಡಿಕೊಳ್ಳಬೇಕಾಗುತ್ತದೆ. ತದನಂತರ ತನ್ನ ಮುಂದಿನ ಕಾರ್ಯಕ್ರಮಗಳನ್ನು ಆರಂಭಿಸಬೇಕಾಗುತ್ತದೆ. ಬಸವಣ್ಣನವರ ಬಗ್ಗೆಯಾಗಲಿ ಯಾವುದೇ ಶರಣರ ಬಗ್ಗೆಯಾಗಲಿ ಮಾತನಾಡಬೇಕಾದರೆ ಒಂದಿಷ್ಟು ಪೂರ್ವ ತಯಾರಿ ಮಾಡಬೇಕಾದುದು ಅನಿವಾರ್ಯ. ಹಾಗೆ ಮಾಡದಿದ್ದಲ್ಲಿ, ಅದು ಅವಸರದ ಕೆಲಸವಾಗಿ, ಅವಘಡಕ್ಕೆ ಕಾರಣವಾಗಬಹುದು ಮತ್ತು ಮೂಲತತ್ವಕ್ಕೆ ಅಪಚಾರವೂ ಆಗಬಹುದು.

ಬಸವಣ್ಣ ಯಾವುದೇ ಜಾತಿ, ಧರ್ಮವನ್ನು ಅವಲಂಬಿಸಿದವನಲ್ಲ, ಯಾವುದೇ ಧರ್ಮವನ್ನು ಸ್ಥಾಪಿಸಬೇಕೆಂಬ ಹಂಬಲದವನೂ ಅಲ್ಲ, ಯಾವ ಧರ್ಮ ಸ್ಥಾಪಕನೂ ಅಲ್ಲ, ದೊಡ್ಡ ತತ್ವಜ್ಞಾನಿಯಾಗಿ ಮೆರೆಯಬೇಕೆಂಬ ಇಚ್ಛೆಯೂ ಅವನಿಗಿರಲಿಲ್ಲ, ಯಾವುದೇ ಅಧಿಕಾರ ಅಂತಸ್ತಿಗೆ ಜೋತು ಬಿದ್ದವನಲ್ಲ. ಅಂದಿನ ಸಮಾಜದಲ್ಲಿದ್ದ ಸಾಮಾಜಿಕ ಅಸಮಾನತೆ, ಆರ್ಥಿಕ ಅಸಮಾನತೆ, ಧಾರ್ಮಿಕವಾಗಿ ಮೇಲು, ಕೀಳು ಎಂಬ ಭಾವನೆಗಳು, ಸ್ತ್ರೀಯರ ಮೇಲಿನ ದೌರ್ಜನ್ಯಗಳು ಮತ್ತು ಕೀಳರಿಮೆ ಇವೆಲ್ಲವುಗಳನ್ನು ಹೋಗಲಾಡಿಸಿ, ಆಚರಣೆಯಲ್ಲಿದ್ದ ಶ್ರೇಣೀಕೃತ ಸಮಾಜವನ್ನು ತೊಡೆದುಹಾಕಿ ಸರ್ವ ಸಮಾನತೆಯ ಸಮಾಜದ ಅಡಿಪಾಯವನ್ನು ಹಾಕಲು ಸಂಘಟನೆ ಮತ್ತು ಸಾಹಿತ್ಯದ ಕಡೆಗೆ ಒಲಿದು, ಕಾರ್ಯಪ್ರವೃತ್ತನಾದ ಒಬ್ಬ ಧೀರೋದಾತ್ತ ಯುವಕ ಬಸವಣ್ಣ. ಇದು ಗೊತ್ತಿರಬೇಕು.

ವಚನ ಸಾಹಿತ್ಯವನ್ನು ಓದುವ ಮೊದಲು ಜಾತ್ಯತೀತವಾಗಿ, ಧರ್ಮ ನಿರಪೇಕ್ಷಿತನಾಗಿ, ಪೂರ್ವಗ್ರಹದ ದೋಷಗಳನ್ನೆಲ್ಲ ನಿವಾರಿಸಿಕೊಂಡು, ವಿಶ್ವ ಬಂಧುವಾಗಿ, ವಿಶ್ವ ಪ್ರೇಮಿಯಾಗಿ, ಸಮಾನತೆಯ ಹರಿಕಾರನಾಗಿ ಎಲ್ಲ ಗುರು ಪರಂಪರೆಗಳನ್ನು ಧಿಕ್ಕರಿಸಿ ಓದಲು ಅಣಿಯಾಗಬೇಕು. ಅಂದರೆ ವಚನಸಾಹಿತ್ಯದ ಮಹತ್ವ, ಅಗಾಧತೆ ಮತ್ತು ಅವಶ್ಯಕತೆಯ ಅರಿವು ಮೂಡುತ್ತದೆ. ವಚನಸಾಹಿತ್ಯ ಅಂದು, ಇಂದು, ಮುಂದು ಎಂದೆಂದಿಗೂ ವಿಶ್ವದ ಯಾವತ್ತೂ ಜನರಿಗೆ ಅನ್ವಯಿಸುವ ಸಾಹಿತ್ಯವೆಂಬುದರ ಅರಿವಾಗುತ್ತದೆ. ಅಲ್ಲದೆ ವೈಯಕ್ತಿಕ ಬಾಳಿಗೆ ಬೆಳಕಾಗುತ್ತದೆ. ಸಾಮಾಜಿಕ ಬೆಳವಣಿಗೆಗೆ ಹೇಗೆ ಕೆಲಸ ಮಾಡಬೇಕೆಂಬ ಜ್ಞಾನ ಪ್ರಾಪ್ತವಾಗುತ್ತದೆ.

ಬಸವಣ್ಣನವರ ವ್ಯಕ್ತಿತ್ವವನ್ನು ಅರಿಯಬೇಕಾದರೆ ಅವರ ವಚನಗಳನ್ನು ಓದಿಯೇ ತಿಳಿಯಬೇಕು. ಸಂಪ್ರದಾಯವಾದಿಗಳ, ಪುರೋಹಿತರ ಮಾತುಗಳನ್ನು ಕೇಳಿ ಬಸವಣ್ಣನವರನ್ನು ಅರ್ಥೈಸಲು ಹೋಗಬಾರದು. ಈಗ ಪ್ರೊ॥ ಸಿ. ಹೆಚ್. ಮರಿದೇವರ ಅಭಿಪ್ರಾಯದಂತೆ ''ಬಸವಣ್ಣನವರು ಅನ್ಯರಿಗೆ ಲಿಂಗವನ್ನು ಧರಿಸಲು ಉಪದೇಶಿಸುತ್ತಿದ್ದರೆ'' ಎಂಬ ಮಾತಿನ ಸತ್ಯಾಸತ್ಯತೆಯನ್ನು ತಿಳಿಯಲು ಅವರ ವಚನವನ್ನೇ ಓದಿ ಅದರ ಅರ್ಥವನ್ನು ಸರಿಯಾಗಿ ಗ್ರಹಿಸಿ ಒಂದು ನಿರ್ಣಯಕ್ಕೆ ಬರಬೇಕು. ಹಾಗಾದರೆ ಈ ಕೆಳಗಿನ ವಚನ ನೋಡಿ :

*ಲಿಂಗವೆಂತಿಪ್ಪುದೆಂದರಿಯೆನು*
*ಲಿಂಗದ ನಿಲುವೆಂತುಂಟೆಂಬುದ ಹೊಲಬನರಿಯೆನು*
*ಲಿಂಗಾರ್ಚನೆಯ ಮಾತು ಎನಗೇಕಯ್ಯಾ ?*
*ಜಂಗಮ ಲಿಂಗವಾಗಿ ಬಂದು ನೀವಿರುತ್ತಿರಲು*
*ಸ್ಥಾವರಕ್ಕೆ ಮೆಚ್ಚಿ ಮರುಳಾದೆನು ಕೂಡಲಸಂಗಮದೇವಾ*
*ಎನ್ನ ತಪ್ಪನೆ ಎಣಿಸಿಹೆನೆಂದಡೆ ಕಡೆಯಿಲ್ಲ*

– ಲಿಂಗ ಎಂಥದ್ದಿದೆ ಎಂಬುದೇ ನನಗೆ ಗೊತ್ತಿಲ್ಲ, ಅದು ಯಾವುದಕ್ಕೆ ಬೇಕು, ಏಕೆ ಬೇಕು ಎನ್ನುವುದೇ ನನಗೆ ತಿಳಿದಿಲ್ಲ ಅಂದ ಮೇಲೆ ಲಿಂಗ ಪೂಜೆಯ ಮಾತು ನನಗೇಕೆ ಬೇಕು ಹೇಳು ಎಂದು ಕೇಳುತ್ತಾನೆ. ಇಲ್ಲಿ ಬಸವಣ್ಣ ಇಷ್ಟಲಿಂಗ ಪೂಜಕನಾಗಿರಲಿಲ್ಲ, ಮತ್ತು ಅಂತಹ ಇಷ್ಟಲಿಂಗವನ್ನು ಧರಿಸಲು ಇತರರಿಗೆ ಬೋಧಿಸಲೂ ಇಲ್ಲ ಎಂಬುದು ಸ್ಪಷ್ಟವಾಗುತ್ತದೆ. ಲಿಂಗಪೂಜೆಯನ್ನು ಮೆಚ್ಚಿದವರು ಹುಚ್ಚರೆಂದು ಇನ್ನೂ ನನ್ನ ತಪ್ಪುಗಳು ಎಣಿಸಲಿಕ್ಕೆ ಬಾರದಷ್ಟಿವೆ ಎಂದು ಹೇಳುತ್ತಾನೆ ಬಸವಣ್ಣ.

ಮತ್ತೊಂದು ವಚನ :

*ಲಿಂಗವಿದೆ ಸೀಮೆಯ ಕಲ್ಲಿನಲ್ಲಿ ?*
*ಲಿಂಗವಿದೆ ಪಶುವಿನ ತೊಡೆಯಲ್ಲಿ ?*
*ಕಲ್ಲು ತಕ್ಕೊಂಡು ಮಳೆಯ ಮೇಲೆ ಇಟ್ಟಡೆ*
*ಆ ಕಲ್ಲು ಮಳೆಯಲ್ಲಿ ಸಿಕ್ಕಿದಡೆ*
*ಆ ಮಳೆ ಭಕ್ತನಾಗಬಲ್ಲುದೆ ?*
*ಇದು ಕಾರಣ ಸತ್ಯ, ಸಹಜ ಸದ್ಭಾವ ಸದ್ ವರ್ತನೆ*
*ಉಳ್ಳಡೆ ಸದ್ಭಕ್ತ, ಇಲ್ಲದಿದ್ದಡೆ*
*ಆ ಮಳೆಯೊಳಗೆ ಸಿಕ್ಕಿದ ಕಲ್ಲಿನಂತೆ ಕಾಣ ಕೂಡಲಸಂಗಮದೇವಾ ॥*

– ಹೊಲದ ಸೀಮೆಯ ಗುರುತಿನ ಕಲ್ಲನ್ನು ಕಟೆದರೆ ಅದು ಲಿಂಗವಾಗುತ್ತದೆ. ಲಿಂಗಮುದ್ರೆಯನ್ನೊತ್ತಿದ ಪಶುವಿನ ತೊಡೆಯಮೇಲೆಯೂ ಗೋಚರಿಸುತ್ತದೆ. ಒಂದು ಕಲ್ಲನ್ನು ತೆಗೆದುಕೊಂಡು ಒಂದು ಮಳೆಗೆ ಸಿಕ್ಕಿಸಿದರೆ ಆ ಮಳೆ ಭಕ್ತನಾಗಬಲ್ಲುದೆ ? ಮನುಷ್ಯ ತನ್ನ ಕೊರಳಿಗೆ ಲಿಂಗವನ್ನು ಕಟ್ಟಿಕೊಂಡರೆ ಅವನು ಭಕ್ತನಾಗಬಲ್ಲನೆ ? ಇವು ಯಾವವೂ ಲಿಂಗವಲ್ಲ. ಇವು ಮನುಷ್ಯನಿಗೆ ಸಂಬಂಧಿಸಿದ ಆಚಾರವೂ ಅಲ್ಲ, ವಿಚಾರವೂ ಅಲ್ಲ, ಲಿಂಗವೆಂದರೆ ಸತ್ಯ. ಸಹಜ, ಸದ್ಭಾವ, ಸದ್ವರ್ತನೆ, ಇದ್ದುದಾದರೆ ಈ ಗುಣಗಳೇ ಲಿಂಗ. ಚನ್ನಬಸವಣ್ಣನ ಪ್ರಕಾರ ಅಂಗವೆಂದರೆ ಆತ್ಮ, ಲಿಂಗವೆಂದರೆ ಸತ್, ಸತ್ ಎಂದರೆ ಒಳ್ಳೆಯದು, ಇದು ವಿಶೇಷಣವಾಗಿದೆ.



ಈ ಗುಣಗಳನ್ನು ಅಳವಡಿಸಿಕೊಂಡವನೇ ಲಿಂಗಧಾರಿ. ಈ ಗುಣಗಳು ಇಲ್ಲದಿದ್ದಲ್ಲಿ ಅವನು ಭಕ್ತನೆನಿಸುವುದಿಲ್ಲ ಕೇವಲ ಕೊರಳಿಗೆ ಲಿಂಗವನ್ನು ಕಟ್ಟಿಕೊಂಡರೆ ಕಲ್ಲನ್ನು ಸಿಕ್ಕಿಸಿಕೊಂಡ ಮೆಳೆಯಂತಾಗುತ್ತಾನೆ. ಇಲ್ಲಿ ಬಸವಣ್ಣ ಲಿಂಗ ಶಬ್ದವನ್ನು ನಾಮದಂತೆ ಉಪಯೋಗಿಸುವುದಿಲ್ಲ. ಅದನ್ನು ವಿಶೇಷಣದಂತೆ ಉಪಯೋಗಿಸುತ್ತಾನೆ.

ಇನ್ನೊಂದು ವಚನ :

*ಲಿಂಗವೆ ಅಂಗ, ಅಂಗವೆ ಲಿಂಗವೆಂದರಿದ ಬಳಿಕ*
*ಅಲ್ಲಿಯೆ ಅದೆ*
*ಲಿಂಗವೆ ಪ್ರಾಣ, ಪ್ರಾಣವೆ ಲಿಂಗವೆಂದರಿದ ಬಳಿಕ*
*ಅಲ್ಲಿಯೆ ಅದೆ*
*ಉಂಟೆಂದು ತೋರಲಿಲ್ಲ, ಇಲ್ಲವೆಂದು ಅರಸಲಿಲ್ಲ*
*ಕೂಡಲಸಂಗಮದೇವಾ ಲಿಂಗನಿರಂತರವಲ್ಲಿಯೆ*

– ನನ್ನ ಮನದಲ್ಲಿ ಲಿಂಗದ ಹುಡುಕಾಟವೇ ಇಲ್ಲ, ಶರೀರ ಬೇರೆ, ಲಿಂಗ ಬೇರೆ ಅಲ್ಲವೇ ಅಲ್ಲ. ಅವು ಎರಡೂ ಒಂದೇ. ಅದರಂತೆ ಪ್ರಾಣ ಬೇರೆ, ಲಿಂಗ ಬೇರೆ ಅಲ್ಲವೇ ಅಲ್ಲ. ಅವು ಲಿಂಗಕ್ಕಿರುವ ಅಂಗ, ಪ್ರಾಣ ಎಂಬ ಎರಡು ಹೆಸರುಗಳು ಮಾತ್ರ ಅಷ್ಟೇ. ಲಿಂಗವಿದೆ ಎಂದು ಏನನ್ನು ತೋರಿಸಲಿ, ಲಿಂಗವಿಲ್ಲವೆಂದು ಎಲ್ಲಿ ಏನನ್ನು ಹುಡುಕಲಿ, ಸದಾಕಾಲ ಲಿಂಗವಾಗಿಯೇ ಇರುವುದೆಂದರೆ ಒಳ್ಳೆಯವನಾಗಿರುವುದೇ ಆಗಿದೆ.

ಇನ್ನೊಂದು ವಚನ :

*ನನಗೆ ನಾನೇ ಗುರುವಾದೆನಯ್ಯಾ*
*ನನಗೆ ನಾನೇ ಲಿಂಗವಾದೆನಯ್ಯಾ*
*ನನಗೆ ನಾನೇ ಜಂಗಮವಾದೆನಯ್ಯಾ*
*ನನಗೆ ನಾನೇ ಪ್ರಸಾದವಾದೆನಯ್ಯಾ*
*ನನಗೆ ನಾನೇ ಭಕ್ತನಾದೆನಯ್ಯಾ*
*ರೇಕಣ್ಣ ಪ್ರಿಯ ನಾಗಿನಾಥನಲ್ಲಿ*
*ಆಗುಹೋಗನರಿಯೆನಯ್ಯಾ ನಾನು*

– ನನ್ನ ಅರಿವು ನನಗೆ ಗುರುವಾಯಿತು. ನನ್ನ ಸದ್ವರ್ತನೆ ನನಗೆ ಲಿಂಗವಾಯಿತು. ನನ್ನ ಲೋಕಜ್ಞಾನ ನನಗೆ ಜಂಗಮವಾಯಿತು. ನನ್ನ ಕಾಯಕದಿಂದ ಬರುವ ಜ್ಞಾನ ನನಗೆ ಪ್ರಸಾದವಾಯಿತು. ಹೀಗೆ ಗುರು ಲಿಂಗ ಜಂಗಮ ಪ್ರಸಾದಕ್ಕೆ ಭಕ್ತನಾಗಿ ರೇಕಣ್ಣ ಪ್ರಿಯ ನಾಗಿನಾಥನಲ್ಲಿ ಬರುವುದಾಗಲಿ ಹೋಗುವುದಾಗಲಿ ಯಾವುದೂ ಇಲ್ಲ, ಎಲ್ಲವೂ ನಾನೇ ನಾನು ಎನ್ನುತ್ತಾನೆ ಬಹುರೂಪಿ




ಚೌಡಯ್ಯಾ. ಇಲ್ಲಿ ಕಲ್ಲಿನ ಲಿಂಗವನ್ನು ಕಟ್ಟಿಕೊಳ್ಳುವುದು ಮತ್ತು ಪೂಜಿಸುವುದು ಎರಡೂ ಅಜ್ಞಾನದ ಅತಿರೇಕವೇ ಹೌದು.

ಮತ್ತೊಂದು ವಚನ :

*ವರ್ಣವಿಲ್ಲದ ಲಿಂಗಕ್ಕೆ ರೂಪ ಪ್ರತಿಷ್ಠೆಯ*
*ಮಾಡುವರು*
*ಪ್ರಳಯವಿಲ್ಲದ ಲಿಂಗಕ್ಕೆ ಪ್ರಾಣ ಪ್ರತಿಷ್ಠೆಯ*
*ಮಾಡುವರು*
*ನುಡಿಯಲಾರದ ಲಿಂಗಕ್ಕೆ ಜಪ ಸ್ತೋತ್ರ ಪೂಜೆಯ*
*ಮಾಡುವರು*
*ಮುಟ್ಟಬಾರದ ಲಿಂಗಕ್ಕೆ ಕೊಟ್ಟು*
*ಕೊಂಡಾಡಿಹೆವೆಂಬರು*
*ಬೊಟ್ಟಿಹಲೆಡೆಯಿಲ್ಲದ ಲಿಂಗವ ಮುಟ್ಟಿ*
*ಪೂಜಿಸಿಹನೆಂಬ ಭ್ರಷ್ಟರ ನೋಡಾ ಗುಹೇಶ್ವರಾ*

– ಬಣ್ಣವಿಲ್ಲದ ಬಯಲನ್ನು ಲಿಂಗವೆಂದು ಕಲ್ಪಿಸಿ ರೂಪ ಆಕಾರ ಕೊಟ್ಟು ಗುಡಿಯಲಿಡುವರು, ಎಂದೆಂದೂ ನಾಶವಾಗದ ಲಿಂಗಕ್ಕೆ ಪ್ರಾಣಪ್ರತಿಷ್ಠೆಯ ಮಾಡುವರು. ಮಾತನಾಡಲಾರದ ಲಿಂಗದ ಜಪ ಸ್ತೋತ್ರ ಮಾಡುವರು. ಮುಟ್ಟಲಿಕ್ಕೆ ಆಗದಂಥ ಲಿಂಗವನ್ನು ಮುಟ್ಟಿ ಪೂಜಿಸಿಹೆವೆಂಬ ಭ್ರಷ್ಟರನ್ನು ಕಂಡು ಪ್ರಭುದೇವರು ಕನಿಕರ ಪಡುತ್ತಾರೆ. ಇದರಿಂದ ಲಿಂಗ ವಸ್ತು ಅಲ್ಲ, ಅದೊಂದು ಗುಣವೆನ್ನು ವುದು ಸ್ಪಷ್ಟವಾಗುತ್ತದೆ. ಹೀಗೆ ಇನ್ನೂ ಅನೇಕ ವಚನಗಳನ್ನು ಕೊಟ್ಟು ಉದಾಹರಿಸಬಹುದು.

ಮಹಾತ್ಮಾ ಬಸವಣ್ಣನವರನ್ನು ಕೋಟಿ ಕೋಟಿ ಜನ ಟೀಕಿಸಬಹುದು. ಆದರೆ ವಾಸ್ತವಿಕತೆಯನ್ನು, ಸಹಜತೆಯನ್ನು ಸದ್‌ವರ್ತನೆಯನ್ನು ಅಳಿಸಿಹಾಕಲು ಯಾರಿಂದಲೂ ಆಗುವುದಿಲ್ಲ. ಗೂಗೆ ಸೂರ್ಯನನ್ನು ಹಳಿಯಬಹುದು. ಆದರೆ ಪ್ರಕಾಶವನ್ನು ಅಲ್ಲಗಳೆಯಲಾಗುವುದಿಲ್ಲ. ಕಣ್ಣು ಮುಚ್ಚಿ ಕೊಂಡು ಕನ್ನಡಿಯ ಮುಂದೆ ನಿಂತರೆ ಮುಖ ಕಾಣುವುದೇನು ? ಹಾಗೆಯೇ ಪೂರ್ವ ಗ್ರಹಪೀಡಿತರಾಗಿ ವಚನಸಾಹಿತ್ಯವನ್ನು ಓದುವುದರಿಂದ ಯಾವ ಪ್ರಯೋಜನವೂ ಆಗದು. ಪ್ರಜ್ಞಾಪೂರ್ವಕವಾಗಿ ಎಚ್ಚರಿಕೆಯಿಂದ ನಿಷ್ಪಕ್ಷಪಾತವಾಗಿ ಅಧ್ಯಯನ ಆರಂಭಿಸಬೇಕು, ಕನ್ನಡಿಗರು ಪ್ರಜ್ಞಾವಂತರಾಗಿದ್ದಾರೆ.

ಈ ಅವಧಿಯಲ್ಲಿ ವಚನಸಾಹಿತ್ಯ ವಿಶ್ವಸಂಸ್ಥೆಯಲ್ಲಿ ವಿಶ್ವದ ಸಂವಿಧಾನವಾಗಿ ರೂಪಗೊಳ್ಳುತ್ತಿತ್ತು. ಬಸವಣ್ಣ ವಿಶ್ವಬಂಧುವಾಗಿ, ವಿಶ್ವಪ್ರೇಮಿಯಾಗಿ ವಿಶ್ವದ ಪ್ರತಿಯೊಬ್ಬರ ಮನೆಮನೆಯ ಮತ್ತು ಮನಮನದ ಮಾತಾಗಿ ಉಳಿಯುತ್ತಿದ್ದ. ಭಾರತಕ್ಕೆ ಸಂವಿಧಾನವನ್ನು ಬರೆದುಕೊಟ್ಟ ಕೀರ್ತಿ ಡಾ|| ಅಂಬೇಡ್ಕರ್ ಅವರಿಗೆ ಸಲ್ಲಿದಂತೆ ವಿಶ್ವಕ್ಕೆ ಸಂವಿಧಾನವನ್ನು ಬರೆದುಕೊಟ್ಟ ಮಹಾ ಮಾನವನೆಂಬ ಕೀರ್ತಿ ಅಣ್ಣ ಬಸವಣ್ಣನದಾಗಿರುತ್ತಿತ್ತು.

ಆದರೆ ಕನ್ನಡಿಗರು ಸ್ವಾರ್ಥಿಗಳು, ಆಷಾಢಭೂತಿಗಳು, ಬಸವಣ್ಣನ ಹೆಸರನ್ನು ಹೇಳಿಕೊಂಡು ವಿಶ್ವಮಾನ್ಯ ತತ್ವಗಳನ್ನು ಹೇಳುತ್ತಾ ಜನರ ಆದರ ಗೌರವಗಳನ್ನು, ಅನುಕಂಪವನ್ನು ಪಡೆಯುತ್ತಾ ನಯವಂಚಕರಾಗಿ ದುಡ್ಡು ಗಳಿಸುವುದಕ್ಕೆ, ಅಧಿಕಾರ ಹಿಡಿಯುವುದಕ್ಕೆ ವಚನಕಾರರನ್ನು, ವಚನಸಾಹಿತ್ಯವನ್ನು ಬಳಸಿಕೊಂಡು ಹಂಸತೂಲಿಕಾತಲ್ಪದ ಮೇಲೆ ಪವಡಿಸಿದ್ದಾರೆ. ಇದಕ್ಕೆ ಮಠಮಾನ್ಯಗಳು, ದೊಡ್ಡ ದೊಡ್ಡ ಶ್ರೀಮಂತರು, ಬಸವ ಸಮಿತಿಗಳು, ವಚನಸಾಹಿತ್ಯ ಪರಿಷತ್ತುಗಳು ಹೊರತಾಗಿಲ್ಲ ಮತ್ತು ಹಿಂದೆಯೂ ಬಿದ್ದಿಲ್ಲ. ಇದು ಕರ್ನಾಟಕದ ಮತ್ತು ಕನ್ನಡದ ದುರವಸ್ಥೆ ಎಂದೇ ಹೇಳಬಹುದು.

**ಕೆ. ಡಿ. ಮುತ್ತೂರ**
ಮಲ್ಲಮ್ಮ ನಗರ, ಮುಧೋಳ - ೫೮೭ ೩೧೩, ಬಾಗಲಕೋಟೆ ಜಿಲ್ಲೆ

*ಯಾವನು ದೇವಾ... (೩೫ನೇ ಪುಟದಿಂದ)*

ಉತ್ರ ಏಳ್‌ದೇ ಇದ್ರೆ ನಿನ್ ತಲೆ ಕಲ್ಪನಾ ಚಾವ್ಲಾ ಬರ್ತಾಯಿದ್ದ ಮಿಸ್ಸೈಲ್ನಂಗೆ ಚಕಾಚೂರಾಯ್ತದೆ ಗೊತ್ತು ತಾನೇ ಉಸಾರ್'' ಅಂತಾ ಬಾಯಿಗ್ ಬೀಗಾ ಆಕೊಂಡಂಗೆ ತೆಪ್ಪಗಾಯ್ತು. ಇನ್ ಈವಯ್ಯ ಬಿಡಾಕಿಲ್ಲಾಂತ ಮಾರಾಜ ''ಅಲ್ಕಣಯ್ಯಾ ನಿನ್ ಪ್ರಸ್ನೇನಾಗೇ ಉತ್ತರ ಐತಲ್ಲ. ಸುಮ್ಕೆ ನನ್ ಬಾಯ್ಬುಡಿಸ್ಬುಟ್ಟೆ. ಆಡ್ತೀಯಾ ಅದೇ ಆಟ್ವಾ ? ಅನ್ನೆರಡನೇ ಸತಮಾನಾಂದ್ರೆ ಎಂಟು ನೂರು ವರ್ಸಾತು. ವರ್ಸಕ್ಕೆ ಒಂದು ಮಠ ಉಟ್ಟಿದ್ರೂವೆ ಎಂಟು ನೂರು ವರ್ಸಕ್ಕೆ ಎಂಟು ನೂರು ಮಠಗಳು ಉಟ್ಕೊಂಡವೆ. ಆ ಮಠದ ಬಕ್ತರ ಸಂಕ್ಯೇನೂ ಅಪಾರ ಅಲ್ಲವಾ ? ಅಸ್ಟೊಂದು ಜನ ಬಕ್ತರಿಗೆ ಬ್ಯಾಸರಾದ್ರೆ ಅದ್ಕೆ ನ್ಯಾಯಾವ ಕೊಡ್ಲೇ ಬೇಕಲ್ಲವಾಂತೀನಿ ? ಇನ್ನ ನಾನೂರು ವರ್ಸದ ಇಂದಿದ್ದ ಸ್ವಾಮ್ಗೋಳು ಅವರ್ ಮಠಾ ಎಷ್ಟಿದ್ದಾತೂ ? ಅಲ್ಲೇ ಇವರ್ ಕಾಲದಾಗ ತಮ್ಮ್ ಕೈ ನಡಿಯೂವಾಗ್ಲೆಲ್ಲಾ ಇವರೂನೂವೆ ಸ್ಯಾನೆ ಜನನ್ನ ಗೋಳಾಡಸ್ವೆ. ಅವರ್ ಆಗ ಮಾಡಿದ್ ತಪ್ಪುಗ ಇನ್ನೂ ಎಷ್ಟೋ ಜನ ಇನ್ನೂನೂವೆ ಕಸ್ಟ ಪಡ್ತಾವ್ರಂತೆ. ಈಗೇನಾದ್ರೂ ಇವರ್ ನಮ್ಮ್ ಜಾತೀಗಿತೀಂತ ತರ್ಲೆ ತೆಗುದ್ರೂಂದ್ರೆ ಬ್ಯಾರೆಯೋರು ಸುಮ್ಕೆ ಬುಟ್ಟಾರಾ ? ಅದ್ಕೇ ಈ ಮಂದಿ ಬಾಯೇ ಬುಡಾಕಿಲ್ಲ. ಮೊದ್ಲೇ ಈ ಜಾತಿಯೋರ್ಗೆ ಒಂದಿಷ್ಟೂ ಒಗ್ಗಟ್ಟಿಲ್ಲವಂತೆ ಮತ್ತೆ ಈ ಜಾತಿಯೋರು ಏನೋ ಇಂಗ್ಲೀಸೂ ಪಂಗ್ಲೀಸೂ ಅಂತ ಸ್ಯಾನೇ ಓದಿ ಅಮೆರಿಕಾ ಇಂಗ್ಲೇಂಡು ಸಿಂಗಪುರಾಂತ ಚದುರೇ ಓಗವರಂತೆ ? ಈ ನಾಕಕ್ಸರಾ ಇದ್ಯೆ ಕಲಿತಮಂದಿ ಕನ್ನಡ ಸಿನಿಮಾಗಳ್ನ ನೋಡ್ತಾರೇಂತ ತಿಳಿದ್ಯಾ ? ನೋಡಾಕಿಲ್ಲ, ಅಂಗಾಗೇ ಎಂತಾ ಸಾಮಿಗೋಳ್ ಬರೆದ ಪದನಾದ್ರೂ ತಗಾಬ್ಯೆದೂ'' ಅಂತೇಳಲಾಗಿ ಸರ್ರ್ ಅಂತಾ ಬೇತಾಳ ವಾಪಸ್ ಅರಿಸ್ಬಂದ್ರ ಫಾಟ್ಗೆ ವಾಪ್ಸಾಗಿ ಅಲ್ಲಿದ್ ಮರಗಳ್ನೆಲ್ಲಾ ಕಡಿದಿರಲಾಗಿ ಮರ ಉಡಿಕೊಂಡಿ ಈ ಊರ್ನೇ ಬಿಟ್ಟೊಗಿ ಪಾಪ ಇಕ್ರಮ ಮಾರಾಜ ಅದನ್ನ ಉಡಿಕ್ಕೊಂಡಿ ರಸ್ತೆ ರಸ್ತೆ ತಿರುಗ್ತಾ ಅವನಂತೆ, ನಿಮಗೇನಾರ ಆ ವಯ್ಯನ ಅಡ್ರೆಸ್ ಗೊತ್ತಿದ್ರೆ ವಸಿ ಏಳಿ ಪುಣ್ಯೇವು ಕಟ್ಕೊಳ್ಳಿ.

**ಶಾಂತಾ ನಾಗರಾಜ್**
[illegible]

# ವಸಂತಾಗಮನ

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್,
ಬೆಂಗಳೂರು - ೫೬೦ ೦೦೧

**ಚ**ಳಿಯ ಕೊರೆತ ಮುಗಿದು ಬಿಸಿಲು ಚುರುಕಾಗುವ ಅವಧಿ ಇದು. ಬೇವಿನ ಚಿಗುರು ಸಾರುವ ವಸಂತಾಗಮನ. ಇದು ಮಾರ್ಚ್ ೨೦ಕ್ಕೇ ನಡೆಯಲಿದೆ. ಆದರೆ ಯುಗಾದಿ ಮಾತ್ರ ಆ ದಿನ ಅಲ್ಲವಂತೆ. ಭೂಮಿಯ ಕಕ್ಷೆಯಲ್ಲಿನ ಒಂದು ಪ್ರಮುಖ ಘಟ್ಟವೇ ವಸಂತ ವಿಷುವ. ಹಗಲು-ರಾತ್ರಿಗಳ ಅವಧಿ ಅಂದು ಸಮ. ಆ ಮುಂದೆ ಹಗಲಿನ ಅವಧಿ ದೀರ್ಘವಾಗುತ್ತದೆ. ಸಂಜೆಯಾಗುತ್ತಿದ್ದಂತೆ ಸ್ಫುಟವಾಗಿ ಕಾಣುವ ಗ್ರಹಗಳು ಮಂಗಳ ಮತ್ತು ಶನಿ. ಇವೆರಡರ ಪ್ರತಿಸ್ಪರ್ಧಿ ಲುಬ್ಧಕ ಅಥವಾ ಸಿರಿಯಸ್. ದಿಗಂತದ ಅಂಚಿನಲ್ಲಿ ಕಾಣುವ ಇದು ಮೇಲೇರಿದ ಹಾಗೆ ಮತ್ತೊಂದು ಚುಕ್ಕೆ ದಕ್ಷಿಣದಲ್ಲಿ ಕಾಣುತ್ತದೆ. ಅದೇ ಅಗಸ್ತ್ಯ-ಕನೋಪಸ್. ಪ್ರಕಾಶದಲ್ಲಿ ಮೊದಲನೆಯ ಮತ್ತು ಎರಡನೆಯ ಸ್ಥಾನವನ್ನು ಇವು ಗಿಟ್ಟಿಸಿಕೊಂಡಿವೆ. ಇವೆರಡರ ಮೂಲಕ ಹಾದು ಉತ್ತರಕ್ಕೆ ಸಾಗುವ ಆಕಾಶಗಂಗೆಯ ನೋಟ ನಮಗೆ ಸಂಜೆ ಸಿಗುತ್ತದೆ. ಒರೈಯನ್, ಮಹಾವ್ಯಾಧ ಮತ್ತು ಮಹಾಶ್ವಾನ ಈ ಪುಂಜಗಳ ಮೂಲಕ ಹಾದುಹೋಗುತ್ತದೆ, ಆಕಾಶಗಂಗೆ.




ಮಂಗಳ ಮಧ್ಯರಾತ್ರಿಗೇ ಕಂತುತ್ತದೆ; ಶನಿ ಬೆಳಗಿನ ಜಾವದವರೆಗೂ ಕಾಣುತ್ತದೆ. ಇನ್ನುಳಿದ ಮೂರೂ ಗ್ರಹಗಳು ಬೆಳಗಿನ ಜಾವ ಪೂರ್ವದಲ್ಲಿ ಕಾಣುತ್ತವೆ. ಕಳೆದ ತಿಂಗಳು ಜೋಡಿಯಾಗಿದ್ದ ಗುರು ಮತ್ತು ಶುಕ್ರ ಈಗ ಸಾಕಷ್ಟು ದೂರ ಸರಿದಿವೆ. ಶುಕ್ರದ ಜೊತೆಗೆ ಬುಧ ತಿಂಗಳ ಆರಂಭದಲ್ಲಿ ಕಾಣುವುದು. ತಿಂಗಳ ಮೊದಲ ವಾರದಲ್ಲಿ ರೇಖಾ ಚಂದ್ರಮನೂ ಬುಧ ಮತ್ತು ಶುಕ್ರಗಳ ಜೊತೆ ಗೂಡುವನು. ಬುಧಗ್ರಹದ ಗರಿಷ್ಠ ಕೋನೋನ್ನತಿ ೩ರಂದು. ಆದ್ದರಿಂದ ಅದನ್ನು ಗುರುತಿಸಲು ಅದು ಪ್ರಶಸ್ತವಾದ ಸಮಯ. ಜೊತೆಯಲ್ಲೇ ಶುಕ್ರ ಇರುವುದು ಒಂದು ಅನುಕೂಲಕರ ಚಿಹ್ನೆ. ಹೀಗೆ ಜೋಡಿಯಾಗಿದ್ದ ಬುಧ ಶುಕ್ರದಿಂದ ದೂರ ಸರಿದು ೩ರಂದು ಗರಿಷ್ಠ ಎತ್ತರ ತಲುಪಿ, ಕೆಳಗಿಳಿಯುವಾಗ, ಪುನಃ ೧೮ರಿಂದ ೨೮ರವರೆಗೆ ಶುಕ್ರದ ಸಮೀಪವಾಗಿಯೇ ಹಾದುಹೋಗುತ್ತದೆ. ತಿಂಗಳ ಕೊನೆಗೆ ೨೭-೨೮ರಂದು ಬುಧ, ಶುಕ್ರಗಳ ಜೊತೆಗೆ ಯುರೇನಸ್ ಕೂಡ ಸೇರುತ್ತದೆ. ಆದರೆ ಆಕಾಶದ ಆ ಭಾಗ ಸಂಜೆಗೆಂಪಿನಿಂದ ಲೇಪಿತವಾಗಿರುವುದರಿಂದ ಇದನ್ನು ನೋಡಿ, ಗುರುತಿಸುವುದು ಬಹಳ ಕಷ್ಟ.

ಮಾರ್ಚ್ ೧೯ರ ಸೂರ್ಯೋದಯಕ್ಕೆ ಮೊದಲು ಪೂರ್ವ ದಿಕ್ಕಿನತ್ತ ನೋಟ ಶುಕ್ರ, ಬುಧ ಮತ್ತು ಗುರು

ಈ ತಿಂಗಳು ಮಘ ಮತ್ತು ಜ್ಯೇಷ್ಠಾ ನಕ್ಷತ್ರಗಳನ್ನು ಚಂದ್ರ ಮುಚ್ಚಿ ಹಾಕುವ ಆಚ್ಛಾದನೆಗಳು ನಡೆಯಲಿವೆ. ಆದರೆ ಅವುಗಳ ನೇರ ನೋಟ ನಮಗಿಲ್ಲ. ೧೯ರಂದು ಮತ್ತು ೨೭ರಂದು ಚಂದ್ರನ ಪಕ್ಕದಲ್ಲೇ ಈ ನಕ್ಷತ್ರಗಳು ಕಾಣುವುವು. ತಿಂಗಳ ೫ರಂದು ಚಂದ್ರ, ಬುಧ-ಶುಕ್ರಗಳೆರಡನ್ನೂ ಮುಚ್ಚಿಹಾಕುತ್ತಾನೆ. ಜೊತೆಗೆ ನೆಪ್ಚೂನ್‌ಅನ್ನೂ ಮುಚ್ಚುತ್ತದೆಯಾದರೂ, ಈ ಯಾವುದೇ ನೋಟ ನಮಗಿಲ್ಲ.

ಸೂರ್ಯನ ಚಲನೆ ಕುಂಭದಿಂದ ಮೀನಕ್ಕೆ ಮೀನರಾಶಿಯಲ್ಲಿರುವ ಒಂದು ಕಾಲ್ಪನಿಕ ಬಿಂದುವಿಗೆ ಮೇಷದ ಪ್ರಥಮ ಬಿಂದು ಎಂಬ ಹೆಸರಿದೆ. ಯುಗಾದಿಗಳ ಗೊಂದಲಕ್ಕೆ ಈ ಹೆಸರೇ ಕಾರಣ. ಸೂರ್ಯ ಈ ಬಿಂದುವನ್ನು ಹಾದು ಹೋದಂತೆ ಕಾಣುವ ದಿನವೇ ವಿಷುವ. ಇದಾದ ಮುಂದಿನ ಅಮಾವಾಸ್ಯೆಯ ನಂತರದ ಪಾಡ್ಯವೇ ಚಾಂದ್ರಮಾನ ಯುಗಾದಿ. ಆದರೆ ೨೦೦೦ ವರ್ಷಗಳ ಹಿಂದೆ, ಮೇಷದ ಪ್ರಥಮ ಬಿಂದು, ಮೇಷದಲ್ಲೇ ಇದ್ದಾಗ, ಸೌರಮಾನ ಯುಗಾದಿ ಮತ್ತು ಮೇಷ ಸಂಕ್ರಮಣ ಎರಡೂ ಒಟ್ಟಿಗೇ ನಡೆಯುತ್ತಿದ್ದವು. ಈಗ ಮೇಷದ ಪ್ರಥಮ ಬಿಂದು ಎಂಬುದು ಮೀನಕ್ಕೆ ಸರಿದಿದೆ. ಆದ್ದರಿಂದ ಯುಗಾದಿಗಳು ತಾಳೆಯಾಗುವುದಿಲ್ಲ. ಉತ್ತರಾಯಣಕ್ಕೂ ಮಕರ ಸಂಕ್ರಮಣಕ್ಕೂ ಉಂಟಾಗುತ್ತಿರುವ ವ್ಯತ್ಯಾಸವೇ ಇಲ್ಲಿಯೂ ಕಂಡುಬರುತ್ತಿದೆ.

**ಖಗೋಳ ದಿನಚರಿ**

ಮಾರ್ಚ್ ೩
ಗುರು-ಚಂದ್ರ ೪ ಡಿಗ್ರಿ ಅಂತರದಲ್ಲಿ*
೩ ಬುಧಗ್ರಹದ ಗರಿಷ್ಠ ಕೋನೋನ್ನತಿ (೨೭ ಡಿಗ್ರಿ)*
೫ ಬುಧ - ಚಂದ್ರ - ಶುಕ್ರ -(ನೆಪ್ಚೂನ್) ಜೋಡಿ*
ಆಚ್ಛಾದನೆಗಳು ಭಾರತಕ್ಕೆ ಕಾಣುವುದಿಲ್ಲ
೭ ಅಮಾವಾಸ್ಯೆ ೨೨:೪೪ಕ್ಕೆ
೧೦ ಚಂದ್ರ-ಭೂಮಿ ಅಂತರ ಕನಿಷ್ಠ
೧೪ ಚಾಂದ್ರಮಾಸದ ಮೊದಲ ಪಾದ
೧೫ ಮಂಗಳ-ಚಂದ್ರ ೨ ಡಿಗ್ರಿ ಅಂತರದಲ್ಲಿ*
೧೯ ಚಂದ್ರ - ಶನಿ ೩ ಡಿಗ್ರಿ ಅಂತರದಲ್ಲಿ
೨೦ ವಸಂತ ವಿಷುವ
೨೨ ಹುಣ್ಣಿಮೆ ೦೦:೪೦ಕ್ಕೆ
೨೩ ಬುಧ - ಶುಕ್ರ ೧ ಡಿಗ್ರಿ ಅಂತರದಲ್ಲಿ*
೨೯ ಚಾಂದ್ರಮಾಸದ ಕೊನೆಯ ಪಾದ
೩೦ ಗುರು-ಚಂದ್ರ ೪ ಡಿಗ್ರಿ ಅಂತರದಲ್ಲಿ*
ಏಪ್ರಿಲ್ ೫ ಬುಧ - ಶುಕ್ರ - ಚಂದ್ರ ಜೋಡಿ*

* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ

## ಇಂಡೊನೇಶಿಯ – ಸರ್ವಾಧಿಕಾರಿ ಆಡಳಿತ ತಂದ ದುರಂತ

**ಮು**ವ್ವತ್ತೆರಡು ವರ್ಷ ಇಂಡೊನೇಶಿಯಾದಲ್ಲಿ ನರಮೇಧ ನಡೆಸಿದ ಸರ್ವಾಧಿಕಾರಿ ಸುಹಾರ್ತೋ ಈ ವರ್ಷ ಜನವರಿ ತಿಂಗಳ ಕೊನೆಯಲ್ಲಿ ಮಡಿದ. ೧೯೬೬ರಲ್ಲಿ ಅಧಿಕಾರದ ಗದ್ದುಗೆಗೇರಿದ ಜನರಲ್ ಸುಹಾರ್ತೋ ಹತ್ತು ಲಕ್ಷಕ್ಕೂ ಹೆಚ್ಚು ಮಂದಿಯನ್ನು ಕಗ್ಗೊಲೆ ಮಾಡಿ ನೆತ್ತರು ಕೋಡಿ ಹರಿಸಿದ. ಈತ ಹಿಟ್ಲರ್, ಪೋಲ್‌ಪಾಟ್, ಪಿನೋಚಿ ಸಾಲಿಗೆ ಸೇರುತ್ತಾನೆ. ಅಮೆರಿಕಾದ ಕೃಪೆಯಿಂದ, ಅದರ ಗೂಢಚರ್ಯೆ ಸಂಸ್ಥೆ ಸಿಐಎ ಚಿತಾವಣೆಯಿಂದ ಚುನಾಯಿತ ಪುರೋಗಾಮಿ ಸರಕಾರವನ್ನು ಪದಚ್ಯುತಗೊಳಿಸಿ ಅಧಿಕಾರ ಗ್ರಹಣ ಮಾಡಿದ ಸುಹಾರ್ತೋ ಮೊದಲು ಮಾಡಿದ ಕೆಲಸ ಕಮ್ಯುನಿಸ್ಟ್ ಪಾರ್ಟಿಯನ್ನು ನಿಷೇಧಿಸಿ, ಅದರ ನಾಯಕರ, ಸದಸ್ಯರ ಸಾಮೂಹಿಕ ಕಗ್ಗೊಲೆ. ಅಧ್ಯಕ್ಷ ಸುಕಾರ್ನೋ ನೇತೃತ್ವದಲ್ಲಿದ್ದ ಸರಕಾರ ಅನುಸರಿಸುತ್ತಿದ್ದ ಅಲಿಪ್ತ ನೀತಿಯನ್ನು, ಪುರೋಗಾಮಿ ನೀತಿಗಳನ್ನು ಬದಲಿಸಿ, ಇಂಡೊನೇಶಿಯವನ್ನು ಅಮೆರಿಕಾದ ತೆಕ್ಕೆಗೆ ಸೇರಿಸಿದ್ದೇ ಸುಹಾರ್ತೋ ಸಾಧನೆ. ಶೀತಯುದ್ಧ ಕಾಲದಲ್ಲಿನ ಸಂಭವಿಸಿದ ಅನಾಹುತಗಳಲ್ಲಿ ಇಂಡೊನೇಶಿಯದ ದುರಂತವೂ ಒಂದು. ತಾನು ನಡೆಸಿದ ಪಾತಕ ಕೃತ್ಯಗಳಿಗೆ ವಿಚಾರಣೆಗೆ ಗುರಿಯಾಗಿ ನೇಣುಗಂಬ ಏರಬೇಕಾಗಿದ್ದ ಸುಹಾರ್ತೋ ಕ್ಷುಲ್ಲಕ ಕಾರಣಗಳಿಂದ ಹೇಗೋ ಪಾರಾದ. ಆದರೆ ಇಂಡೊನೇಶಿಯ ಅವನ ದುರಾಡಳಿತದ ಪರಿಣಾಮಗಳಿಂದ ಇನ್ನೂ ಚೇತರಿಸಿಕೊಂಡಿಲ್ಲ.

ಇಂಡೊನೇಶಿಯ ಒಂದು ದ್ವೀಪಸ್ತೋಮ. ಏಷ್ಯಾ ಖಂಡದ ಆಗ್ನೇಯ ದಿಕ್ಕಿನಲ್ಲಿರುವ ಈ ರಾಷ್ಟ್ರ ೧೩,೦೦೦ಕ್ಕೂ ಹೆಚ್ಚು ದ್ವೀಪಗಳ ಗುಂಪು ಹೊಂದಿದೆ. ಇದರಲ್ಲಿ ಜನವಸತಿ ಸುಮಾರು ೬೦೦೦ ದ್ವೀಪಗಳಲ್ಲಿ ಮಾತ್ರ. ಸಾಕಷ್ಟು ನೈಸರ್ಗಿಕ ಸಂಪನ್ಮೂಲವನ್ನು ಹೊಂದಿರುವ ಈ ದ್ವೀಪಸ್ತೋಮದ ಜನಸಂಖ್ಯೆ ೨೦ ಕೋಟಿ. ಶೇ. ೮೬ ಮಂದಿ ಮುಸ್ಲಿಮರು. ಕ್ರಿ.ಪೂ. ೩೦೦೦ ದಿಂದಲೇ ಹೊರಗಿನವರನ್ನು, ಹೆಚ್ಚಾಗಿ ಚೀಣೀ ಮೂಲದ ಜನರನ್ನು, ಆಕರ್ಷಿಸಿದ ಪ್ರದೇಶ. ಹಿಂದೂ ಮತ್ತು ಬೌದ್ಧ ಧರ್ಮಗಳು ಇಲ್ಲಿ ಒಂದು ಕಾಲದಲ್ಲಿ ವ್ಯಾಪಕವಾಗಿ ಹರಡಿತ್ತು. ಇಸ್ಲಾಮ್ ಧರ್ಮ ಆವರಿಸಿದ್ದು ಆನಂತರ. ಕ್ರಿ.ಶ. ೧೬ನೇ ಶತಮಾನದಲ್ಲಿ ಯೂರೋಪಿಯನ್ನರು ಆಗಮಿಸ ತೊಡಗಿದ್ದು ಕ್ರಮೇಣ ಡಚ್ಚರ ವಸಾಹತಾಯಿತು. ಇಪ್ಪತ್ತನೇ ಶತಮಾನದ ಪ್ರಾರಂಭದಲ್ಲೇ ಇಂಡೊನೇಶಿಯದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಟ ಪ್ರಾರಂಭವಾಯಿತು. ಎರಡನೇ ಮಹಾಯುದ್ಧ ಕಾಲದಲ್ಲಿ ಜಪಾನೀ ಸಾಮ್ರಾಜ್ಯಶಾಹಿಗಳ ಆಕ್ರಮಣಕ್ಕೀಡಾದ ದೇಶ ವಿಮೋಚನೆ ಕಂಡದ್ದು ಯುದ್ಧ ಮುಗಿದಮೇಲೆ. ಇಂಡೊನೇಶಿಯದ ರಾಷ್ಟ್ರೀಯ ಪಕ್ಷದ ನಾಯಕ ಡಾ॥ ಸುಕಾರ್ನೋ ೧೯೪೫ರ ಆಗಸ್ಟ್ ೧೭ರಂದು ಸ್ವಾತಂತ್ರ್ಯ ಘೋಷಿಸಿದರು. ಆದರೆ ಡಚ್ಚರು ಮತ್ತೆ ಪ್ರವೇಶಿಸಿ ಅಧಿಕಾರ ಸ್ಥಾಪಿಸಿದರು. ನಾಲ್ಕು ವರ್ಷಗಳು ಸಶಸ್ತ್ರ ಹೋರಾಟ ನಡೆಸಿ ಇಂಡೊನೇಶಿಯದ ಜನತೆ ಸ್ವಾತಂತ್ರ್ಯ ಪಡೆದುಕೊಂಡರು. ಇಂಡೊನೇಶಿಯಗೆ ಸೇರಿದ, ಡಚ್ಚರ ವಶದಲ್ಲೇ ಇದ್ದ, ಪಶ್ಚಿಮ ಇರಿಯನ್ ಭಾಗ ವಿಮೋಚನೆಗೊಂಡದ್ದು ೧೯೬೩ರಲ್ಲಿ. ಹಾಗೆಯೇ ೧೭೦೨ರಿಂದ ಪೋರ್ಚುಗೀಸರ ವಸಾಹತಾಗಿದ್ದು, ಆನಂತರ ಇಂಡೊನೇಶಿಯರ ಆಕ್ರಮಣದಲ್ಲಿದ್ದ ಪೂರ್ವ ತಿಮೋರ್ ಸ್ವತಂತ್ರಗೊಂಡಿದ್ದು ೧೯೯೯ರಲ್ಲಿ.



ಸ್ವಾತಂತ್ರ್ಯಾನಂತರ ಡಾ॥ ಸುಕಾರ್ನೋ ನೇತೃತ್ವದಲ್ಲಿ ಇಂಡೊನೇಶಿಯ ಸರಕಾರ ಅಲಿಪ್ತ ನೀತಿ ಅನುಸರಿಸಿ, ದೇಶದಲ್ಲಿ ಪುರೋಗಾಮಿ ಸುಧಾರಣೆಗಳನ್ನು ಜಾರಿಗೆ ತರಲು ಶ್ರಮಿಸಿತು. ಸಾಕಷ್ಟು ಪ್ರಾಬಲ್ಯ ಹೊಂದಿದ್ದ ಕಮ್ಯುನಿಸ್ಟ್ ಪಾರ್ಟಿ ಸರಕಾರದ ಜನಪರನೀತಿಗಳನ್ನು ಬೆಂಬಲಿಸುತ್ತಿತ್ತು. ಡಚ್ ಸಾಮ್ರಾಜ್ಯಶಾಹಿಗಳ ವಿರುದ್ಧ ಹೋರಾಟದಲ್ಲಿ ಏಶಿಯಾ ಆಫ್ರಿಕಾ ದೇಶಗಳ, ಮುಖ್ಯವಾಗಿ ಭಾರತದ ಜನತೆಯ ಬೆಂಬಲ ಪಡೆದಿದ್ದ ಇಂಡೊನೇಶಿಯ ಸಹಜವಾಗಿಯೇ ಏಷ್ಯಾ-ಆಫ್ರಿಕಾ ದೇಶಗಳ ಐಕ್ಯತೆಗಾಗಿ ಶ್ರಮಿಸಿತು. ೧೯೪೬ರಲ್ಲಿ ದೆಹಲಿಯಲ್ಲಿ ಜರುಗಿದ ಏಷ್ಯನ್ ರಿಲೇಶನ್ಸ್ ಕಾನ್ಫರೆನ್ಸ್‌ನಲ್ಲಿ ಭಾಗವಹಿಸಿದ್ದ ಇಂಡೊನೇಶಿಯ, ೧೯೫೫ರಲ್ಲಿ ಏಷ್ಯಾದ ದೇಶಗಳ ಅಧಿಪತಿಗಳ ಮೊದಲ ಸಮ್ಮೇಳನದ ಸಾರಥ್ಯವಹಿಸಿದ್ದು ಐತಿಹಾಸಿಕ ಸಂಗತಿ. ಬಾಂಡುಂಗ್‌ನಲ್ಲಿ ಜರುಗಿದ ಈ ಸಮ್ಮೇಳನ ದೇಶದೇಶಗಳ ನಡುವೆ ಪರಸ್ಪರ ಅನುಕೂಲಕರವಾದ ಸಂಬಂಧಗಳ ಸ್ಥಾಪನೆಗೆ ಅತ್ಯಂತ ಮಹತ್ವಪೂರ್ಣವಾದ ಪಂಚಶೀಲ ಸೂತ್ರಗಳನ್ನು ಅನುಮೋದಿಸಿತು. ಈ ಸಮ್ಮೇಳನ ಮುಂದೆ ಅಲಿಪ್ತ ಚಳವಳಿಯ ಆರಂಭಕ್ಕೆ ನಾಂದಿಹಾಡಿತು. ಬಾಂಡುಂಗ್ ಸಮ್ಮೇಳನ ಅಮೆರಿಕನ್ ಹಾಗೂ ಪಾಶ್ಚಾತ್ಯ ಸಾಮ್ರಾಜ್ಯಶಾಹಿಗಳ ಕಣ್ಣು ಕೆಂಪಗಾಗಿಸಿತು. ಸಮ್ಮೇಳನ ನಡೆಯದಂತೆ ತಡೆಯಲು ಅಮೆರಿಕಾ ಪ್ರಯತ್ನಿಸಿತ್ತು. ಚೀಣೀ ನಿಯೋಗವಿದ್ದ ವಿಮಾನ ಇಂಡೊನೇಶಿಯ ಬಳಿ ಅಪಘಾತಕ್ಕೀಡಾದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ಡಾ॥ ಸುಕಾರ್ನೋ ನೇತೃತ್ವದಲ್ಲಿ ಇಂಡೋನೇಶಿಯ ಅನುಸರಿಸುತ್ತಿದ್ದ ಸ್ವತಂತ್ರನೀತಿ, ಅಲಿಪ್ತ ಚಳುವಳಿಯಲ್ಲಿ ವಹಿಸುತ್ತಿದ್ದ ಸಕ್ರಿಯಪಾತ್ರ ಹಾಗೂ ಬೆಳೆಯುತ್ತಿದ್ದ ಕಮ್ಯುನಿಸ್ಟ್ ಪ್ರಾಬಲ್ಯವನ್ನು ಸಹಿಸದೇ ಹೋದ ಅಮೆರಿಕಾ, ಸರಕಾರವನ್ನು ಪದಚ್ಯುತಗೊಳಿಸಲು ಸಂಚು ನಡೆಸಿತು, ಕೈಗೊಂಬೆ ಸರಕಾರ ಸ್ಥಾಪಿಸಲು ಮುಂದಾಯಿತು. ಎಲ್ಲ ಕಡೆಗಳಂತೆಯೇ, ಇಲ್ಲಿ ಕೂಡ ಭ್ರಷ್ಟ ಸೇನಾಧಿಕಾರಿಗಳನ್ನು ಎತ್ತಿಕಟ್ಟಿ ೧೯೬೬ರಲ್ಲಿ ಜನರಲ್ ಸುಹಾರ್ತೋನನ್ನು ಅಧಿಕಾರಕ್ಕೆ ತಂದಿತು. ೧೯೬೬ರಿಂದ ೧೯೯೮ರವರೆಗೆ ಸರ್ವಾಧಿಕಾರ ನಡೆಸಿದ ಈತ ಇಪ್ಪತ್ತನೇ ಶತಮಾನದಲ್ಲಿ ಸಾಮೂಹಿಕ ಹತ್ಯಾಕಾಂಡ ಎಸಗಿದ ಪಾಪಿಗಳ ಸಾಲಿನಲ್ಲಿ ನಿಲ್ಲುತ್ತಾನೆ. ವಯಸ್ಸು ಮತ್ತು ಅನಾರೋಗ್ಯದಿಂದಾಗಿ ವಿಚಾರಣೆ ತಪ್ಪಿಸಿಕೊಂಡ. ಇಂಡೊನೇಶಿಯದ ಪ್ರಖ್ಯಾತ ಬಾಲಿ ದ್ವೀಪ ಒಂದರಲ್ಲೇ ಅವನು ೫೦,೦೦೦ ಜನರನ್ನು ಕೊಂದ. ಇವರಲ್ಲಿ ಬಹುತೇಕ ಮಂದಿ ಕಾರ್ಮಿಕರು ಮತ್ತು ಕಮ್ಯುನಿಸ್ಟರು. ಪೋರ್ಚುಗೀಸರ ವಶದಲ್ಲಿದ್ದ ಪೂರ್ವ ತಿಮೋರ್‌ನಲ್ಲಿ ಕಮ್ಯುನಿಸ್ಟರು ಪ್ರಬಲರಾಗುತ್ತಿದ್ದಾರೆ ಎಂಬ ಅಮೆರಿಕಾದ ಪ್ರಚಾರಕ್ಕೆ ಮಣಿದು ಸುಹಾರ್ತೋ ಅದನ್ನು ಆಕ್ರಮಿಸಿಕೊಂಡ, ಎರಡೇ ತಿಂಗಳಲ್ಲಿ ಅಲ್ಲಿ ೬೦,೦೦೦ ಜನರ ಹತ್ಯೆಗೈದ. ಇಪ್ಪತ್ತನಾಲ್ಕು ವರ್ಷಗಳ ಆಕ್ರಮಣದ ಕಾಲದಲ್ಲಿ ೨೫೦,೦೦೦ ಪೂರ್ವ ತಿಮೋರ್ ಜನ ಸಾವಿಗೀಡಾದರು. ೬೫೦,೦೦೦ ಜನಸಂಖ್ಯೆಯ ಪೂರ್ವ ತಿಮೋರ್ ಅಂತರರಾಷ್ಟ್ರೀಯ ಒತ್ತಾಯದಿಂದಾಗಿ ವಿಮೋಚನೆಗೊಂಡದ್ದು ೧೯೯೯ರಲ್ಲಿ. ಇಂಡೊನೇಶಿಯದ ಈಗಿನ ಅಧ್ಯಕ್ಷ ಯುಧೋಯೋಗೋ ಜನರಲ್ ಸುಹಾರ್ತೋನ ಶಿಷ್ಯ.

## ನೈಜೀರಿಯ : ತೈಲ ರಾಜಕಾರಣದ ಕಚ್ಚಾಟ

**ಅ**ಮೆರಿಕಾದ ಅಧ್ಯಕ್ಷೀಯ ಅಭ್ಯರ್ಥಿಯ ಆಯ್ಕೆಗಾಗಿ ನಡೆಯುತ್ತಿರುವ ಪ್ರಾಥಮಿಕ ಮತದಾನ ನಮ್ಮ ಮಾಧ್ಯಮಗಳಲ್ಲಿ ಪ್ರತಿದಿನ ದೊಡ್ಡ ಸುದ್ದಿ. ತಿಂಗಳುಗಟ್ಟಲೆ ನಡೆಯುವ ಈ ಪ್ರಕ್ರಿಯೆ ಮಾಧ್ಯಮಗಳಲ್ಲಿ ಆಕ್ರಮಿಸಿಕೊಳ್ಳುವ ಸಮಯ ಮತ್ತು ಜಾಗ ಇಲ್ಲೇ ಚುನಾವಣೆ ನಡೆಯುತ್ತಿದೆಯೋ ಎನಿಸುತ್ತದೆ. ಅದೇ ಏಶಿಯಾ ಆಫ್ರಿಕಾಗಳಲ್ಲಿ ಸಂಭವಿಸುತ್ತಿರುವ ವಿದ್ಯಮಾನಗಳು ನಮ್ಮ ಮಾಧ್ಯಮಗಳ ಗಮನ ಸೆಳೆಯುವುದೇ ಇಲ್ಲ. ಏನಾದರೂ ದೊಡ್ಡ ಅನಾಹುತ ಸಂಭವಿಸಿದಾಗ ಮಾತ್ರ ಈ ದೇಶಗಳು ಸುದ್ದಿಯಾಗುತ್ತವೆ.

ಸಾಕಷ್ಟು ಕಾಲದಿಂದ ಆಫ್ರಿಕಾ ಖಂಡದ ಪಶ್ಚಿಮ ಕರಾವಳಿಯಲ್ಲಿರುವ ಅತಿ ಹೆಚ್ಚು ಜನಸಾಂದ್ರತೆ ಹೊಂದಿರುವ ದೇಶ ನೈಜೀರಿಯ ಅಸ್ಥಿರತೆಯಿಂದಿದ್ದು ಅಂತರ್ಯುದ್ಧದ ಅಂಚಿನಲ್ಲಿದ್ದರೂ ಯಾವುದೇ ಪತ್ರಿಕೆಯ, ಮಾಧ್ಯಮದ ಗಮನಕ್ಕೆ ಬಾರದಿರುವುದು ವಿಪರ್ಯಾಸ. ಅಲ್ಲಿ ಸಂಭವಿಸುತ್ತಿರುವ ನಿರಂತರ ಘರ್ಷಣೆಗಳು, ತೈಲಸಂಪತ್ತಿನ ಮೇಲೆ ಯಜಮಾನಿಕೆಗೆ ನಡೆಯುತ್ತಿರುವ ಪೈಪೋಟಿಯಲ್ಲಿ ಅಮೆರಿಕಾ ಮಧ್ಯ ಪ್ರವೇಶಿಸಿ ಕೂತಾಗಲೇ ಸುದ್ದಿಯಾದೀತೇನೊ !

೨೫೦ಕ್ಕೂ ಹೆಚ್ಚು ಬುಡಕಟ್ಟುಗಳನ್ನು ಹೊಂದಿರುವ ನೈಜೀರಿಯ ಆಫ್ರಿಕಾದಲ್ಲಿ ಅತಿಹೆಚ್ಚು ನೈಸರ್ಗಿಕ ಸಂಪತ್ತನ್ನು ಹೊಂದಿರುವ ದೇಶ. ದೇಶದ ದಕ್ಷಿಣ ಭಾಗದಲ್ಲಿ ತೈಲಸಂಪತ್ತು ಪತ್ತೆಯಾದಮೇಲೆ ದೇಶ ಸುಭಿಕ್ಷವಾಗಬೇಕಿತ್ತು. ಸಾಕಷ್ಟು ಆದಾಯ ಬಂದರೂ ಭ್ರಷ್ಟ ಮಿಲಿಟರಿ ಸರ್ವಾಧಿಕಾರಿ ಆಡಳಿತ ಮತ್ತು ಆಂತರಿಕ ತಿಕ್ಕಾಟಗಳಿಂದ ಜನಸಾಮಾನ್ಯರ ಜೀವನ ದುಸ್ತರ. ಕ್ರಿ.ಶ. ೧೫ನೇ ಶತಮಾನದಲ್ಲಿ ಈ ಪ್ರದೇಶ ಗುಲಾಮರ ಮಾರಾಟಕ್ಕೆ ಹೆಸರುವಾಸಿ. ಪೋರ್ಚುಗೀಸರಿಂದ ಪ್ರಾರಂಭವಾದ ಈ ವ್ಯಾಪಾರ ಇತರ ಐರೋಪ್ಯರನ್ನು ಆಕರ್ಷಿಸಿದ್ದರಲ್ಲಿ ಆಶ್ಚರ್ಯವೇನಿಲ್ಲ. ಕೊನೆಗೆ ಪ್ರಬಲರಾಗಿದ್ದ ಬ್ರಿಟಿಷರ ವಶಕ್ಕೆ ನೈಜೀರಿಯ ಬಂದದ್ದು ೧೮೬೧ರಲ್ಲಿ. ''ವಿಭಜಿಸು-ಆಳು'' ನೀತಿಯಲ್ಲಿ ಪಳಗಿರುವ ಬ್ರಿಟಿಷರು ಇಲ್ಲಿ ಮಾಡಿದ್ದೂ ವಿಭಜನೆಯೇ. ೧೯೪೬ರಲ್ಲಿ ನೈಜೀರಿಯಾವನ್ನು ಮೂರು ಭಾಗಗಳಾಗಿ ವಿಭಜನೆ ಮಾಡಿದ ಬ್ರಿಟಿಷರು ೧೯೫೪ರಲ್ಲಿ ಈ ಭಾಗಗಳನ್ನು ಸೇರಿಸಿ 'ನೈಜೀರಿಯ ಫೆಡರೇಶನ್' ಸ್ಥಾಪಿಸಿದರು. ತಮಗೆ ಬೇಕಾದ ವ್ಯವಸ್ಥೆಗಳನ್ನೆಲ್ಲ ಮಾಡಿಕೊಂಡು ಬ್ರಿಟಿಷರು ೧೯೬೦ರಲ್ಲಿ ಸ್ವಾತಂತ್ರ್ಯ ಘೋಷಿಸಿದರು. ಅಲ್ಲಿಂದ ಪ್ರಾರಂಭ ಅಸ್ಥಿರತೆ, ಒಡಕು, ಘರ್ಷಣೆ. ತೈಲ ನಿಕ್ಷೇಪ ಪತ್ತೆಯಾದ ಮೇಲೆ ಇದು ಇನ್ನಷ್ಟು ಉಲ್ಬಣಿಸಿತು. ಮೂರುಭಾಗಗಳ ಮಧ್ಯೆ ಅಂತರ್ಯುದ್ಧದ ಪರಿಸ್ಥಿತಿ. ಬಯಾಫ್ರಾ ಸ್ವತಂತ್ರ ಗಣರಾಜ್ಯ ಎಂದು ಘೋಷಿಸಿಕೊಂಡ ಮೇಲೆ ಇನ್ನಷ್ಟು ಗಂಭೀರ ಪರಿಸ್ಥಿತಿ. ನೈಜೀರಿಯ ೧೯೭೦ರಲ್ಲಿ 'ಒಪೆಕ್' ಗುಂಪಿಗೆ ಸೇರಿದ ಮೇಲೆ ತೈಲೋದ್ಯಮದಿಂದ ಬಿಲಿಯಗಟ್ಟಲೆ ಆದಾಯ. ೧೯೭೦ರಿಂದ ಮಿಲಿಟರಿ ಸರ್ವಾಧಿಕಾರದ ಸ್ಥಾಪನೆ. ಮಧ್ಯೆ ಆಗಾಗ್ಗ ಚುನಾವಣೆ ನಡೆದು ನಾಗರಿಕ ಸರಕಾರ ಸ್ಥಾಪನೆಯಾದರೂ ಅವು ಅಲ್ಪಾಯುಷಿ. ತೈಲೋತ್ಪನ್ನದ ಮೇಲೆ ಸ್ವಾಮ್ಯ ಸ್ಥಾಪಿಸಲು ಉತ್ತರ ಮತ್ತು ದಕ್ಷಿಣ ಭಾಗಗಳ ಮಧ್ಯೆ ಪೈಪೋಟಿ, ಘರ್ಷಣೆ. ಇದರ ಹಿಂದೆ ಅಮೆರಿಕಾ, ಬ್ರಿಟನ್ ತೈಲ ಕಂಪನಿಗಳ ಕೈವಾಡ. ೨೦೦೭ರಲ್ಲಿ ಚುನಾವಣೆಗಳು ನಡೆದರೂ ಅಧಿಕಾರ ಹಸ್ತಾಂತರಿಸಲು ಮಿಲಿಟರಿಯ ನಕಾರ. ಗೊಂದಲದ ಪರಿಸ್ಥಿತಿ ಮುಂದುವರಿಕೆ. ಬುಡಕಟ್ಟುಗಳ ನಡುವೆ ಘರ್ಷಣೆ, ಹಿಂಸಾಚಾರ. ಈ ಮಧ್ಯೆ ಜನಸಂಖ್ಯೆಯಲ್ಲಿ ಹೆಚ್ಚು ಕಡಿಮೆ ಸಮಪಾಲು ಮುಸ್ಲಿಮರು ಮತ್ತು ಕ್ರೈಸ್ತ ಮತೀಯರನ್ನು ಹೊಂದಿರುವ ಈ ದೇಶದಲ್ಲಿ ಮತೀಯ ಘರ್ಷಣೆಗಳು ಬೇರೆ. ಆರ್ಥಿಕವಾಗಿ ವರ್ಲ್ಡ್ ಬ್ಯಾಂಕ್ ಮತ್ತು ಐಎಂಎಫ್ ಸಾಲದ ಮಡುವಿನಲ್ಲಿ ಮುಳುಗಿರುವ ನೈಜೀರಿಯಾದಲ್ಲಿ ಅಸ್ಥಿರತೆಯ ಮುಂದುವರಿಕೆ ಅಪಾಯಕಾರಿ. ಯಾವುದೇ ಸಮಯದಲ್ಲಿ ಅಮೆರಿಕಾದ ಮಿಲಿಟರಿ ಹಸ್ತಕ್ಷೇಪ ನಿರೀಕ್ಷಿಸಬಹುದಾಗಿದೆ.

ಸೀಯಾರ್ಕೆ
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫





**ಹೆ**ಚ್ಚು ಸಂಖ್ಯೆಯ ವಿದ್ಯಾವಂತರಿರುವ ನಾಡು ಕೇರಳ. ತಂದೆ-ತಾಯಿ ಕಡುಬಡವರಾಗಿದ್ದರೂ ತಮ್ಮ ಮಕ್ಕಳು ಅಕ್ಷರಜ್ಞಾನ ಗಳಿಸಬೇಕೆಂದು ಬಯಸುತ್ತಾರೆ. ಶಾಲೆಗಳು ಮನೆಯಿಂದ ಮೂರು-ನಾಲ್ಕು ಕಿಲೋಮೀಟರು ದೂರವಿದ್ದರೂ ನಡೆದುಹೋಗಿ ಬರುತ್ತವೆ ಮಕ್ಕಳು.

ಈ ಕಾರಣದಿಂದ ಪುಸ್ತಕ ಮತ್ತು ಪತ್ರಿಕೆಗಳನ್ನು ಓದುವವರ ಸಂಖ್ಯೆಯೂ ಹೆಚ್ಚು. ಸಾಮಾನ್ಯವಾಗಿ ಪ್ರತಿಯೊಬ್ಬ ಮಲಯಾಳಿ ಎರಡು ವಾರ್ತಾಪತ್ರಿಕೆಗಳನ್ನು ಓದುವುದುಂಟು. ಅತ್ಯಂತ ಹೆಚ್ಚು ಪ್ರಸಾರಸಂಖ್ಯೆ ಹೊಂದಿರುವ ದೈನಿಕಗಳು ಮಲಯಾಳ ಭಾಷೆಯಲ್ಲಿವೆ.

ಇತ್ತೀಚೆಗೆ ಕೇರಳದ ಕಲ್ಲಿಕೋಟೆಗೆ ಹೋಗಿದ್ದಾಗ ಅಲ್ಲಿರುವ ಮಿತ್ರರು, ನಾವು ನೋಡಬಹುದಾದ ಸ್ಥಳಗಳ ಪಟ್ಟಿಗೆ 'ದೇಶಪೋಷಿಣಿ' ವಾಚನಾಲಯವನ್ನೂ ಸೇರಿಸಿದರು. ಮೊದಲಿಗೆ ಅದರಲ್ಲೇನು ವಿಶೇಷ ಎನ್ನಿಸಿತು. ಅವರು ಆ ಗ್ರಂಥಾಲಯದ ಕಾರ್ಯಚಟುವಟಿಕೆಗಳ ಬಗ್ಗೆ ವಿವರಿಸಿದಾಗ ಗ್ರಂಥಾಲಯದೊಳಗೊಮ್ಮೆ ಹೊಕ್ಕಿಬರಬೇಕೆನ್ನಿಸಿತು.

ಕಲ್ಲಿಕೋಟೆಯ ಗೋವಿಂದಪುರಂ ಭಾಗದಲ್ಲಿರುವ 'ದೇಶಪೋಷಿಣಿ ಸಾರ್ವಜನಿಕ ಗ್ರಂಥಾಲಯ' ಹಲವು ದೃಷ್ಟಿಗಳಿಂದ ವಿಶಿಷ್ಟವಾದದ್ದು. ಅದು ಬರಿಯ ವಾಚನಾಲಯವಾಗಿರದೆ ಅಲ್ಲಿನ ಸಾಹಿತ್ಯ ಮತ್ತು ಸಾಂಸ್ಕೃತಿಕ ಬದುಕಿನ ಮೇಲೆ ಪ್ರಭಾವ ಬೀರುವಂಥ ಚಟುವಟಿಕೆಗಳನ್ನು ನಡೆಸುತ್ತ ಬರುತ್ತಿರುವುದು ಅದರ ವೈಶಿಷ್ಟ್ಯ.

ಕೆಲವು ಮಂದಿ ವಿದ್ಯಾವಂತ ತರುಣರು ತಮ್ಮ ಶಕ್ತಿಯನ್ನು ಏನಾದರೊಂದು ಉಪಯುಕ್ತ ಚಟುವಟಿಕೆಯಲ್ಲಿ ತೊಡಗಿಸಬೇಕೆಂಬ ಉದ್ದೇಶದಿಂದ ೧೯೩೭ರ ನವೆಂಬರಿನಲ್ಲಿ ಅದನ್ನು ಪ್ರಾರಂಭಿಸಿದರು. ಓ. ಜೋಯಿಕುಟ್ಟಿ ಎಂಬಾತ ಅದರ ಪ್ರಾರಂಭಿಕ ಸದಸ್ಯ. ಪ್ರಾರಂಭಕ್ಕೆ ತಮ್ಮಲ್ಲಿದ್ದ ಪುಡಿಗಾಸು ಬಳಸಿಕೊಂಡು ಕೆಲವು ಮಲಯಾಳಂ ಮತ್ತು ಇಂಗ್ಲಿಷ್ ಪತ್ರಿಕೆಗಳನ್ನು ತರಿಸಿ ವಾಚನಾಲಯ ಪ್ರಾರಂಭಿಸಿದರು. ಬರುವವರ ಸಂಖ್ಯೆ ಹೆಚ್ಚಾದಂತೆ ಬೇರೆ ಬೇರೆ ಸಾಂಸ್ಕೃತಿಕ ಚಟುವಟಿಕೆಗಳನ್ನು ಪ್ರಾರಂಭಿಸಿ ಅದರ ಕಾರ್ಯವ್ಯಾಪ್ತಿ ವಿಸ್ತರಿಸುತ್ತ ಹೋಯಿತು. ಅದು ಬರಿಯ ಗ್ರಂಥಾಲಯವಾಗಿರದೆ ಅಲ್ಲಿನ ಸಾಂಸ್ಕೃತಿಕ ಚಟುವಟಿಕೆಗಳ ಮೇಲೆ ಪ್ರಭಾವ ಬೀರುವ ಸನ್ನೆಗೋಲಾಗಿ ರೂಪುಗೊಂಡಿತು.

ಸದ್ಯ ಏಳುನೂರರಷ್ಟು ಆಜೀವ ಸದಸ್ಯರನ್ನು ಹಾಗೂ ಒಂದು ಸಾವಿರಕ್ಕೂ ಹೆಚ್ಚು ಸಾಮಾನ್ಯ ಸದಸ್ಯರನ್ನು ಹೊಂದಿರುವ ಗ್ರಂಥಾಲಯಕ್ಕೆ ಸುಮಾರು ಎಪ್ಪತ್ತಕ್ಕೂ ಹೆಚ್ಚು ದಿನ, ವಾರ, ಮಾಸಪತ್ರಿಕೆಗಳನ್ನು ತರಿಸಲಾಗುತ್ತದೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಪ್ರಕಟವಾಗುತ್ತಿದ್ದ ಹಲವು ಪತ್ರಿಕೆಗಳ ರಟ್ಟು ಹಾಕಿದ ಸಂಪುಟಗಳು ಸೇರಿದಂತೆ ಮೂವತ್ತನಾಲ್ಕು ಸಾವಿರದಷ್ಟು ಗ್ರಂಥಗಳಿವೆ.

ಕಿರಿಯ ಸದಸ್ಯರಿಗೆಂದು ಪ್ರಾರಂಭವಾದ 'ಬಾಲ ಸಂಘಂ' ಮಕ್ಕಳಿಗಾಗಿ ಹಾಡು, ಕವಿತಾ ರಚನೆ-ವಾಚನ, ಚರ್ಚಾಕೂಟ – ಮುಂತಾದ ಚಟುವಟಿಕೆಗಳನ್ನು ನಡೆಸತೊಡಗಿತು. 'ಮಹಿಳಾ ಸಂಘಂ' ಮಹಿಳೆಯರಿಗಾಗಿ ಕಸೂತಿ, ಗೃಹಕೈಗಾರಿಕೆ, ಹಾಡುಗಾರಿಕೆ ತರಬೇತಿ ಮುಂತಾದ ಚಟುವಟಿಕೆಗಳನ್ನು ನಡೆಸತೊಡಗಿತು. 'ಕಲಾ ಸಮಿತಿ'ಯದು ಮತ್ತೊಂದು ರೀತಿಯ ಚಟುವಟಿಕೆ. ಅತ್ಯುತ್ತಮ ನಾಟಕವನ್ನು ಆಯ್ಕೆಮಾಡಿ, ಸದಸ್ಯರಿಗೆ ರಂಗ ತರಬೇತು ನೀಡಿ ನಾಟಕಗಳನ್ನು ಪ್ರದರ್ಶಿಸುವುದಲ್ಲದೆ, ನಾಟಕ ಸ್ಪರ್ಧೆಯನ್ನೂ ಏರ್ಪಡಿಸತೊಡಗಿತು. ಈ ನಾಟಕಗಳು ಮಲಯಾಳಂ ರಂಗಭೂಮಿಯ ಮೇಲೆ ಪರಿಣಾಮಕಾರಿ ಪ್ರಭಾವ ಬೀರತೊಡಗಿದವು. ಇಲ್ಲಿ ತರಬೇತಾದ ಬಾಲ ಸಂಘಂ,

# ಇದು ಬರಿಯ ವಾಚನಾಲಯವಲ್ಲೋ ಅಣ್ಣ !




ಪರಂಜ್ಯೋತಿ



ಮಹಿಳಾ ಸಂಘಂ ಮತ್ತು ಕಲಾ ಸಮಿತಿಯ ಸದಸ್ಯರಿಗೆ ಆಕಾಶವಾಣಿಯಲ್ಲಿ ಕಾರ್ಯಕ್ರಮ ನೀಡುವ ಅವಕಾಶಗಳು ತೆರೆದುಕೊಂಡವು! ಈ ಪ್ರತಿಯೊಂದೂ ಒಂದೊಂದು ಪ್ರತ್ಯೇಕ ಸಮಿತಿಯ ಕಾರ್ಯವ್ಯಾಪ್ತಿಯಲ್ಲಿ ಚಟುವಟಿಕೆ ನಡೆಸತೊಡಗಿದವು.

ಕಲಾ ಸಮಿತಿ ಈಡಿಪಸ್ ಮತ್ತು ಒಥೆಲೋಗಳಂಥ ಗ್ರೀಕ್ ಮತ್ತು ಇಂಗ್ಲಿಷ್ ನಾಟಕಗಳನ್ನು ಪರಿಣಾಮಕಾರೀ ರೀತಿಯಲ್ಲಿ ಪ್ರದರ್ಶಿಸಿ ಮೆಚ್ಚಿಗೆ ಗಳಿಸಿತು. ಈ ನಾಟಕಗಳಿಗೆ ಬೇಕಾದ ಪರದೆಗಳನ್ನೂ 'ಬ್ಯಾಕ್‌ಡ್ರಾಪ್'ಗಳನ್ನೂ ಕಲಾತ್ಮಕವಾಗಿ ತಯಾರಿಸಿ, ಅವನ್ನು ಇತರ ನಾಟಕ ವೃಂದಗಳೂ ಬಾಡಿಗೆಗೆ ಪಡೆಯತೊಡಗಿದವು. ಇದಕ್ಕೊಂದು 'ಕರ್ಟನ್ ಸಮಿತಿ' ರೂಪುಗೊಂಡಿತು. ಇತರ ನಾಟಕ ವೃಂದಗಳು ಈ ಸಮಿತಿಯ ಸಲಹೆ ಸಹಕಾರ ಪಡೆದುವಲ್ಲದೆ, ತಮಗೆ ಬೇಕಾದ ಹೊಸರೀತಿಯ ರಂಗಸಜ್ಜಿಕೆಗಳನ್ನು ಈ ಸಮಿತಿಯ ಸಹಕಾರದಿಂದ ತಯಾರಿಸತೊಡಗಿದವು. ಕಲಾ ಸಮಿತಿ ಈಗಲೂ ನಾಟಕ ಪ್ರದರ್ಶನ ಮತ್ತು ಸ್ಪರ್ಧೆ ಚಟುವಟಿಕೆಗಳನ್ನು ನಡೆಸುತ್ತ ಬರುತ್ತಿದೆ.

ದೇಶಪೋಷಿಣಿ... ಕಲಾ ಸಮಿತಿಯಲ್ಲಿ ತರಬೇತಾದ ಅನೇಕರು - ನೆಲ್ಲಿಕೋಡು ಭಾಸ್ಕರನ್, ಕುದುರವಟ್ಟಂ ಪಪ್ಪು, ಕುಂಞಾಂಡಿ, ವಾಸು, ಪ್ರದೀಪ್ - ಈಗ ಮಲಯಾಲಂ ಚಲನಚಿತ್ರ ಕ್ಷೇತ್ರದಲ್ಲಿ ಚಿರಪರಿಚಿತರಾಗಿದ್ದಾರೆ.

ಪ್ರತಿವಾರ ನಡೆಯುವ ನಾಡಿನ ಪ್ರಮುಖ ಸಾಹಿತಿಗಳು, ವಿಚಾರವಾದಿಗಳು, ಇತರ ಸಾಂಸ್ಕೃತಿಕ ವ್ಯಕ್ತಿಗಳು ಅತಿಥಿಗಳಾಗಿ ಭಾಗವಹಿಸುವ ಕಾರ್ಯಕ್ರಮಗಳು 'ದೇಶಪೋಷಿಣಿ'ಯ ಮುಖ್ಯ ಕಾರ್ಯ ಚಟುವಟಿಕೆಗಳಲ್ಲೊಂದು. ಇಲ್ಲಿ ಮಲಯಾಳಂ ಸಾಹಿತ್ಯ, ರಂಗಭೂಮಿ ಸೇರಿದಂತೆ ನಿರೀಶ್ವರವಾದ ಮುಂತಾದ ಗಂಭೀರ ವಿಷಯಗಳ ಬಗ್ಗೆ ಉಪನ್ಯಾಸಗಳು, ಚರ್ಚೆಗಳು ನಡೆಯುತ್ತವೆ. ಬಹಳ ಜನರು ಈ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಾರೆ. ಈ ಕಾರ್ಯಕ್ರಮಗಳ ಕುರಿತು ಜನರ ಆಸಕ್ತಿ ಕಡಿಮೆಯಾಗಿಲ್ಲ.

ಕೇರಳದ ಅತ್ಯುತ್ತಮ ಗ್ರಂಥಾಲಯಗಳಲ್ಲೊಂದೆಂದು ಮನ್ನಣೆ ಪಡೆದಿರುವ ದೇಶಪೋಷಿಣಿ ಸಾರ್ವಜನಿಕ ಗ್ರಂಥಾಲಯಕ್ಕೆ ಕೇರಳ ಗ್ರಂಥ ಸಮಿತಿ ಧನಸಹಾಯ ಮಾಡುತ್ತದೆ. ಇದೀಗ ಗ್ರಂಥಗಳ ಪಟ್ಟಿಯನ್ನು ಆಧುನಿಕೀಕರಿಸುವ ನಿಟ್ಟಿನಲ್ಲಿ ರಾಜಾ ರಾಮಮೋಹನ ರಾಯ್ ಲೈಬ್ರರಿ ಕಂಪ್ಯೂಟರುಗಳನ್ನು ಒದಗಿಸುವ ಮೂಲಕ ಸಹಕರಿಸುತ್ತಿದೆ.

ತನ್ನದೇ ಸಭಾಭವನವನ್ನು ಹೊಂದಿರುವುದಲ್ಲದೇ ಹಳೆಯ ಕಟ್ಟಡದ ಪಕ್ಕದಲ್ಲಿ ಹೊಸ ಕಟ್ಟಡದ ಕೆಲಸ ನಡೆಯುತ್ತಿದೆ.

ಶ್ರೀ ಎಂ. ವಿಶ್ವನಾಥನ್ ಗೌರವ ಗ್ರಂಥಪಾಲಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಸರಕಾರಿ ಹುದ್ದೆಯಿಂದ ನಿವೃತ್ತರಾಗಿರುವ ಇವರು, ಗ್ರಂಥಪಾಲಕ ಹುದ್ದೆ ತಮಗೆ ತೃಪ್ತಿ ನೀಡುವ ಕಾಯಕ ಎನ್ನುತ್ತಾರೆ.

ಸರಕಾರದ ಸಹಾಯಧನದಿಂದ ನಡೆಯುತ್ತಿರುವ, ಆದರೆ ತಮ್ಮ ಅವ್ಯವಸ್ಥೆಯಿಂದ ಓದುಗರ ಆಸಕ್ತಿಯನ್ನೇ ಕೊಲ್ಲುವಂತಿರುವ ಗ್ರಂಥಾಲಯಗಳು 'ದೇಶಪೋಷಿಣಿ'ಯ ಕಾರ್ಯವನ್ನು ಗಮನಿಸಬೇಕು.


**ಪರಂಜ್ಯೋತಿ**
೧೬೪, ೧೧ನೇ ಮುಖ್ಯರಸ್ತೆ, ೩ನೇ ಫೇಸ್
ಪೀಣ್ಯ ಇಂಡಸ್ಟ್ರಿಯಲ್ ಏರಿಯಾ, ಬೆಂಗಳೂರು - ೫೬೦ ೦೫೮

# ಸಾಮಾನ್ಯ ಶಾಲಾ ವ್ಯವಸ್ಥೆ ಎಂಬ ಹಗಲುಗನಸು

ಡಾ|| ಮಹಾಬಲೇಶ್ವರ ರಾವ್



ನಮ್ಮ ಶಿಕ್ಷಣ ವ್ಯವಸ್ಥೆ ರೂಪಿಸಿರುವ ಅಸಮಾನತೆಯನ್ನು ತೊಡೆದುಹಾಕಬೇಕೆಂಬ ಉದ್ದೇಶದಿಂದ ಡಾ|| ಅನಂತಮೂರ್ತಿಯವರು ಇತ್ತೀಚಿನ ಒಂದೆರಡು ವರ್ಷಗಳಲ್ಲಿ ವಿವಿಧ ವೇದಿಕೆಗಳಿಂದ 'ಸಾಮಾನ್ಯ ಶಾಲಾ ಪದ್ಧತಿ' ಮತ್ತು 'ನೆರೆಹೊರೆಯ ಶಾಲೆ' ವ್ಯವಸ್ಥೆ ಜಾರಿಗೆ ಬರಬೇಕೆಂದು ಕರೆಕೊಡುತ್ತಿದ್ದಾರೆ.

ಕೆಲವು ತಿಂಗಳುಗಳ ಹಿಂದೆ ಉಡುಪಿಯಲ್ಲಿ ನಡೆದ 'ಅನಂತಮೂರ್ತಿ ೭೫: ಭಾರತದ ಪರಿಕಲ್ಪನೆ' ಮಹಾಕಾರ್ಯಕ್ರಮದಲ್ಲೂ ಅವರು ತಮ್ಮ ವಿಚಾರಲಹರಿಯನ್ನು ಹರಿದುಬಿಟ್ಟು ''ಬೇರೆ ಬೇರೆ ಜಾತಿ, ಮತ, ಭಾಷೆ ಹಾಗೂ ಆರ್ಥಿಕ ಸ್ಥಿತಿಗತಿಗಳ ಮಕ್ಕಳು ಒಂದೇ ಶಾಲೆಯಲ್ಲಿ ತಮ್ಮ ಅನುಭವಗಳನ್ನು ಹಂಚಿಕೊಂಡು ಒಟ್ಟಿಗೇ ಬೆಳೆಯುವಂಥ 'ಸಾಮಾನ್ಯ ಶಾಲಾ ವ್ಯವಸ್ಥೆ' ಮತ್ತು ಅದಕ್ಕೆ ಪೂರಕವಾದ 'ನೆರೆಹೊರೆಯ ಶಾಲೆ' ನಮಗೆ ಬೇಕು. ನಾನು ಶಾಲೆಗೆ ಹೋಗುತ್ತಿದ್ದಾಗ 'ಮೈಲಿಗೆ' ಆಗದೆ ಮನೆಗೇ ಬರ್‍ತಾ ಇರ್‍ಲಿಲ್ಲ. ಯಾಕಂದ್ರೆ ನಾನು ಎಲ್ಲ ಜಾತಿ ಮತದವರು ಒಟ್ಟಿಗೆ ಓದ್ತಾ ಇದ್ದ ಊರಿನ ಶಾಲೆಗೇ ಹೋಗ್ತಾ ಇದ್ದೆ. ಕನ್ನಡ ಉಳೀಬೇಕು ಅಂದ್ರೆ ಸಾಮಾನ್ಯ ಶಾಲಾ ವ್ಯವಸ್ಥೆ ಜಾರಿಗೆ ಬರ್‍ಬೇಕು. ಅದಕ್ಕಾಗಿ ನಾವು ಹೋರಾಡಬೇಕು. ಜನ ಅಂಥ ಶಾಲೆಗಳನ್ನು ಒದಗಿಸಿ ಅಂತ ಬೇಡಿಕೆ ಸಲ್ಲಿಸಬೇಕು; ಇಲ್ಲದೆ ಹೋದ್ರೆ ಈ ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ವಿದ್ಯಾಭ್ಯಾಸ ಮಾಡೋ ಹುಡುಗ್ರು ಕುವೆಂಪು, ಕಾರಂತ, ಬೇಂದ್ರೆಯನ್ನ ಓದೋಲ್ಲ'' ಎಂಬರ್ಥ ಬರುವ ಮಾತುಗಳನ್ನಾಡಿದರು.

ಶೈಕ್ಷಣಿಕ ಅಸಮಾನತೆಯನ್ನು ತೊಡೆದುಹಾಕಬೇಕೆಂಬ ಸಮಾಜವಾದಿ ನಿಲುವು ಅರ್ಥಪೂರ್ಣವಾದದ್ದೇ. ಆದರೆ ವಿಚಿತ್ರದ ಮತ್ತು ಬೇಸರದ ಸಂಗತಿ ಏನೆಂದರೆ ನಮ್ಮ ಬಲುದೊಡ್ಡ ಸಾಹಿತಿಗಳನ್ನು ಅವರ ಅಭಿಮಾನಿಗಳು ಹಾಗೂ ಹಿಂಬಾಲಕರು 'ಸರ್ವಜ್ಞ'ರೆಂದು ತಿಳಿದು ಅವರು ಹೇಳಿದ್ದನ್ನು ಪರಮಾರ್ಥವೆಂದು ಭಾವಿಸುವುದು. ಅನಂತಮೂರ್ತಿಯವರಂಥ ಹಿರಿಯ ಸಾಹಿತಿಗಳು ತಮ್ಮ ಮಕ್ಕಳು, ಮೊಮ್ಮಕ್ಕಳು ಯಾವ ಶಾಲಾವ್ಯವಸ್ಥೆಯಲ್ಲಿ ಓದಿದ್ದು, ಓದುತ್ತಿರುವುದು ಎಂಬುದನ್ನು ಗಮನಿಸಬೇಡವೆ? ತಾವು ಏನನ್ನು ಪ್ರತಿಪಾದಿಸುತ್ತಿದ್ದೇವೋ ಅದು ತಮ್ಮ ಮನೆಯಿಂದ ಆರಂಭವಾಗಬೇಕು ಎಂಬ ಪ್ರಜ್ಞೆ ಗಾಂಧಿವಾದವನ್ನು ಪ್ರತಿಪಾದಿಸುವವರಿಗೆ ಬೇಡವೆ? ತಾವು ಪ್ರತಿಪಾದಿಸುತ್ತಿರುವುದು ಇದೀಗತಾನೆ ತಮ್ಮ ಮಸ್ತಿಷ್ಕದಿಂದ ಅಗೆದುತೆಗೆದ ಮಿರುಮಿರುಗುವ ಚಿನ್ನವೋ ಅಥವಾ ಶೈಕ್ಷಣಿಕ ಚರಿತ್ರೆಯಲ್ಲಿ ಈ ಬಗ್ಗೆ ಏನಾದರೂ ವಾಗ್ವಾದಗಳು ನಡೆದಿವೆಯೋ ಎಂಬುದನ್ನು ಪರಿಶೀಲಿಸಿ ಮಾತನಾಡಬೇಡವೆ?

ಸಾಮಾನ್ಯ ಶಾಲಾ ಪದ್ಧತಿ ಬಗ್ಗೆ ಮಾತನಾಡುವಾಗ ಅನಂತಮೂರ್ತಿಯವರು ಅದರ ಇತಿಹಾಸದ ಬಗ್ಗೆ ಏನನ್ನೂ ಹೇಳುವುದಿಲ್ಲ. ಅದು ಈ ನೆಲದಲ್ಲಿ ಯಾಕೆ ಸಫಲವಾಗಲಿಲ್ಲ ಎಂಬುದನ್ನೂ ಪರಿಶೀಲಿಸುವುದಿಲ್ಲ. ಅವರ ವಾದಸರಣಿಯನ್ನು ಪರಿಶೀಲಿಸಿ ಮತ್ತೆ ಚರಿತ್ರೆಯ ಕಡೆ ಮೊಗಮಾಡಲು ಇಚ್ಛಿಸುತ್ತೇನೆ. ಸಾಮಾನ್ಯ ಶಾಲಾ ಪದ್ಧತಿ ಅನುಷ್ಠಾನದ ಬಗ್ಗೆ ಜನ ಹೋರಾಡಬೇಕು ಎಂದು ಅನಂತಮೂರ್ತಿಯವರು ಕರೆಕೊಡುತ್ತಿರುವುದು ತೀರ ಈಚಿನ ದಿನಗಳಲ್ಲಿ ''ಊರೆಲ್ಲ ಸೂರೆಹೋದ ಮೇಲೆ ದಿಡ್ಡಿ ಬಾಗಿಲು ಹಾಕಿದರು'' ಎಂಬ ಹಾಗಾಗಿದೆ. ಎಸ್.ಎಂ. ಕೃಷ್ಣ ಸರಕಾರ ಶಿಕ್ಷಣ ಉದಾರೀಕರಣ ನೀತಿ ಅನುಸರಿಸಿ ಕಂಡಕಂಡವರಿಗೆಲ್ಲ ಕೇಂದ್ರೀಯ ಪಠ್ಯಕ್ರಮ, ಅಂತಾರಾಷ್ಟ್ರೀಯ ಪಠ್ಯಕ್ರಮ – ಹೀಗೆ ಯಾವುದೇ ಬಗೆಯ ಆಂಗ್ಲಮಾಧ್ಯಮ ಶಾಲೆಗಳನ್ನು ತೆರೆಯಲು ಅವಕಾಶ ಮಾಡಿಕೊಟ್ಟಿದ್ದರಿಂದ ಹಳ್ಳಿಹಳ್ಳಿಗಳಲ್ಲಿ ಇಂಗ್ಲಿಷ್ ಶಾಲೆಗಳು ಅಣಬೆಗಳಂತೆ ತಲೆಯೆತ್ತಿವೆ. ಪ್ರತಿ ನಿಮಿಷಕ್ಕೊಂದು ಶಾಲೆ ಹುಟ್ಟಿಕೊಳ್ಳುತ್ತಿದೆ! ಈಗ ಈ ಪ್ರವಾಹವನ್ನು ತಡೆಗಟ್ಟುವುದು ಹೇಗೆ?

ತೀರ ಈಚೆಗೆ ಸರಕಾರ ಆಂಗ್ಲ ಮಾಧ್ಯಮ ಶಾಲೆಗಳ ಮೇಲೆ ಗದಾಪ್ರಹಾರ ಮಾಡಿ ಪ್ರಾಥಮಿಕ ಹಂತದಲ್ಲಿ ಕನ್ನಡ ಕಡ್ಡಾಯ ಮಾಡಬೇಕು ಎಂದು ನಿಬಂಧನೆ ಹೇರಿದೆ. ಆದರೆ ಶಾಲೆಗಳಲ್ಲಿ ತೆರೆಯ ಮರೆಯ ವ್ಯವಹಾರ ನಡೆದಿದೆ. ಪ್ರದರ್ಶನಕ್ಕೆ ಕನ್ನಡ; ಅಂತರಂಗದಲ್ಲಿ ಆಂಗ್ಲ ಮಾಧ್ಯಮದಲ್ಲಿ ಬೋಧನೆ ಸಾಗಿದೆ! ಸರಕಾರ ಸರಕಾರಿ ಶಾಲೆಗಳನ್ನು ಸಾಕಷ್ಟು ಸುಧಾರಣೆ ಮಾಡಿದೆ. ವಿವಿಧ ಪ್ರೋತ್ಸಾಹನ ಯೋಜನೆಗಳನ್ನು ಜಾರಿಗೆ ತಂದಿದೆ. ಹೀಗಿದ್ದೂ ಇತ್ತೀಚಿನ ವರದಿಯೊಂದರ ಪ್ರಕಾರ ಸರಕಾರಿ ಹಾಗೂ ಅನುದಾನಿತ ಶಾಲೆಗಳಲ್ಲಿ ವರ್ಷೇ ವರ್ಷೇ ಮಕ್ಕಳ ದಾಖಲಾತಿ ಗಣನೀಯವಾಗಿ ಕುಸಿಯುತ್ತಿದೆ. ಅನುದಾನರಹಿತ ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ದಾಖಲಾತಿ ಒಂದೇ ಸಮನೆ ಏರುತ್ತಿದೆ!

ಇಷ್ಟಕ್ಕೂ ಆಂಗ್ಲ ಮಾಧ್ಯಮ ಶಾಲೆಗಳು ಬರೀ ಪ್ರತಿಷ್ಠಿತರ ಶ್ರೀಮಂತರ ಶಾಲೆಗಳೆ? ಅಲ್ಲಿ ಬಡಬಗ್ಗರ ಮಕ್ಕಳು ಸಾಕಷ್ಟು ಪ್ರಮಾಣದಲ್ಲಿ ಓದುತ್ತಿಲ್ಲವೆ? ಈಗ ಪರಿಸ್ಥಿತಿ ಕೈಮೀರಿ ಹೋಗಿದೆ. ಈಗ ಪ್ರಲಾಪಿಸುವುದರಿಂದ ಫಲವಿಲ್ಲ. ಕೃಷ್ಣ ಸರಕಾರ ಹಾಗೂ ಅದಕ್ಕೂ ಹಿಂದಿನ ಸರಕಾರಗಳು ಎಗ್ಗಿಲ್ಲದೆ ಆಂಗ್ಲ ಮಾಧ್ಯಮ ಶಾಲೆಗಳಿಗೆ ಪರವಾನಗಿ ನೀಡುತ್ತಿದ್ದಾಗ ಅನಂತಮೂರ್ತಿಯವರು ಏನು ಮಾಡುತ್ತಿದ್ದರು? ಇಪ್ಪತ್ತು ವರ್ಷಗಳ ಹಿಂದೆ

ಅವರು ಇದನ್ನೊಂದು ಹೋರಾಟದ ವಿಷಯ ಮಾಡಿಕೊಂಡಿದ್ದರೆ ಪರಿಣಾಮ ಬೇರೆ ಆಗುತ್ತಿತ್ತೋ ಏನೋ. ಸದ್ಯದ ಕೈಮೀರಿದ ಸ್ಥಿತಿಯಲ್ಲಿ ಇದೊಂದು ಅರಣ್ಯರೋದನ.

ಇಂದಿನ ಬಹಳಷ್ಟು ಜನರಿಗೆ ಸರಕಾರಿ ಶಾಲೆ, ಕನ್ನಡ ಮಾಧ್ಯಮ ಶಾಲೆಗಳು ಬೇಡ. ಜಗತ್ತು ಸ್ಪರ್ಧಾತ್ಮಕವಾಗಿದೆ ; ಸಾಫ್ಟ್‌ವೇರ್ ತಂತ್ರಜ್ಞರಾಗಲು ಆಂಗ್ಲ ಮಾಧ್ಯಮವೇ ಏಣಿ ಮೆಟ್ಟಿಲು ಎಂದು ನಂಬಿದ ಅವರು ತಮ್ಮ ಮಕ್ಕಳನ್ನು ತಮ್ಮ ಬಡಾವಣೆಯಲ್ಲೇ ಇರುವ ಶಾಲೆಗೆ ಸೇರಿಸದೆ ವಾಹನ ಸೌಕರ್ಯ ಒದಗಿಸುವ ಕೊಂಚ ದೂರದ 'ಪ್ರತಿಷ್ಠಿತ' ಆಂಗ್ಲ ಮಾಧ್ಯಮ ಶಾಲೆಗೇ ದಾಖಲಿಸುತ್ತಾರೆ. ಜನರ ಬೇಡಿಕೆಗಳೇ ಬದಲಾಗಿವೆ. ಒಂದನೆಯ ತರಗತಿಯಿಂದ ಇಂಗ್ಲಿಷ್ ಕಲಿಸಲೇಬೇಕು ಎಂಬ ಒತ್ತಾಯ ಈ ಹಿನ್ನೆಲೆಯಿಂದ ಬಂದಿದೆ. ಇಷ್ಟು ಮಾಡಿದರೂ ಜನರಿಗೆ ಸಾಲದು ; ಆಂಗ್ಲ ಮಾಧ್ಯಮವೇ ಬೇಕು. ಅದೇ 'ಸಂಕಷ್ಟ ಹರಣ' ಸಾಧನ ಎಂದು ಭಾವಿಸಿದ ಜನರ ಮೌಢ್ಯ ಪರಿಹಾರ ಹೇಗೆ ಸಾಧ್ಯ ? ಸಾಹಿತಿಗಳು, ಲೇಖಕರು ಹಾಗೂ ಪ್ರತಿಷ್ಠಿತರಿಗೆ ಆಂಗ್ಲ ಮಾಧ್ಯಮ ಬೇಕು ; ಬಡವರ ಹಾಗೂ ಸಾಮಾನ್ಯರ ಮಕ್ಕಳಿಗೆ ಅದು ಬೇಡ ಎಂದರೆ ಕೇಳುವವರು ಯಾರು ? ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಓದುವವರು ಕಾರಂತ, ಕುವೆಂಪು ಓದೋಲ್ಲ ಸರಿ. ಕನ್ನಡ ಮಾಧ್ಯಮದಲ್ಲೇ ಓದಿ ಕನ್ನಡ ಎಂ.ಎ. ಮಾಡಿದ ಎಷ್ಟು ಮಂದಿ ಇವರನ್ನು ಚೆನ್ನಾಗಿ ಓದಿಕೊಂಡಿದ್ದಾರೆ ? ಪಾಠಪಟ್ಟಿಯಲ್ಲಿ ಇರುವಷ್ಟನ್ನು ಪರೀಕ್ಷೆಗಾಗಿ ಓದುವುದು ಬಿಟ್ಟರೆ ಮತ್ತೇನೂ ಕೇಳಬೇಡಿ. ಸಾಹಿತ್ಯದ ಮತ್ತು ಓದಿನ ಗೀಳು ಶೇ. ೧-೨ ಜನರಿಗೆ ಮಾತ್ರ. ಉಳಿದವರಿಗೆ ಕ್ರಿಕೆಟ್, ಸಿನೆಮಾ, ರಾಜಕಾರಣ, ಶೇರು ಮಾರುಕಟ್ಟೆಯ ಹುಚ್ಚು. ಸದ್ಯದ ಗ್ರಾಮೀಣ ಹಾಗೂ ಅರೆಪಟ್ಟಣಗಳ ಆಂಗ್ಲ ಮಾಧ್ಯಮ ಶಾಲೆಗಳು ಕೇವಲ ಶ್ರೀಮಂತರಿಗಷ್ಟೇ ಅಲ್ಲ; ತರಕಾರಿ ಮಾರುವವರ, ಹೂ ಮಾರುವವರ, ಕಾಫಿ ಲೋಟ ತೊಳೆಯುವವರ, ರಿಕ್ಷಾಚಾಲಕರ – ಹೀಗೆ ವಿವಿಧ ಜನವರ್ಗಗಳ ಮಕ್ಕಳು ಈ ಶಾಲೆಗಳಲ್ಲಿ ದುಬಾರಿ ಶುಲ್ಕ ತೆತ್ತು ಓದುತ್ತಿದ್ದಾರೆ. ಭಾರಿ ಶ್ರೀಮಂತರ ಮಕ್ಕಳು ಈಗೀಗ 'ಅಂತಾರಾಷ್ಟ್ರೀಯ ಶಾಲೆ'ಗಳಲ್ಲಿ ಏಸಿ ಕೊಠಡಿಗಳಲ್ಲಿ ಆರಾಮವಾಗಿದ್ದಾರೆ ! ಆದುದರಿಂದ ಈಗೀಗ ಆಂಗ್ಲ ಮಾಧ್ಯಮ ಶಾಲೆಗಳಲ್ಲೂ 'ಮೈಲಿಗೆ' ಅನುಭವಿಸಬಹುದು.

ಹಾಗೆ ನೋಡಿದರೆ 'ಮೈಲಿಗೆ' ಎನ್ನುವ ಕಲ್ಪನೆಯೇ ಈಗೀಗ ನಾಶವಾಗುತ್ತಿದೆ. ಅನುಭವಗಳು ತೆಳುವಾಗುತ್ತಿವೆ ; ಏಕರೂಪವಾಗುತ್ತಿವೆ. ಪಕ್ಕದಲ್ಲಿ ಕುಳಿತ ಸಹಪಾಠಿಯ ಜಾತಿಯನ್ನು ಯಾರೂ ವಿಚಾರಿಸುವುದೂ ಇಲ್ಲ. ಹೆಸರಿನಿಂದ ಅದು ತಿಳಿಯುವುದೂ ಇಲ್ಲ. ಈಗಿನ ಹುಡುಗರಿಗೆ ಅದು ಬೇಕಾಗಿಯೂ ಇಲ್ಲ. ಈಗಿನ ಹುಡುಗರು ಪುಳಿಯೋಗರೆ, ಪೊಂಗಲ್, ಬಿಸಿಬೇಳೆ ಬಾತ್, ಇಡ್ಲಿ ವಡೆ ದೂರವಿಟ್ಟು ಪಿಜ್ಜಾ, ಚಾಟ್, ನೂಡಲ್ಸ್ ಇತ್ಯಾದಿಗಳನ್ನೇ ಮಧ್ಯಾಹ್ನ ಒಟ್ಟಿಗೆ ಕುಳಿತು ಮೆಲ್ಲುತ್ತಾರೆ ! ನಮಗೆ ನಮ್ಮದಲ್ಲದ ಅನುಭವ (ಅನಂತಮೂರ್ತಿ ಅವರ ಬ್ರಾಹ್ಮಣ-ಶೂದ್ರ) ಬೇಕು ಎಂದು ಅನ್ನಿಸುತ್ತಿಲ್ಲ. ಅನುಭವಗಳೆಲ್ಲಾ ಏಕರೂಪವಾಗಿಬಿಟ್ಟಿರುವುದೇ ಕಾರಣ. ಸಾಮಾನ್ಯಶಾಲಾ ವ್ಯವಸ್ಥೆ ಸದ್ಯ ವೈವಿಧ್ಯಮಯ ಅನುಭವ ಒದಗಿಸಲಾರದು.

ಅನಂತಮೂರ್ತಿಯವರು ಹಿಂದಣ ಹೆಜ್ಜೆ ಗಮನಿಸದೆ ತೀರ ತಡವಾಗಿ ಸಾಮಾನ್ಯ ಶಾಲಾ ಪದ್ಧತಿಯನ್ನು ಪ್ರತಿಪಾದಿಸುತ್ತಿದ್ದಾರೇನೋ ಅನ್ನಿಸುತ್ತಿದೆ. ಏಕೆಂದರೆ ೧೯೬೪-೬೬ರ ಕೊಠಾರಿ ಶಿಕ್ಷಣ ಆಯೋಗ ಆಗ ದೇಶದಲ್ಲಿದ್ದ ಶೈಕ್ಷಣಿಕ ಅಸಮಾನತೆ, ಪ್ರತ್ಯೇಕತೆ ಮತ್ತು ತಾರತಮ್ಯವನ್ನು ಗಮನಿಸಿ 'ಸಾಮಾನ್ಯ ಶಾಲಾ ಪದ್ಧತಿ'ಯನ್ನು, ನೆರೆಹೊರೆಯ ಶಾಲಾ ಪರಿಕಲ್ಪನೆಯನ್ನು, ಶಿಫಾರಸು ಮಾಡಿತ್ತು. ಪಾರ್ಲಿಮೆಂಟರಿ ಸಮಿತಿ ಈ ಶಿಫಾರಸುಗಳನ್ನು ಪರಿಶೀಲಿಸಿ ದೇಶಾದ್ಯಂತ ಅನುಷ್ಠಾನಗೊಳಿಸಬೇಕೆಂದು ಸೂಚಿಸಿತು. ೧೯೬೮ರ ರಾಷ್ಟ್ರೀಯ



ಸಾಮಾನ್ಯ ಶಾಲಾ ಪದ್ಧತಿ, ನೆರೆಹೊರೆಯ ಶಾಲೆ - ಈಗ ಒಂದು ಆದರ್ಶ ಮಾತ್ರ. ನಾವೀಗ ಹಿಂತಿರುಗಿ ಬರಲಾಗದಷ್ಟು ದಾರಿತಪ್ಪಿ ಮುಂದೆ ಬಂದುಬಿಟ್ಟಿದ್ದೇವೆ ! ಇಂಥ ಸಂದರ್ಭದಲ್ಲಿ ಸಾಮಾನ್ಯಶಾಲಾ ವ್ಯವಸ್ಥೆಯನ್ನು ಜಾರಿಗೊಳಿಸುವುದು ದುಸ್ತರ. ವಿಶ್ವಬ್ಯಾಂಕ್‌ನ ಸಾಲ ಪಡೆದು ಕೋಟಿಗಟ್ಟಲೆ ರೂಪಾಯಿ ವ್ಯಯಮಾಡಿದರೂ 'ಸರ್ವ ಶಿಕ್ಷ ಅಭಿಯಾನ' ವಿಫಲವಾಗುತ್ತಲೇ ಇದೆ ! ಅದರ ಗುರಿ ದಿನಾಂಕಗಳು ೨೦೦೦, ೨೦೦೫, ೨೦೦೭– ಈಗ ೨೦೧೦ಕ್ಕೆ ಮುಂದುವರಿಯುತ್ತಲೇ ಇದೆ. ೬-೧೪ರ ಪ್ರಾಯದ ಸಹಸ್ರಾರು ಮಕ್ಕಳು ಸರ್ವ ಶಿಕ್ಷ ಅಭಿಯಾನದ ಹೊರಗೆ ಖಾಸಗಿ ಆಂಗ್ಲ ಮಾಧ್ಯಮ ಶಾಲೆಗಳಲ್ಲಿದ್ದರೆ ಬೀದಿ ಮಕ್ಕಳು, ಕೊಂಪೆ ಕೊಳೆಗೇರಿ ಮಕ್ಕಳು, ವಲಸೆ ಕಾರ್ಮಿಕರ ಮಕ್ಕಳು 'ಸ್ಕೂಲ್ ಚಲೇ ಹಂ' ಎಂದು ರೇಡಿಯೊ ಹಾಡುತ್ತಲೇ ಇದ್ದರೂ ಶಾಲಾ ವ್ಯಾಪ್ತಿಯಿಂದ ಹೊರಗೇ ಇದ್ದಾರೆ ! ಮಕ್ಕಳೇ ಇಲ್ಲದ, ಶಿಕ್ಷಕರೇ ಇಲ್ಲದ ಸರಕಾರಿ ಶಾಲೆಗಳ ಸ್ಥಿತಿ ಪತ್ರಿಕೆಗಳಲ್ಲಿ ಪ್ರಕಟವಾಗಿದೆ.

ಶಿಕ್ಷಣ ನೀತಿಯೂ ಇದನ್ನು ಎತ್ತಿಹಿಡಿಯಿತು. ಆದರೆ ರಾಜಕೀಯ ಸಂಕಲ್ಪ ಬಲ ರಾಹಿತ್ಯ, ಹಣಕಾಸಿನ ಕೊರತೆ, ಭಿನ್ನಾಭಿಪ್ರಾಯಗಳ ದೆಸೆಯಿಂದಾಗಿ ಈ ಶಿಫಾರಸು ಮೂಲೆಗುಂಪಾಯಿತು. ೧೯೮೦ರಲ್ಲಿ ಪ್ರಕಟವಾದ ದಿ। ಜೆ.ಪಿ.ನಾಯಕ್ ಅವರ ಕೃತಿ ('ಶಿಕ್ಷಣ ಆಯೋಗ: ಪೂರ್ವೋತ್ತರ' – ಅನು : ಮಹಾಬಲೇಶ್ವರರಾವ್, ೧೯೮೭) ಯಲ್ಲಿ ಸಾಮಾನ್ಯ ಶಾಲಾ ವ್ಯವಸ್ಥೆ, ನೆರೆಹೊರೆಯ ಶಾಲೆ, ಪಬ್ಲಿಕ್ ಸ್ಕೂಲುಗಳ ಬಗೆಗಿನ ಬೇಡಿಕೆ, ವಾದ-ವಿವಾದ ಇತ್ಯಾದಿಗಳ ಬಗ್ಗೆ ವಿವರವಾದ ಚರ್ಚೆ, ಮಾಹಿತಿ ಇದೆ. ೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿ ಜವಾಹರ್ ನವೋದಯ ಶಾಲೆಗಳನ್ನು ಗ್ರಾಮೀಣ ಪ್ರತಿಭಾವಂತ ಮಕ್ಕಳಿಗಾಗಿ ಆರಂಭಿಸಲು ಶಿಫಾರಸುಮಾಡಿತು. ಕರ್ನಾಟಕ ಸರಕಾರ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳನ್ನು ಸ್ಥಾಪಿಸಿದೆ. ಈ ನಡುವೆ ಅನಂತಮೂರ್ತಿ ಅವರೇ 'ಕುವೆಂಪು ಮಾದರಿ ಶಾಲೆ'ಗಳನ್ನು ಜಿಲ್ಲೆಗೊಂದರಂತೆ ಪ್ರತಿಭಾವಂತರಿಗಾಗಿ ಆರಂಭಿಸಿ ಎಂದು ಸರಕಾರವನ್ನು ಒತ್ತಾಯಿಸಿದ್ದರು !

ವೈಯಕ್ತಿಕವಾಗಿ ನನಗನ್ನಿಸುವುದೇನೆಂದರೆ – ಸಾಮಾನ್ಯ ಶಾಲಾ ಪದ್ಧತಿ, ನೆರೆಹೊರೆಯ ಶಾಲೆ – ಈಗ ಒಂದು ಆದರ್ಶ ಮಾತ್ರ. ನಾವೀಗ ಹಿಂತಿರುಗಿ ಬರಲಾಗದಷ್ಟು ದಾರಿತಪ್ಪಿ ಮುಂದೆ ಬಂದುಬಿಟ್ಟಿದ್ದೇವೆ ! ಇಂಥ ಸಂದರ್ಭದಲ್ಲಿ ಸಾಮಾನ್ಯಶಾಲಾ ವ್ಯವಸ್ಥೆಯನ್ನು ಜಾರಿಗೊಳಿಸುವುದು ದುಸ್ತರ. ವಿಶ್ವಬ್ಯಾಂಕ್‌ನ ಸಾಲ ಪಡೆದು ಕೋಟಿಗಟ್ಟಲೆ ರೂಪಾಯಿ ವ್ಯಯಮಾಡಿದರೂ 'ಸರ್ವ ಶಿಕ್ಷ ಅಭಿಯಾನ' ವಿಫಲವಾಗುತ್ತಲೇ ಇದೆ ! ಅದರ ಗುರಿ ದಿನಾಂಕಗಳು ೨೦೦೦, ೨೦೦೫, ೨೦೦೭– ಈಗ ೨೦೧೦ಕ್ಕೆ ಮುಂದುವರಿಯುತ್ತಲೇ ಇದೆ. ೬-೧೪ರ ಪ್ರಾಯದ ಸಹಸ್ರಾರು ಮಕ್ಕಳು ಸರ್ವ ಶಿಕ್ಷ ಅಭಿಯಾನದ ಹೊರಗೆ ಖಾಸಗಿ ಆಂಗ್ಲ ಮಾಧ್ಯಮ ಶಾಲೆಗಳಲ್ಲಿದ್ದರೆ, ಬೀದಿ ಮಕ್ಕಳು, ಕೊಂಪೆ ಕೊಳೆಗೇರಿ ಮಕ್ಕಳು, ವಲಸೆ ಕಾರ್ಮಿಕರ ಮಕ್ಕಳು 'ಸ್ಕೂಲ್ ಚಲೇ ಹಂ' ಎಂದು ರೇಡಿಯೊ ಹಾಡುತ್ತಲೇ ಇದ್ದರೂ ಶಾಲಾ ವ್ಯಾಪ್ತಿಯಿಂದ ಹೊರಗೇ ಇದ್ದಾರೆ ! ಮಕ್ಕಳೇ ಇಲ್ಲದ, ಶಿಕ್ಷಕರೇ ಇಲ್ಲದ ಸರಕಾರಿ ಶಾಲೆಗಳ ಸ್ಥಿತಿ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಹೀಗಾಗಿ 'ಸಾಮಾನ್ಯ ಶಾಲಾ ವ್ಯವಸ್ಥೆ' ಪರಿಕಲ್ಪನೆಯನ್ನು ನಾವು ಬದಲಾಯಿಸಿಕೊಳ್ಳಬೇಕಾಗಿದೆ. ಈಗ ನಮ್ಮಲ್ಲಿ ಹೆಚ್ಚುತ್ತಲೇ ಇರುವ ಆಂಗ್ಲ ಮಾಧ್ಯಮ ಶಾಲೆಗಳನ್ನೇ ಸಾಮಾನ್ಯಶಾಲೆಗಳೆಂದು ಭಾವಿಸಿ ಈ ಶಾಲೆಗಳಲ್ಲಿ ಕನ್ನಡದ ಪರಿಣಾಮಕಾರಿ ಕಲಿಕೆ ಬೋಧನೆಯನ್ನು ಕಡ್ಡಾಯಗೊಳಿಸುವುದು, ಇಂಗ್ಲಿಷ್ ಹಾಗೂ ವಿಜ್ಞಾನ ಬೋಧನೆಯ ಮಟ್ಟವನ್ನು ಉತ್ತಮಪಡಿಸುವುದು ಮತ್ತು ಇಂಥ ಶಾಲೆಗಳು ಹೆತ್ತವರನ್ನು ಹಾಗೂ ಮಕ್ಕಳನ್ನು ಶೋಷಣೆ ಮಾಡದಂತೆ ನೋಡಿಕೊಳ್ಳುವುದು ಇಂಥ ಒಂದು ಆಂದೋಲನ ಹೆಚ್ಚು ಪ್ರಸ್ತುತ ಎಂದು ನಾನು ಭಾವಿಸಿದ್ದೇನೆ.

**ಡಾ।। ಮಹಾಬಲೇಶ್ವರ ರಾವ್**
ಪ್ರಾಚಾರ್ಯರು, ಡಾ।। ಟಿ. ಎಂ. ಎ. ಪೈ ಶಿಕ್ಷಣ ಕಾಲೇಜು, ಉಡುಪಿ - ೫೭೬೧೦೨

ವಸಾಹತುಶಾಹಿ ಅನುಭವದ ಅನಂತರದ, ಸ್ವಾತಂತ್ರ್ಯಾನಂತರದ ಕಾಲಘಟ್ಟವನ್ನು ವಸಾಹತೋತ್ತರ ಕಾಲಘಟ್ಟವೆಂದು ಗುರುತಿಸುತ್ತೇವೆ. ವಸಾಹತೋತ್ತರ ಸಂದರ್ಭದಲ್ಲಿ ದೇಶೀಯತೆ, ವಿಸ್ಮೃತಿ, ಪೌರಾತ್ಯವಾದ ಮುಂತಾದ ಪರಿಕಲ್ಪನೆಗಳನ್ನು ಚಾಲ್ತಿಗೆ ತರಲಾಯಿತು. ದೇಶೀಯತೆಯೆಂದರೆ ಅದು ಒಂದು ಪರ್ಯಾಯವಲ್ಲ, ಅದಕ್ಕೆ ಬಹುಮುಖಿಯಾದ ಜಾಗತಿಕ ದೃಷ್ಟಿಕೋನವೂ ಬೇಕಾಗುತ್ತದೆಯೆಂದು ದೇಶೀಯತೆಯ ಬಗ್ಗೆ ಮಾತಾಡಿದ ವಿದ್ವಾಂಸರು ಚರ್ಚಿಸಿದರು.

ಹಾಗೆಯೇ ವಸಾಹತೋತ್ತರ ಕಾಲದ ವಿಮರ್ಶಕರು ಅನೇಕ ಸಂದರ್ಭದಲ್ಲಿ ವಸಾಹತೋತ್ತರ ರಾಷ್ಟ್ರೀಯತೆಯ ಬಗೆಗೆ ಮಾತಾಡಿದರು. ಸೈಯಿದನ ಪ್ರಕಾರ ವಸಾಹತೋತ್ತರ ರಾಷ್ಟ್ರೀಯತೆಯು ಕೇವಲ ಒಂದು ಪರ್ಯಾಯ ಪದ ಮಾತ್ರ. ಆದರೆ ಇದಕ್ಕೆ ಬಹುಮುಖಿಯಾದ ಜಾಗತಿಕ ದೃಷ್ಟಿಕೋನ ಬೇಕಾಗುತ್ತದೆ.

ವಸಾಹತೋತ್ತರ ರಾಷ್ಟ್ರೀಯತೆಯ ಚರ್ಚೆಯ ಸಂದರ್ಭದಲ್ಲಿ ಒಂದು ಪ್ರಮುಖ ಅಂಶವನ್ನು ಗಮನಿಸಬೇಕು. ವಸಾಹತುಶಾಹಿ ಸಂದರ್ಭದಲ್ಲಿ ಏನಾಗಿದೆ : ಅದರ ಪರಿಣಾಮವೇನು ಎಂಬುದರ ಬಗ್ಗೆ ಒಂದು ನೀಲಿನಕ್ಷೆಯು ನಮಗೆ ಬೇಕಾಗುತ್ತದೆ. ಅದರ ಅರಿವು ತುಂಬಾ ಮುಖ್ಯವಾದುದು. ವಸಾಹತುಶಾಹಿ ಅನುಭವದ ಸಂದರ್ಭದಲ್ಲಿ ಯೂರೋಪ್ ಮತ್ತು ಭಾರತಕ್ಕೆ ನಿಶ್ಚಿತ ವರ್ಗೀಕರಣವಿತ್ತು. ಆದರೆ ವಸಾಹತೋತ್ತರ ಸಂದರ್ಭದಲ್ಲಿ ಯೂರೋಪ್-ಪಶ್ಚಿಮ-ಪ್ರಭುತ್ವ ಭಾರತವೆಂದರೆ ಪೂರ್ವ-ಬಹು ಸಂಸ್ಕೃತಿ – ಪಶ್ಚಿಮ ವಿರೋಧಿ ಎಂಬಂಥ ವರ್ಗೀಕರಣವನ್ನು ಮಾಡಲು ಬರುವುದಿಲ್ಲ. ಹಾಗೆ ನೋಡುವುದಿದ್ದರೆ ಅಮೆರಿಕಾದಂಥ ಪ್ರಬಲ ರಾಷ್ಟ್ರಗಳು ತೃತೀಯ ಜಗತ್ತಿನ ಮೇಲೆ ನಡೆಸುತ್ತಿರುವ ಹಿಂಸೆಗಳಿಗೆ ಒಂದು ನಿರ್ದಿಷ್ಟ ರೂಪ ಮತ್ತು ಚಹರೆಗಳಲ್ಲಿ ಮಾತ್ರ ಸಾಧ್ಯ. ಜಾಗತಿಕ ಹಿಂಸೆಯೊಂದಿಗೆ : ಜಾಗತಿಕವಾದ ಕೋಮುವಾದ ಜೊತೆಜೊತೆಗೆ ಕೈಕೈ ಹಿಡಿದುಕೊಂಡು ಸಾಗುತ್ತಿವೆ. ಈ ಅರ್ಥದಲ್ಲಿ ಪೂರ್ವ-ಪೂರ್ವವಾಗಿ ಉಳಿದಿಲ್ಲ.

ವಸಾಹತೋತ್ತರ ಸಂದರ್ಭದ ಎರಡನೆಯ ದಶಕದ ಅನಂತರದಲ್ಲಿ ಕೆಲವು ಸಂಗತಿಗಳು ಮುಖ್ಯವಾದವು :

೧. ಭಾರತೀಯ ಆರ್ಥಿಕತೆಯಲ್ಲಿ ಅನೇಕ ಮಹತ್ವದ ಬದಲಾವಣೆಗಳಾದವು. ಒಂದೆಡೆಯಿಂದ ಬೃಹತ್ ಉದ್ದಿಮೆಗಳು ಮತ್ತೊಂದೆಡೆಯಿಂದ ಜನಸಾಮಾನ್ಯರ ಆರ್ಥಿಕ ಬಿಕ್ಕಟ್ಟುಗಳು.
೨. ಹೆಚ್ಚಿದ ನಗರ ಕೇಂದ್ರಿತ ಚಿಂತನೆಗಳು
೩. ಬಂಡವಾಳವಾದದ ಪರವಾಗಿ ನಿಂತ ಮಾಧ್ಯಮಗಳು
೪. ಹಿಡುವಳಿ ಜಮೀನುಗಳಲ್ಲಿ ತಾರತಮ್ಯ
೫. ಕೃಷಿಯ ಪದ್ಧತಿಯಲ್ಲಿ ಉಂಟಾದ ವ್ಯಾಪಕ ಬದಲಾವಣೆ
೬. ಕುಟುಂಬ ರೂಪಗಳಲ್ಲಿನ ಪಲ್ಲಟ
೭. ಹಳ್ಳಿಯಿಂದ ನಗರಕ್ಕೆ ವಲಸೆ ಬಂದವರು – ಆದರಲ್ಲಿ ಎರಡು ವಿಧ. ಒಂದು ಬುದ್ಧಿಜೀವಿವರ್ಗ. ಅವರಿಗೆ ಉದ್ಯೋಗದ ಭದ್ರತೆ. ಮತ್ತೊಂದು ಕಾರ್ಮಿಕವರ್ಗ. ಇವರಿಗೆ ಉದ್ಯೋಗದ ಭದ್ರತೆಯಿಲ್ಲ
೮. ಅಕ್ಷರಸ್ಥರು ಮತ್ತು ಅನಕ್ಷರಸ್ಥರ ನಡುವಣ ಅಗಾಧ ಅಂತರ
೯. ಹೆಚ್ಚಿದ ಹಿಂಸೆ ಮತ್ತು ಕೋಮುವಾದದ ಪ್ರಾಬಲ್ಯ
೧೦. ಹಿಂಸೆಗಳಿಗೆ ಬಲಿಯಾದ ಮಹಿಳೆಯರು
೧೧. ೧೯೯೦ರ ದಶಕದ ಅನಂತರ ಉದಾರೀಕರಣಕ್ಕೆ ತೆರೆದುಕೊಂಡ ಆರ್ಥಿಕ ನೀತಿ.

ಮೇಲೆ ಉಲ್ಲೇಖಿಸಿದ ಅನೇಕ ಅಂಶಗಳಿಗೆ ರಾಷ್ಟ್ರೀಯ ಎನ್ನಬಹುದಾದ ಗಡಿರೇಖೆಗಳು ಮುಖ್ಯವಾಗಲಿಲ್ಲ. ಅರ್ಜುನ ಅಪ್ಪಾದೊರೈಯವರು ಹೇಳುವ ಪ್ರಕಾರ ವಸಾಹತೋತ್ತರ ಸನ್ನಿವೇಶದಲ್ಲಿ ತಾಂತ್ರಿಕತೆ ಮತ್ತು ಮಾಹಿತಿಗಳು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸುಲಭವಾಗಿ ತೆರಳಲು ಸಾಧ್ಯವಾಯಿತು.

ವಸಾಹತೋತ್ತರ ಚಿಂತನೆಯ ಕ್ರಮಗಳಲ್ಲಿ ವಸಾಹತುಶಾಹಿ ಅನುಭವವನ್ನು ಮರೆಯುವ ಆತಂಕವಿದೆ ಮತ್ತು ಬಹುತೇಕ ಚಿಂತನೆಗಳಲ್ಲಿ ವಸಾಹತುಶಾಹಿ ಅನುಭವ ರೂಪಿಸಿದ ಚಿಂತನೆಗಳ ಭಾರವಿದೆ ಎಂದು ಲೀಲಾ ಗಾಂಧಿಯವರು ಹೇಳುತ್ತಾರೆ. ಹೀಗಾಗಿ ವಸಾಹತೋತ್ತರ ಸಂದರ್ಭದ ರಾಜಕೀಯ ಮತ್ತು ಸಾಂಸ್ಕೃತಿಕ ಬೇರೆ ಬೇರೆ ಅರ್ಥವಂತಿಕೆಯನ್ನು ಪಡೆದಿವೆ. ಯಾವ ಮೂಲದಿಂದ ಇದಕ್ಕೆ ಪ್ರತಿಕ್ರಿಯಿಸುತ್ತೇವೆಯೋ ಆಗ ಅದಕ್ಕೆ ಸಂಬಂಧಿಸಿದ ತಾತ್ವಿಕತೆಗಳು ಸಿದ್ಧವಾಗುತ್ತವೆ.

ವಸಾಹತೋತ್ತರ ಸಂದರ್ಭದಲ್ಲಿ ಸ್ವಾತಂತ್ರ್ಯದ ಪರಿಕರವಿದೆ. ಆದರೆ ನಿಜವಾದ ಅರ್ಥದಲ್ಲಿ ಅನೇಕರಿಗೆ ಸ್ವಾತಂತ್ರ್ಯ ಸಿಕ್ಕಿಲ್ಲ. ಮತ್ತೊಂದರ ಅರ್ಥವೂ ಅವರಿಗೆ ಗೊತ್ತಿಲ್ಲ.

ವಸಾಹತೋತ್ತರ ಸಂದರ್ಭದಲ್ಲಿ ಬರುವ 'ದೇಸಿ' ಮತ್ತು 'ಪರದೇಸಿ' ಎಂಬ ಪರಿಕಲ್ಪನೆಯು ಒಂದು ಸೂಚನೆ ಮಾತ್ರ, (ನಿಶ್ಚಿತ) ಚರ್ಚೆಯು ಆದರಾಚೆಗೂ ನಡೆಯಬಹುದು.

ವಸಾಹತೋತ್ತರ ಸಂದರ್ಭದಲ್ಲಿ ಅದರಲ್ಲಿಯೂ ಜಾಗತೀಕರಣದ ಸಂದರ್ಭದಲ್ಲಿ 'ಜಾಗತಿಕ ಗ್ರಾಮಗಳ ಕಲ್ಪನೆ' ಬಂದು ಜನರು ಸ್ಥಳದ ಸಂವೇದನೆಯನ್ನು ಕಳೆದುಕೊಳ್ಳುವ ಅಪಾಯವಿದೆ. ಇದರಿಂದ ಮಾನಸಿಕ ಏಕಾಂತವಾದಿಗಳು ಸೃಷ್ಟಿಯಾಗುತ್ತಾರೆ.

ಸಾಹಿತ್ಯಕ್ಕೆ ಸಂಬಂಧಿಸಿದಂತೆ ಇನ್ನೊಂದು ಪ್ರಕ್ರಿಯೆಯು ಜರುಗಿದೆ. ೧೯೬೦ರಿಂದ ೧೯೭೦ರ ಕಾಲಾವಧಿಯಲ್ಲಿ ಆಂಗ್ಲೋ-ಅಮೆರಿಕನ್ ಅಧ್ಯಯನ ಕ್ರಮಗಳಲ್ಲಿ ರಚನಾವಾದ ಮತ್ತು ರಚನೋತ್ತರವಾದ ಸಾಹಿತ್ಯ ವಿಮರ್ಶೆಯಲ್ಲಿ ಯಜಮಾನಿಕೆಯನ್ನು ವಹಿಸಿದ್ದವು. ವಸಾಹತು ರಾಷ್ಟ್ರಗಳ ಬುದ್ಧಿಜೀವಿಗಳು ಇವುಗಳ ಹಿಂದಣ ತಾತ್ವಿಕತೆಯನ್ನು ಗ್ರಹಿಸದೆ ಭಾರತೀಯ ಸಾಹಿತ್ಯಕ್ಕೆ ಅನ್ವಯಿಸಿದರು ಎಂದು ಏಜಾಜ್ ಅಹಮದ್ ಅವರು ಹೇಳುತ್ತಾರೆ.

ಇನ್ನೊಂದು – ಇದಕ್ಕೆ ಸಂಬಂಧಿಸಿದಂತೆ ಅಧ್ಯಯನಕ್ರಮಕ್ಕೆ ಸಂಬಂಧಿಸಿದ ಸಮಸ್ಯೆ. ವಸಾಹತೋತ್ತರ ಸಂದರ್ಭದಲ್ಲಿ ಪರ್ಯಾಯ ಅಧ್ಯಯನ ಕ್ರಮಗಳು ಅಂತ ಯಾವುದು

# ವಸಾಹತೋತ್ತರ ಸಂದರ್ಭ: ಒಂದು ಪ್ರತಿಕ್ರಿಯೆ

ವಸಾಹತೋತ್ತರ ರಾಷ್ಟ್ರೀಯತೆಯ ಚರ್ಚೆಯ ಸಂದರ್ಭದಲ್ಲಿ ಒಂದು ಪ್ರಮುಖ ಅಂಶವನ್ನು ಗಮನಿಸಬೇಕು. ವಸಾಹತುಶಾಹಿ ಸಂದರ್ಭದಲ್ಲಿ ಏನಾಗಿದೆ : ಅದರ ಪರಿಣಾಮವೇನು ಎಂಬುದರ ಬಗ್ಗೆ ಒಂದು ನೀಲಿನಕ್ಷೆಯು ನಮಗೆ ಬೇಕಾಗುತ್ತದೆ. ಅದರ ಅರಿವು ತುಂಬಾ ಮುಖ್ಯವಾದುದು. ವಸಾಹತುಶಾಹಿ ಅನುಭವದ ಸಂದರ್ಭದಲ್ಲಿ ಯೂರೋಪ್ ಮತ್ತು ಭಾರತಕ್ಕೆ ನಿಶ್ಚಿತ ವರ್ಗೀಕರಣವಿತ್ತು. ಆದರೆ ವಸಾಹತೋತ್ತರ ಸಂದರ್ಭದಲ್ಲಿ ಯೂರೋಪ್–ಪಶ್ಚಿಮ–ಪ್ರಭುತ್ವ ಭಾರತವೆಂದರೆ ಪೂರ್ವ–ಬಹು ಸಂಸ್ಕೃತಿ – ಪಶ್ಚಿಮ ವಿರೋಧಿ ಎಂಬಂಥ ವರ್ಗೀಕರಣವನ್ನು ಮಾಡಲು ಬರುವುದಿಲ್ಲ. ಹಾಗೆ ನೋಡುವುದಿದ್ದರೆ ಅಮೆರಿಕಾದಂಥ ಪ್ರಬಲ ರಾಷ್ಟ್ರಗಳು ತೃತೀಯ ಜಗತ್ತಿನ ಮೇಲೆ ನಡೆಸುತ್ತಿರುವ ಹಿಂಸೆಗಳಿಗೆ ಒಂದು ನಿರ್ದಿಷ್ಟ ರೂಪ ಮತ್ತು ಚಹರೆಗಳಲ್ಲಿ ಮಾತ್ರ ಸಾಧ್ಯ.

ಡಾ|| ಕೇಶವಶರ್ಮ ಕೆ.

ಪ್ರಾರಂಭವಾದವೋ ಅವು 'ಅಳಿಸಿಕೊಂಡ ಸಂಸ್ಕೃತಿ' ಮೂಲಕ ಅಧ್ಯಯನಕ್ಕೆ ಹೊರಟವು. ಇದು ಆರ್ನಾಲ್ಡನ 'ಉನ್ನತ ಸಂಸ್ಕೃತಿ' ಮತ್ತು 'ಜನಪ್ರಿಯ ಸಂಸ್ಕೃತಿ'ಯೆಂಬ ಪ್ರಭೇದದಿಂದ ಬಂದಿದೆ. ಈ ಪರಿಕಲ್ಪನೆಯನ್ನು ಆಂಗ್ಲೋ - ಅಮೆರಿಕಾದ ಸಮಾಜಶಾಸ್ತ್ರಜ್ಞರು ಬಳಸಿಕೊಂಡಿದ್ದರು. ಇದೇ ಪರಿಕಲ್ಪನೆಯನ್ನು ಭಾರತೀಯ ಚಾರಿತ್ರಿಕ ಅಧ್ಯಯನಗಳಲ್ಲಿ ನಗರಕೇಂದ್ರಿತ ಚಿಂತಕರು ಒಂದು ಪರಿಕರವಾಗಿ ಬಳಸಿಕೊಂಡರು. ಅನಂತರ ಇದೇ, ಸಂಸ್ಕೃತಿಯ ಚರ್ಚೆಯಲ್ಲಿಯೂ ಪ್ರವೇಶ ಪಡೆಯಿತು. ದೇಶೀವಾದದ ಹಿನ್ನೆಲೆಯಲ್ಲಿ ತರ್ಕಿಸಿದ ವಿದ್ವಾಂಸರು ಆಧುನಿಕತೆ ಮತ್ತು ಸಂಪ್ರದಾಯವನ್ನು ದ್ವಂದ್ವದ ಹಿನ್ನೆಲೆಯಲ್ಲಿ ಚರ್ಚಿಸಿದರು. ಮತ್ತು ಮೂರನೆಯ ಜಗತ್ತಿಗೆ ಆಧುನಿಕತೆಗಿಂತ ಸಂಪ್ರದಾಯದಲ್ಲಿ ವಿಶಿಷ್ಟ ಅರ್ಥವಿದೆಯೆಂಬಂತೆ ಚರ್ಚಿಸಿದ್ದೂ ನಿಜ. ಈ ಚರ್ಚೆಯಲ್ಲಿ ಎರಡು ಅಂಶಗಳು ಮುಖ್ಯವಾದವು :

ಒಂದು, ಸಂಪ್ರದಾಯಕ್ಕೆ ಅದರದೇ ಆದ ಸಾಂದರ್ಭಿಕ ಅರ್ಥವಿದೆ ಮತ್ತು ಅದು ಪ್ರಭುತ್ವ ವಿರೋಧಿಯಾದ ನಿಲುವನ್ನು ತಳೆಯುತ್ತದೆ.

ಎರಡನೆಯದಾಗಿ, ಸಂಸ್ಕೃತಿ, ಸಂಪ್ರದಾಯ ಮತ್ತು ರಾಷ್ಟ್ರೀಯತೆಗಳು ಕೆಲವು ಸಮಾನ ಅಂಶಗಳನ್ನು ಒಳಗೊಂಡಿವೆ.

ವಸಾಹತೋತ್ತರ ಸಂದರ್ಭದಲ್ಲಿ ಸಾಹಿತ್ಯವೆನ್ನುವುದು ಅನೇಕ ಹಂತಗಳಲ್ಲಿ ಕೆಲಸಮಾಡಿದೆ.

(ಅ) ರಾಷ್ಟ್ರೀಯ ಮತ್ತು ಪ್ರಾದೇಶಿಕ ಪ್ರಜ್ಞೆಯ ಮಟ್ಟದಲ್ಲಿ
(ಆ) ಪ್ರಾದೇಶಿಕ ಸಂಸ್ಕೃತಿಯ ಹುಡುಕಾಟ
(ಇ) ಬೇರೆ ಬೇರೆ ಸಂಕಥನದ ಮಾದರಿಗಳು – ದಲಿತರು, ಸ್ತ್ರೀಯರು, ಅಲ್ಪಸಂಖ್ಯಾತರು ನಿರ್ವಹಿಸುವ ಮಾದರಿಗಳು
(ಈ) ಹೊಸ ಅವಕಾಶಗಳ ನಿರ್ಮಾಣ
(ಉ) ಸಾಂಸ್ಕೃತಿಕ ಮತ್ತು ರಾಜಕೀಯ ಏಕಕೇಂದ್ರಿತ ಚಿಂತನೆಗಳ ವಿರುದ್ಧ ಮಾದರಿಗಳು.

ಹಾಗೆಯೇ ವಸಾಹತೋತ್ತರ ಮಾದರಿಗಳಲ್ಲಿ ಬೇರೆ ಬೇರೆ ಮಾದರಿಗಳಿವೆ :

(ಅ) ರಾಷ್ಟ್ರೀಯ ಮತ್ತು ಪ್ರಾದೇಶಿಕ ಮಾದರಿಗಳು
(ಆ) ಜನಾಂಗ ಆಧಾರಿತ ಚಿಂತನಾ ಮಾದರಿಗಳು
(ಇ) ತೌಲನಿಕತೆ
(ಈ) ಲಿಂಗ ರಾಜಕಾರಣ
(ಉ) ಸಂಕರ ರೂಪಕಗಳು.

ವಸಾಹತೋತ್ತರ ಅನುಭವದ ಬಗ್ಗೆ ಬೇರೆ ಬೇರೆ ಚಿಂತನಾಕ್ರಮದ ಧಾರೆಗಳಿವೆ. ಅವುಗಳ ಸ್ಥೂಲ ಪರಿಚಯವನ್ನು ಮಾತ್ರ ನೀಡಲಾಗಿದೆ. ಆದರೆ ಕೆಲವು ಅಂಶಗಳನ್ನು ನಾವು ಗಮನಕ್ಕೆ ತಂದುಕೊಳ್ಳಬೇಕು :

೧. ವಸಾಹತೋತ್ತರ ಚಿಂತನೆಯ ಕ್ರಮದಲ್ಲಿ ಕೂಡ ಸಮಾಜ, ಆರ್ಥಿಕತೆ ಮತ್ತು ಚರಿತ್ರೆಯನ್ನು ಬಿಟ್ಟು ಚಿಂತಿಸುವಂತಿಲ್ಲ.
೨. ವಸಾಹತೋತ್ತರ ಚಿಂತನೆಯೆಂಬುದು ಖಾಲಿಯಾದ ಜಾಗಗಳಲ್ಲಿ ಕಟ್ಟುವ ಪರಿಭಾಷೆಗಳಲ್ಲ.
೩. ಜನರು ಬರಿಯ ಸಾಹಿತ್ಯ ಅಥವಾ ಸಂಸ್ಕೃತಿಯ ಚಿಂತನೆಯೊಂದರಲ್ಲಿಯೇ ಬದುಕಲಾರರು.
೪. ಪೂರ್ವ ಅಥವಾ ಪಶ್ಚಿಮ ಎಂಬ ಆಯ್ಕೆಯ ಪ್ರಶ್ನೆಯು ಈಗ ನಮ್ಮ ಮುಂದಿಲ್ಲ, ನಮ್ಮ ಮುಂದಿರುವ ಸಾಮಾಜಿಕ-ಆರ್ಥಿಕ ಸವಾಲುಗಳು ಬೇರೆಯಿವೆ.

ಆದುದರಿಂದ ''ದಾರಿಸಾಗುವುದೆಂತೋ ನೋಡಬೇಕು.''

ಡಾ|| ಕೇಶವಶರ್ಮ ಕೆ.
ಪ್ರವಾಚಕರು, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾನಿಲಯ
ಜ್ಞಾನ ಸಹ್ಯಾದ್ರಿ - ೫೭೭ ೪೫೧
ಶಿವಮೊಗ್ಗ ಜಿಲ್ಲೆ



# ನೀನು

ಆಕಾಶದಾಗಿನ ಚಿಕ್ಕಿ ನೋಡತಿ
ಮರಳಾಗತಿ
ದೂರದ ಗುಡ್ಡ ನೋಡತಿ
ಮಬ್ಬಾಗತಿ

ಈ ಬರಹ ಓದಿ
ನಕ್ಕ ಸುಮ್ಮಾಗತಿ
ಮಗ್ಗಲದಾಗಿನ ಹೂ ನೋಡ್ಲಿಲ್ಲ
ಅದರ ಕನಸ ಕೇಳ್ಲಿಲ್ಲ
ಮನಸ ತಿಳಿಲಿಲ್ಲ

ಮಳ್ಳ ಸನಿಹದ ಹನಿನೋಡು
ಹನಿಯಾಗಿನ ಚಂದ ನೋಡು
ಚಂದದಾಗಿನ ಪುಳಕಾ ನೋಡು
ರಂಗು ಕಂಡು ಮಂಕ ಬಡದ
ಕುಂದ್ರ ಬ್ಯಾಡ

ಹಾರೋ ಹಕ್ಕಿ ಪುಕ್ಕಯಾಕ ಎಣಸತಿ
ಕಳದ ದಿನ, ಹರಿದ ಮುಗ್ಲು

ಎಲ್ಲಾ ನಿಂತ ನೀರು, ಕುಂಟಗಾಲು
ಹರಿಯೋ ನದಿ ನೋಡು
ಅದರಾಗಿನ ಜೀವ ಹುಡುಕು
ಅದರ ಕೂಡಾ ಹೆಜ್ಜೆ ಹಾಕು

ಹೊಸ ಕಂಪು ಕೊಡ್ತದ
ಅದಕ ನಿನ್ನ ಮನಕಟ್ಟು
'ಪ್ರೀತಿ' ಅನ್ನೋ ಬಣ್ಣಾ ಬಳಿತದ

ನದಿ ಹರಿಯೋ ಲಹರಿ ಕೇಳ
ಹುಣ್ಣಿವಿ ಹಾಡರ ಯಾಕ ಬೇಕ
ಸೂರ್ಯಾನ ಗೆಣತೇರ ಹಾಡು ನಾಚಬೇಕ

ಹೆಜ್ಜೆಗೆ ಹೆಜ್ಜೆ ಕೂಡಿ ಹಾದ್ಯಾತು
ದನಿಗೆ ದನಿ ಕೂಡಿ ಹಾಡಾತು
ಹಾಡು-ಹಾದಿ ಜೀವನ ತಂತ್ರ್ಯ

ಈ ತಂತಿ ನುಡಿಸ್ಲಿಕ್ಕೆ
ನೀನು ಬರ್ತಿಯಲ್ಲ ನನ್ನ ಕೂಡಾ ?

ಸವಿತಾ ರವಿಶಂಕರ್
೨.೨೦, ೬ನೇ ಅಡ್ಡರಸ್ತೆ, ೧ನೇ ಸ್ಟೇಜ್, ಆನೆಕೆರೆ ಮೈಕೋ ಲೇಔಟ್, ಬನ್ನೇರುಘಟ್ಟ ರಸ್ತೆ, ಬೆಂಗಳೂರು - ೫೬೦ ೦೭೬

'ಹಸಿದವ ಬಲ್ಲ ಹಸಿವೆಯ ಶೂಲ' ಎಂಬಂತೆ ಬೇಂದ್ರೆ ಬಡತನದಲ್ಲಿ ಬದುಕಿಯೇ ಅದ್ಭುತ ಕಾವ್ಯ ಸೃಷ್ಟಿಸಿದರು. ನೋವು ಹೂವಾಗಿ ಅರಳಬೇಕು, ಪಾಡು ಹಾಡಾಗಿ ಹರಿಯಬೇಕು. ಆಗಲೇ ಆ ಕಾವ್ಯ ಅನಂತ ಚೈತನ್ಯ ಪಡೆಯುತ್ತದೆ, ಚಿರಕಾಲ ಬಾಳುವ ಮೌಲ್ಯ ಪಡೆಯುತ್ತದೆ. ಅದಕ್ಕೇ ಬೇಂದ್ರೆ ಕುರಿತ ಕುವೆಂಪು ಅವರ ಈ ನುಡಿಮುತ್ತು ಅರ್ಥಪೂರ್ಣವಾಗಿ ತೋರುತ್ತದೆ : ''ಕನ್ನಡದ ನವೋದಯದ ಅಗ್ರಗಣ್ಯ ಕವಿಗಳ ಪೈಕಿ ಬೇಂದ್ರೆ ಬಹಳ ಮುಖ್ಯರಾದವರು. ಜನತೆಯನ್ನು ಬಡಿದೆಬ್ಬಿಸಬಲ್ಲ ಕೀರ್ತಿಶಾಲಿ ಅವರಾಗಿದ್ದರು.''

ಬೇಂದ್ರೆಯವರ ಬದುಕು ಒಂದು ಸಾಹಸ ಯಾತ್ರೆ. ಬದುಕಿನಲ್ಲಿ ಬಹಳ ಕಷ್ಟವನ್ನು ಅನುಭವಿಸಿ ನೊಂದು ಬೆಂದು ಬೆಳೆದವರು ಬೇಂದ್ರೆ. ವಿವಾಹಪೂರ್ವದಲ್ಲಷ್ಟೇ ಅಲ್ಲದೆ, ವಿವಾಹಾನಂತರದ ಜೀವನದಲ್ಲೂ ನೋವನ್ನುಂಡರು. ಬಡ ಬೇಂದ್ರೆ ಮಾಸ್ತರ ಎಂದೇ ಸುಪ್ರಸಿದ್ಧರು. ''೧೯೦೭ರಲ್ಲಿ ಬೇಂದ್ರೆಯವರ ತಂದೆ ತೀರಿಕೊಂಡರು. ಬಡತನದಲ್ಲಿ ಬರೆ ಕೊಟ್ಟಂತಾಯಿತು'' ಹಾಗೂ ''ಅಂಬಿಕಾತನಯರ ಕಾವ್ಯಯಜ್ಞದಲ್ಲಿ ನೋವು ನೋಂಪಿಯಾಗುತ್ತದೆ, ತಾಪ ತಪವಾಗುತ್ತದೆ. ಈ ನೋವು ತಾಪಗಳು ನಾನಾ ರೀತಿಯವು. ಬಡತನ, ಮಕ್ಕಳ ಸಾವು-ನೋವು, ನಿರುದ್ಯೋಗ ಮೊದಲಾದ ನಾನಾ ಥಂಡದವು.'' ಬೇಂದ್ರೆ ಕೇವಲ ತಮ್ಮ ನೋವನ್ನು ಅನುಭವಿಸಲಿಲ್ಲ, ಸಮಾಜದೆಡೆಗೆ ತಮ್ಮನ್ನು ತೆರೆದುಕೊಂಡರು. ಕಾವ್ಯಮುಖೇನ ಜನರೊಡನೆ ಮಾತನಾಡಿದರು. ''ಹೀಗೆಂದು ಕವಿ ತನ್ನ ಸುಖದುಃಖಗಳನ್ನು ಆತ್ಮವೃತ್ತಗಳ ಅಭಿವ್ಯಕ್ತಿಗೇ ತನ್ನ ಕಾವ್ಯವನ್ನು ಸೀಮಿತಗೊಳಿಸದೆ, ಹೊರಗಿನ ಸಾಮಾಜಿಕ, ರಾಜಕೀಯ ಆಗುಹೋಗುಗಳಿಗೂ ಅಷ್ಟೇ ತೀವ್ರವಾಗಿ ಸ್ಪಂದಿಸಿದ್ದಾರೆ'' ಎಂಬಲ್ಲಿ ಇದು ಸ್ಪಷ್ಟ. ಇಂಥ ಬೇಂದ್ರೆ ತಮ್ಮ ಬದುಕಿನ ವಿವಿಧ ಅನುಭವದ ಆಯಾಮಗಳನ್ನು ಕಾವ್ಯಧಾರೆಯಾಗಿ ಹೇಗೆ ಹರಿಸಿದ್ದಾರೆ ಎಂಬುದರ ಅಧ್ಯಯನ ಈ ಭಾಗದಲ್ಲಿ ಮುಖ್ಯವಾಗುತ್ತದೆ.

ಬೇಂದ್ರೆಯವರ ಸಾರಸ್ವತ ತತ್ತ್ವ ಉಸುರುವುದು : ''ಎನ್ನ ಪಾಡೆನಗಿರಲಿ ಅದರ ಹಾಡನ್ನಷ್ಟೆ ನೀಡುವೆನು ರಸಿಕ! ನಿನಗೆ!'' ಅವರ ಜೀವನಕಾವ್ಯದ ಹಿನ್ನೆಲೆಯಿಂದ ಈ ಮಾತು ಬಹುಮುಖ್ಯ. 'ಬಿಸಿಲುಗುದುರೆ' ಸಂಸಾರದ ಸಮೀಕ್ಷೆಯನ್ನು ಅಚ್ಚುಕಟ್ಟಾಗಿ ಮಾಡುವ ಕವಿತೆ. ನವದಂಪತಿಗಳಾಗಿದ್ದ ಕಾಲದಲ್ಲಿ ಎಲ್ಲವೂ ಸೊಗಸು, ವೈಭವ. ಸಂಸಾರ ಸಾಗಿದಂತೆ, ಬದುಕಿನ ಅನುಭವದ ವಿಸ್ತಾರ ಹೆಚ್ಚಿದಂತೆ ಬಾಳಿನ ಗೂಢತೆಯ ಪರಿಚಯ ಆಗುತ್ತದೆ. ''ಹಳ್ಳದ ದಂಡ್ಯಾಗ ಮೊದಲಿಗೆ ಕಂಡಾಗ ಏನೊಂದು ನಗಿ ಇತ್ತ'' ಎಂದು ಆರಂಭವಾಗುವ ಕವಿತೆ ಮುಂದೆ ಹಲವು ಮಜಲುಗಳನ್ನು ತೆರೆದಿಡುತ್ತಾ ಹೋಗುತ್ತದೆ. ''ಅವಳ ನಗೆ ಬದುಕಿನ ಒಲೆಯಲ್ಲಿ, ಬಡತನದ ಬಲಿಯಲ್ಲಿ, ಕರುಳಿನ ಕಂದಮ್ಮಗಳ ಸಾಲಿನಲ್ಲಿ ಸುಟ್ಟುಹೋಯಿತು'' ಎಂಬ ಉಪಮೆ ಹಳ್ಳಿಯ ಯುವಕನ ಮಾತಿನಲ್ಲಿ ಬಂದಿರುವುದರಿಂದ ಅದರ ಸ್ವಾರಸ್ಯ ಇಮ್ಮಡಿಯಾಗಿದೆ. ಬೇಂದ್ರೆಯವರ ಪರಿಸರ ಪ್ರಜ್ಞೆಗೆ ಇದಕ್ಕಿಂತ ಉತ್ತಮ ಉದಾಹರಣೆ ಬೇರೊಂದು ಸಿಗಲಿಕ್ಕಿಲ್ಲ. ಇದು ಕಳೆದುಹೋದುದನ್ನು ಹಂಬಲಿಸುವ ರೀತಿಯ ಕವನ. ''ಆಡುನುಡಿಯ ಬಳಕೆ, ನಿತ್ಯಜೀವನದ ಉಪಮೆ, ಭಾವದ ತೀವ್ರತೆಗೆ ತಕ್ಕ ಅಭಿವ್ಯಕ್ತಿ, ಕಳೆದುಹೋದ ಸುಖದ ದಿನಗಳನ್ನು ಮತ್ತೆ ಪಡೆಯಬೇಕೆಂಬ ಹಂಬಲ, ವಾಸ್ತವಪ್ರಜ್ಞೆ'' ಈ ಕವನದಲ್ಲಿ ತುಂಬಿವೆ.

ಬಡತನದ ಬಲಿಯಾಗ ಕರುಳಿನ ಕೊಲಿಯಾಗ
ಬಾಳ್ವಿಯ ಒಲಿಮ್ಯಾಗ
ಸುಟ್ಟು ಹಪ್ಪಳದ್ಹಾಂಗ ಸೊರಗಿದಿ ಸೊಪ್ಪ್ಹಾಂಗ
ಬಂತಂತ ಮುಪ್ಪು ಬ್ಯಾಗ (ಬೇಂ.ಸ.ಕಾ.ಸಂ. ೩, ಬಿಸಿಲುಗುದುರೆ, ಪು. ೬೬)

ಎಂದು ಹೇಳುವಾಗ ಆತ ಈ ಕಳೆದುಹೋಗುವಿಕೆಗೆ ಬಡತನ, ಕ್ರೌರ್ಯ, ಬದುಕಿನ ಕಠೋರತೆ ಮುಂತಾದ ಅನೇಕ ಕಾರಣಗಳನ್ನು ಗುರುತಿಸುತ್ತಾನೆ.

ಅತ್ಯಂತ ಸಮಯೋಚಿತ ಹೋಲಿಕೆ, ಧ್ವನಿಪೂರ್ಣ ನುಡಿಗಳ ಬೆಡಗು ಇಲ್ಲಿ ಬಡಸಂಸಾರವನ್ನು ಆವರಿಸಿದೆ. ಬಾಳಿನ ಒಲೆಯ ಬೇಗೆಗೆ ಬದುಕು ಬೆಂದ ಬಗೆ ಇಲ್ಲಿ ಸ್ಪಷ್ಟ. ''ಸುಟ್ಟು ಹಪ್ಪಳದ್ಹಾಂಗ, ಸೊರಗಿದ ಸೊಪ್ಪ್ಹಾಂಗ'' ಬಡಜೀವಗಳ ನಿಸ್ಸಾರತೆಯನ್ನು ಸಂಪೂರ್ಣವಾಗಿ ತೆರೆದು ತೋರಿಬಿಡುತ್ತದೆ. ಇಂಥ ಬದುಕಿನ ಉರಿಯಿಂದಲೆ

# ಬೇಂದ್ರೆ ಕಾವ್ಯ
# ಬಡ ಬೇಂದ್ರೆ ಮಾಸ್ತರ

ಯೌವನದ ಉತ್ಸಾಹಗಳೆಲ್ಲ ಮಾಯವಾಗಿ ಮುಪ್ಪು ಬೇಗ ಧಾವಿಸಿಬಿಡುತ್ತದೆ. ಬೇಂದ್ರೆ ಸಂಸಾರ ಬಡತನದ ದುಃಖ-ಸುಖಗಳನ್ನು ಎದುರಿಸಿ, ದಾಟಿ ಮುಂದೆ ಹೋದುದನ್ನು ಅವರ ಇಂಥ ಹಲವು ಕವನಗಳ ಒಳಪದರಗಳಲ್ಲಿ ಗುರುತಿಸಬಹುದು.

'''ನನ್ನ ಕೈ ಹಿಡಿದಾಕೆ!' ಎಂಬ ಪ್ರಣಯ ಕವನದಲ್ಲಿ ಕೂಡ ಬಡತನದ ಸಹವಾಸ ಬೇಂದ್ರೆಯವರನ್ನು ಬಿಡುವುದಿಲ್ಲ'' 'ನನ್ನ ಕೈಯ ಹಿಡಿದಾಕೆ!' ಬೇಂದ್ರೆಯವರ ಬದುಕಿನ, ಸಂಸಾರದ ಸ್ಥಿತಿಯನ್ನು ಹೇಳುವ ಸಹಜ ಕವನ. 'ನನ್ನ ಕೈಯ ಹಿಡಿದಾಕೆ' (೧೮೦) ಯಲ್ಲಿ ಬೇಂದ್ರೆ ಯವರೇ ಹೇಳಿರುವಂತೆ ''ನಿರಾಶೆಯನ್ನು ಸಿಳಿ ತಳೆಯುತ್ತ ಹೊರಳಿದ ಬಾಳಬಳ್ಳಿಯ ಅವಲಂಬನದ ಚಿತ್ರ ಇಲ್ಲಿದೆ. ನಾಸ್ತಿವ ಜೀವನವನ್ನು ಒಪ್ಪಿಕೊಂಡು ಬದುಕಿನಲ್ಲಿ ಶ್ರದ್ಧೆಯನ್ನು ಕಳೆದುಕೊಳ್ಳದಿರುವುದು ಮುಖ್ಯ ಎಂಬುದನ್ನು ಕವಿ ಇಲ್ಲಿ ಹೇಳುತ್ತಾರೆ. ಜೀವನದಲ್ಲಿ ಸುಖ-ದುಃಖಗಳು, ಬಿಸಿಲು-ಕತ್ತಲಿನಂತೆ ಸಾಮಾನ್ಯ. ಅವುಗಳನ್ನು ಕವಿ ಒಪ್ಪಿಕೊಳ್ಳುತ್ತಾರೆ. ಜೀವನವನ್ನು ಬೌದ್ಧಿಕವಾಗಿ ವಿಮರ್ಶಿಸಿ, ಅಳುವನ್ನು ನುಂಗಿ ನಗಬೇಕು ಎಂಬ ತೀರ್ಮಾನಕ್ಕೆ ಬರುತ್ತಾರೆ.'' ''...ಕವಿ ಇಲ್ಲಿ ಜೀವನವನ್ನು ಬಿಟ್ಟು ಓಡಿಹೋಗುವ ಪಲಾಯನವಾದಿಯಲ್ಲ. ನಿರಾಶರಾದರೂ ಹತಾಶರಾಗದ ಆಶಾವಾದಿಯಾಗಿದ್ದಾರೆ.'' ಜೀವನದ ಕಡುಕಷ್ಟದ ಸಮಯದಲ್ಲಿ ಆಸರೆಯಾಗುವವರು ಸತಿ-ಪತಿ. 'ನನ್ನ ಕೈಯ ಹಿಡಿದಾಕೆ ಅಳು ನುಂಗಿ ನಗು ಒಮ್ಮೆ ನಾನೂನು ನಕ್ಕೇನ' ಎಂದು ಪ್ರಾರಂಭಿಸುವ ಕವಿ ಸತಿಗೆ ಸಮಾಧಾನದ ನುಡಿಗಳನ್ನು ನುಡಿಯುತ್ತಾ ಹೋಗುತ್ತಾರೆ.

ಬಡತನ ಒಡೆತನ ಕಡೆತನಕುಳಿದಾವೇನ
ಎದೆಹಿಗ್ಗು ಕಡೆಮುಟ್ಟ
ಬಾಳಿನ ಕಡಲಾಗ ಅದನ ಮುಳುಗಿಸಬ್ಯಾಡ
ಕಡೆಗೋಲು ಹಿಡಿಹುಟ್ಟ!

(ಬೇಂ.ಸ.ಕಾ.ಸಂ.೩, ನನ್ನ ಕೈಯ ಹಿಡಿದಾಕೆ, ಪು. ೬೩)

ಬಡತನ-ಸಿರಿತನ ನೀರಗುಳ್ಳೆಯಂತೆ, ಬದುಕಿನಲ್ಲಿ ಪ್ರೀತಿ ಮಾತ್ರ ಶಾಶ್ವತ. ಲಕ್ಷ್ಮಿ ಚಂಚಲೆ. ಬದುಕಿನಲ್ಲಿ ಸಂಪಾದಿಸಬೇಕಾಗಿರುವುದು ಹಣ, ಅಧಿಕಾರವನ್ನಲ್ಲ. ಜೀವನಾಧಾರವಾದ ಪ್ರೀತಿಯ ಗಳಿಕೆ ಜೀವನಕ್ಕೆ, ಜೀವಕ್ಕೆ ಶಕ್ತಿ ತುಂಬಬಲ್ಲುದು. ಆದುದರಿಂದಲೇ ಇಂಥ ಬಡತನದ ಪರಿಸ್ಥಿತಿಯಲ್ಲೂ ಕೋಪಿಸುವುದು ತರವಲ್ಲ. ಈ ಕಷ್ಟಗಳನ್ನು ನುಂಗಿ ನೀನು ನಕ್ಕರೆ ನಾನೂನು ನಕ್ಕೇನು ಎಂಬ ಸದಾಶಯ ಕವಿಯದು. ''ಬಡನೂರು ವರುಷಾನ ಹರುಷಾದಿ ಕಳೆಯೋಣ ಯಾಕಾರೆ ಕೆರಳೋಣ!'' ಕವಿಯ ಜೀವನತತ್ತ್ವವನ್ನು ಸ್ಫುಟಪಡಿಸುತ್ತದೆ.

ಎಚ್. ಕೆ. ವೆಂಕಟೇಶ



''ಬಾಳಿನಲ್ಲಿ ಎಂತಹ ಬಡತನ ಬಂದರೂ ಅದರ ನಂಜು, ಒಗರು, ಕಹಿಗಳನ್ನು ತಮ್ಮ ಪ್ರೇಮರಸಾಯನದಿಂದ ಕಳೆಯಬಹುದೆಂಬ ವೇದಾಂತಿಕ ವಿಶ್ವಾಸ'' ಬೇಂದ್ರೆಯವರದು. 'ನಾನು ಬಡವಿ' ಬೇಂದ್ರೆಯವರ ಪ್ರಮುಖ ಕವನ. ಈ ಕವನವನ್ನು ಆರ್ದ್ರವಾಗಿ ಆರ್ಥಿಕ ದೃಷ್ಟಿಯಿಂದ ನೋಡುವುದಾದರೆ ಬಡಸಂಸಾರಕ್ಕೆ ಪ್ರೀತಿಯಿಂದ ಏನೂ ಸಾಧ್ಯವಿಲ್ಲ. ಕವಿ ಹೇಳುವುದು ವಾಸ್ತವಕ್ಕೆ ದೂರ. ಪ್ರೀತಿಯೊಂದನ್ನೇ ಎಲ್ಲಕ್ಕೂ ಬಳಸಲು ಅಸಾಧ್ಯ. ಹಣವಿಲ್ಲದೆ ಬದುಕುವುದು ಸಾಧ್ಯವಿಲ್ಲ ಎಂಬಂತೆ ನೋಡಬಹುದು. ಆದರೆ ಮಾನವೀಯತೆಯ ದೃಷ್ಟಿಯಿಂದ 'ಕಾಣು'ವುದಾದರೆ ಕವನ ಹೊಸದೃಷ್ಟಿ ನೀಡುತ್ತದೆ.

''ಈ ಕವನದಲ್ಲಿ ಹೊರಗಿನ ಬಡತನವನ್ನು ಮೆಟ್ಟಿನಿಂತ ಎದೆಯ ಸಿರಿತನ, ಒಲವಿನ ಸಂಪತ್ತು ಬಂಧುರವಾಗಿ ಘೋಷಿತವಾಗಿದೆ. ಬಡದಂಪತಿಗಳು ಒಲವನ್ನೇ ಬಂಡವಾಳವಾಗಿ ಬಳಸಿಕೊಳ್ಳುವ ಚಿತ್ರ ಇಲ್ಲಿದೆ.'' ವಾಮನ ಬೇಂದ್ರೆಯವರು ಕಂಡರಿಸಿದ ಬೇಂದ್ರೆಯವರ ದೃಷ್ಟಿ: ''ಶಿಕ್ಷಕರ ಬಡಸಂಸಾರ ನಿರ್ವಿಘ್ನವಾಗಿ ಸಾಗಿತು. ಬಡಸಂಸಾರ ಎಂಬ ಭಾವನೆಯೇ ಬೇಂದ್ರೆಯವರಿಗೆ ಬರಲಿಲ್ಲ. ಏಕೆಂದರೆ ಶ್ರೀಮಂತತನ ಅವರಿಗೆ ಬೇಕಾಗಿರಲಿಲ್ಲ. ಊಟಕ್ಕೆ ಇರದಿದ್ದರೆ ಉಪವಾಸ ಮಾಡಿದರೇನು ತಪ್ಪು, ಉಪವಾಸವ್ರತವನ್ನೂ ಸಾಧಿಸಿದಂತೆ ಆಯಿತು ಎಂಬುದೇ ಅವರ ಜೀವನ ದೃಷ್ಟಿ.'' ಗಂಡಿನ ನಿಲುವು ಈ ಬಗೆಯದಾದರೆ, ಬಡತನದಂಥ ಸಾಮಾಜಿಕ ಸಮಸ್ಯೆಗೆ ಹೆಣ್ಣಿನ ಪ್ರತಿಕ್ರಿಯೆ ಇದು :

ನಾನು ಬಡವಿ ಆತ ಬಡವ
ಒಲವೆ ನಮ್ಮ ಬದುಕು
ಬಳಸಿಕೊಂಡವದನೆ ನಾವು
ಅದಕು ಇದಕು ಎದಕು
(ಬೇಂ.ಸ.ಕಾವ್ಯ. ಸಂ.೩, ನಾನು ಬಡವಿ, ಪು. ೬೯)

ಬಡಸಂಸಾರ. ಸತಿ-ಪತಿ ಇಬ್ಬರೂ ಬಡವರು. ಆರ್ಥಿಕವಾಗಿ ಸಮಾಜದ ದೃಷ್ಟಿಯಲ್ಲಿ ಇವರು ಬಡವರಿರಬಹುದು. ಆದರೆ ಇಬ್ಬರಲ್ಲೂ ಒಲವಿದೆ, ಅದೂ ತೀರದಷ್ಟು. ಆದ್ದರಿಂದ ಈ ಬಡಬದುಕಿನಲ್ಲಿ ಈ ಒಲವನ್ನೇ 'ಅದಕು ಇದಕು ಎದಕು' ಬಳಸಿಕೊಂಡಿರುವ ಪರಿ ಚಿತ್ತೋಪಹಾರಿ ಎನಿಸುತ್ತದೆ. ಆದುದರಿಂದಲೇ ಇವರಿಗೆ ಭೋಗದ ವಸ್ತು, ಚಿನ್ನದ ಒಡವೆಗಳಲ್ಲಿ ನಿರಾಸಕ್ತಿ. ''ಬೇಂದ್ರೆಯವರ ಬಡತನದ ನೋವು ಮತ್ತು ದಾಂಪತ್ಯದ ಎದೆಯಾಳದ ಪ್ರೀತಿ 'ನಾನು ಬಡವಿ ಆತ ಬಡವ' ಕವನದಲ್ಲಿ ಅಮರತ್ವವನ್ನು ಪಡೆದಿದೆ.''

ಆತ ಕೊಟ್ಟ ವಸ್ತು ಒಡವೆ
ನನಗೆ ಅವಗೆ ಗೊತ್ತು
ತೋಳುಗಳಿಗೆ ತೋಳಬಂದಿ
ಕೆನ್ನೆ ತುಂಬ ಮುತ್ತು (ಅದೇ)

ಸತಿಯೇ ಹೀಗೆ ಮನದುಂಬಿ ಹಾಡುವಾಗ ಗಂಡನಾದವನಿಗೆ ಇನ್ನೇನು ಬೇಕು ? 'ಬಡವರ ಶೃಂಗಾರ ಬಯಕೆಗೆ ಮೂಲವು' ಎಂದಿದ್ದರೆ 'ಬಡವರ ಒಲುಮೆ' ಅವರ ಬಾಳಿನ ಚಲಾವಣೆಯ ನಾಣ್ಯವಾಗುತ್ತಿತ್ತು. ಬಡತನ-ಸಿರಿತನ ಕೇವಲ ಹಣದ ಸ್ವರೂಪದವಲ್ಲ. ಪರಸ್ಪರ ಪ್ರೀತಿಯಿಂದ ಕೂಡಿದ ಸಂಸಾರ ಯಾವ ಸಿರಿತನಕ್ಕೂ ಕಡಿಮೆಯಲ್ಲ. ಹಣದಿಂದ ಗಳಿಸಬಹುದಾದುದನ್ನೆಲ್ಲ ಮತ್ತು ಅದನ್ನೂ ಮೀರಿದುದನ್ನೆಲ್ಲ ಒಲವಿನಿಂದ ಗಳಿಸಬಹುದು. ಹಣದಿಂದ ಗಳಿಸಿದ ವಸ್ತು, ಒಡವೆ ನಾಶವಾಗಬಹುದು. ಆದರೆ ಪ್ರೀತಿ, ಒಲವಿನಿಂದ ಸಂಪಾದಿಸಿದ ತೋಳಬಂದಿ, ಮುತ್ತು ನಾಶವಾಗದಂಥವು. ಇಂಥ ತುಂಬು ಸಾಂಸಾರಿಕ ಜೀವನವೇ ಸಿರಿತನ ಎಂದು ಬೇರೆ ಹೇಳಬೇಕಿಲ್ಲವೆನಿಸುತ್ತದೆ. ಕವಿಯ ಇಂಗಿತ ಇಲ್ಲಿ ಸ್ಪಷ್ಟ.

ಕುಂದು ಕೊರತೆ ತೋರಲಿಲ್ಲ
ಬೇಕು ಹೆಚ್ಚಿಗೇನು ? (ಅದೇ)

ಎಂದು ಪ್ರಶ್ನಿಸುವ ಸತಿ, ಪತಿ ತನಗೆ ಕೊಟ್ಟ ಅಮೂಲ್ಯ ಜೀವದಲ್ಲೇ ಸಂತೋಷ ಕಾಣುತ್ತಾಳೆ. ಸಂಸಾರದಲ್ಲಿ ಒಲವಿಗಿಂತ ಹೆಚ್ಚು ಏನೂ ಅವಶ್ಯಕವಿಲ್ಲ ಎನಿಸುವುದು ಇಂಥ ಸಂದರ್ಭಗಳಲ್ಲಿಯೇ. ಬೇರೆ ಯಾವ ಅತೃಪ್ತಿಯೂ ಇವರಲ್ಲಿ ಇಲ್ಲ. ಇವರನ್ನು ತುಂಬಿರುವುದು ಒಲವು ಮಾತ್ರ. ಕವಿ ಕೊನೆಗೆ ಹೇಳುವ ಈ ಮಾತುಗಳು ಜೀವಕೇಂದ್ರಿತ ನೆಲೆಯಿಂದ ಅತ್ಯಂತ ಮುಖ್ಯ ಎನಿಸುವುವು.

ಹೊಟ್ಟೆಗಿತ್ತ ಜೀವಫಲವ
ತುಟಿಗೆ ಹಾಲು ಜೇನು (ಅದೇ)

**ಬೇಂದ್ರೆಯವರ ನಿಲುವು ಏನು ? ಅವರ ದೃಷ್ಟಿಕೋನ ಯಾವ ಬಗೆಯದು ? ಬಡವರನ್ನು ಕುರಿತು ಅವರೇಕೆ ಬರೆಯುತ್ತಾರೆ ? ಎಂಬುದು ಅವರ ಬದುಕಿನ ಹಲವು ಸಂಗತಿಗಳಿಂದ ತಿಳಿಯಬಹುದಾದ ವಿಷಯ. ಬದುಕಿನ ದಿನನಿತ್ಯದ ಘಟನೆಗಳ ಜೊತೆಗೆ ಕೆಲವು ಕಾವ್ಯದ ಒಳಗೂ ಕವಿಯ ಅಮೂಲ್ಯ ವ್ಯಕ್ತಿತ್ವದ ರೂಪುರೇಷೆ ಇದ್ದುಬಿಡುತ್ತದೆ. ಇಂಥದನ್ನು ಅರಿತಿರುವುದು ಅತ್ಯವಶ್ಯ. ಬೇಂದ್ರೆಯವರದು ಕ್ರಿಯಾಶೀಲ ಸಮಾಜಮುಖಿ ಮನಸ್ಸು. ಅವರು ಸ್ಥಾವರಕ್ಕಿಂತ ಜಂಗಮಕ್ಕೆ , ಕೊಳೆತ ಮುತ್ತಿಗಿಂತ ಚಿಗುರುವ ಹುಲ್ಲಿಗೆ ಹೆಚ್ಚು ಪ್ರಾಧಾನ್ಯತೆ ಕೊಡುತ್ತಿದ್ದವರು. ಜಡತೆಗೆ ಬದಲು ಚಲನಶೀಲತೆ ಕವಿಯ ಜೀವಂತಿಕೆಯ ಚಿಂತನಾಲಹರಿಯಾಗಿತ್ತು. ಅವರದೇ ಕವನದ ಸಾಲುಗಳು ಅವರ ಅಪೂರ್ವ ವ್ಯಕ್ತಿತ್ವದ ಅಜರಾಮರತೆಗೆ ನಿದರ್ಶನ.**

ಅಸಹನೀಯವಾದ ಬಡತನದ ನೋವಿಗೆ ಒಂದು ಮದ್ದು ಸಾಂಸಾರಿಕ ಪ್ರೀತಿ. ಯಾರು ನಿರಾಶೆಯ ಭಾವನೆಗಳಿಗೆ ಸಿಲುಕಿಕೊಳ್ಳುತ್ತಾರೋ ಅಂಥವರ ಕಥೆ ಮುಗಿದಂತೆಯೇ ಸರಿ. ಪರಿಸ್ಥಿತಿಯು ಕಷ್ಟದ ತುತ್ತತುದಿಗೆ ತಲುಪಿದಾಗ ಸತಿ-ಪತಿಯರ ಪ್ರೀತಿಯ ಬುಗ್ಗೆಯೆ ಜೀವಂತಿಕೆಯ ಸಂಕೇತ. 'ಒಲವೆ ನಮ್ಮ ಬದುಕೆ'ನ್ನುವ ಬೇಂದ್ರೆಯವರಿಂದ ರೂಪು ಪಡೆದ 'ನಾನು ಬಡವಿ' ಬದುಕಿನ ಆಶಾವಾದದೆಡೆಗೆ ಹೆಜ್ಜೆ ಹಾಕುತ್ತದೆ. ''ಬಡತನವನ್ನು ಗೆದ್ದ ಒಲವಿನ ವೈಜಯಂತಿ ಈ ಕವಿತೆಯಲ್ಲಿ ಹಾರಾಡುತ್ತಿದೆ.''

'ಸಖೀಗೀತ' ಬೇಂದ್ರೆಯವರ ಜೀವನಕಾವ್ಯದ ಪ್ರಮುಖ ಕವನ. ಕನ್ನಡ ಸಾಹಿತ್ಯದಲ್ಲಿ ಇದಕ್ಕೆ ಅಪೂರ್ವ ಸ್ಥಾನವಿದೆ. ''ಬೇಂದ್ರೆ ಎಂದರೆ, 'ನೋವಿನ ಕವಿ', ಬೆಂದರೆ ಬೇಂದ್ರೆ, ಎಂಬೆಲ್ಲ ವಿಶೇಷಣಗಳಿಗೆ 'ಸಖೀಗೀತ' ಮಾತೃಕೆಯಂತಿದೆ.'' ಬೇಂದ್ರೆಯವರ ಪಾಡೆಲ್ಲ ಹಾಡಾಗಿ ಹರಿದಿರುವುದು 'ಸಖೀಗೀತ'ದಲ್ಲಿ. ಅತ್ಯಂತ ಕಾವ್ಯಮಯ ಶೈಲಿಯಲ್ಲಿ ಬೇಂದ್ರೆಯವರು ತಮ್ಮ ಸಂಸಾರದ ಸುಖ-ದುಃಖಗಳನ್ನು ಕಾವ್ಯದುದ್ದಕ್ಕೂ ಹೇಳುತ್ತಾ ಹೋಗುತ್ತಾರೆ. ಬೇಂದ್ರೆಯವರ ಬದುಕಿನ ವಿವಿಧ ಆಯಾಮಗಳ ಸೂಕ್ಷ್ಮ ಒಳನೋಟ ಇಲ್ಲಿ ವೇದ್ಯ. ''ಈ ಗೀತದಲ್ಲಿ ನನ್ನ ಜೀವನ ಕಥೆಯ ಹಂದರದ ಮೇಲೆ ಸಾಮಾನ್ಯ ಸಂಸಾರದ ಸುಖದುಃಖದ ಹಂಬನ್ನು ಹಬ್ಬಬಿಟ್ಟಿದ್ದೇನೆ'' ಎಂದು ಹೇಳಿ ಬೇಂದ್ರೆಯವರು 'ಸಖೀಗೀತ'ದ ''ವೈಯಕ್ತಿಕ ಮತ್ತು ಸಾಮಾಜಿಕ ಮುಖಗಳೆರಡನ್ನೂ ಒಮ್ಮೆಲೆ ತೆರೆದು ತೋರಿಸಿದ್ದಾರೆ.''

ಬಡವರ ಸಿಂಗಾರ ಬಯಕೆಗೆ ಮೂಲವು
ನವಮಾಸ ಅಲಸಿಕೆಯಲಿ ಕಳೆದೇ
ಹುಡುಗನ ಜೋಗುಳ ಮುಗಿಲ ಮುಟ್ಟುವದಿತ್ತು
ಮಿಂಚಿತು ಕಾರ್ಯವು ನೀನುಳಿದೇ
(ಬೇಂ.ಸ.ಕಾ.ಸಂ.೩, ಸಖೀಗೀತ, ಪು. ೮೬)

ಮೊದಲ ಹಣ್ಣು ಮಣ್ಣಿಗೆ ಮೀಸಲು. ಅಂತೆಯೇ ತಮ್ಮ ಸಂಸಾರದ ಮೊದಲ ಕುಡಿ ಸಾವನ್ನಪ್ಪಿದುದನ್ನು ಇಲ್ಲಿ ಕವಿ ಹೇಳಿದ್ದಾರೆ. ಕವಿಗೆ ಸುಖ-ಶೋಕಗಳೆರಡೂ ಒಮ್ಮೆಗೇ ಇಲ್ಲಿ ಪುಟಿದೆದ್ದಿವೆ. ಮೊದಲ ಮಗು ಸತ್ತ ಶೋಕವು ಒಂದೆಡೆಯಾದರೆ, ತನ್ನ ಬಾಳಸಂಗಾತಿ ಬದುಕುಳಿದ ಸಂತೋಷ ಮತ್ತೊಂದೆಡೆ. ೧೯೨೩ರ ಅವಧಿಯಲ್ಲಿ ಈ ಘಟನೆ ನಡೆದ ಉಲ್ಲೇಖ ಕವಿಯು ಹೇಳುವುದರಿಂದಲೇ ತಿಳಿದುಬರುತ್ತದೆ. ಕವಿಯ ಚರಿತ್ರೆ ಕಟ್ಟಿಕೊಡುವಲ್ಲಿ ಇಂಥವು ಮುಖ್ಯ. ಆದರೆ ಬೇಂದ್ರೆಯವರಲ್ಲಿ ಕಾವ್ಯ ರಚನೆಯ ಕಾಲ ದೊರೆಯುವುದು ಅಪರೂಪ. ಯಾವಾಗಲೋ ಬರೆದು, ಯಾವಾಗಲೋ ಪ್ರಕಟಿಸುವ ಬೇಂದ್ರೆಯವರಲ್ಲಿ ಅನುಕ್ರಮಣಿಕೆಯಿಲ್ಲ. ಈ ವಿಷಯದಲ್ಲಿ ಕುವೆಂಪು ಪುಣ್ಯವಂತರು.

ಬೇಂದ್ರೆಯವರ ಬದುಕಿನುಯ್ಯಾಲೆ ಮುಂದುವರಿಯುವ ಪರಿ :

ಋತುಗಳ ಏರಿಳಿತ ಕಾಳ ರಿಂಗಣಗುಣಿತ
ಬಿಡಿಬಿಡಿಸಿ ಬರೆದಂತೆ ಚಿತ್ರದೊಳು
ಬಡವರ ಅಲೆದಾಟ, ಹೊಟ್ಟೆಯ ಬೆಂಬತ್ತಿ
ಗುಳೆಯೆತ್ತಿ ಹೊರಟವರ ಹೋರಾಟವು
ದುಡಿವರ ತಿರುಕರ ಕೂಲಿ ಕುಂಬಳಿಯವರ

ಜೀವನ ಮೂಡಿರೆ ಹಾದಿಯೊಳೆ

ನನಗೂ ನಿನಗೂ ಅಂಟದ ನಂಟಿನ

ಕೊನೆ ಬಲ್ಲವರಾರು ಕಾಮಾಕ್ಷಿಯೇ! (ಅದೇ, ಪು. ೯೬)

೧೯೩೪ರ ಅವಧಿಯಲ್ಲಿನ ತಮ್ಮ ಬದುಕಿನ ಸ್ಥಿತಿಯನ್ನು ಕವಿ ಇಲ್ಲಿ ಹೇಳಿರುವರು. ಬಡವರ ಅಲೆದಾಟ, ಹೊಟ್ಟೆ ಹೊರೆದುಕೊಳ್ಳುವುದಕ್ಕಾಗಿ ಗುಳೆಯೆತ್ತಿ ಹೊರಟ ನೋಟ ಇಲ್ಲಿ ಚಿತ್ರಪಟದಂತೆ ಮೂಡಿದೆ. ದುಡಿದು ತಿನ್ನುವ ಸಾಮಾನ್ಯ ಜನರು, ತಿರುಕರು, ಕೂಲಿ ಕುಂಬಳಿಯವರು ಇವರ ಪ್ರತಿದಿನದ ಬದುಕೂ ಹೋರಾಟದ ಹಾದಿಯಲ್ಲಿದೆ. ಅಂದಿನ ದುಡಿಮೆ ಅಂದಿನ ಅನ್ನಕ್ಕೆ ಮೂಲ. ಇಲ್ಲವೆ ಉಪವಾಸ, ಸಾಲ. ಬಡಜೀವನದ ದಾರುಣತೆ ಇಲ್ಲಿ ಸುವ್ಯಕ್ತ.

ಮಾನವನಲ್ಲಿ ಭಿನ್ನ-ಭೇದ, ಮೇಲು-ಕೀಳು ಇವೆಲ್ಲವುಗಳ ಸೃಷ್ಟಿ ಇರುತ್ತದೆ. ಆದರೆ ಪ್ರಕೃತಿಯಲ್ಲಿ ಅಸಮತೆಯ ಚಿತ್ರಣ ಇರದು. ಕವಿ ಸ್ಪಷ್ಟವಾಗಿ ಇದನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ.

ಬಡವ ಬಲ್ಲಿದನೆಂಬ ಭೇದವದಿಲ್ಲದೆ

ಹಾದಿ-ಬೀದಿಗೂ ಸಂದಿಗೊಂದಿಯೊಳೆ

ಹಿಡಿಸದೆ ತುಂಬಿದೆ ತಗ್ಗಿಲ್ಲ ತೆವರಿಲ್ಲ

ಮಿಣುಕು-ತಾರೆಗಳಲ್ಲಿ ತುಳುಕುತಿಹೆ (ಅದೇ, ಪು. ೧೦೩)

ಬೇಂದ್ರೆಯವರು ತಮ್ಮ ಮೂರನೆಯ ಮಗ ಭಾಸ್ಕರ ಮಡಿದಾಗ ಬರೆದ ಕವನ 'ಗಿಳಿಯು ಪಂಜರದೊಳಿಲ್ಲಾ'. ಬಡಸಂಸಾರದಲ್ಲಿ ಬೇಂದ್ರೆ ಹೆಜ್ಜೆ ಹೆಜ್ಜೆಗೂ ಕಷ್ಟಗಳ ಸರಮಾಲೆಯನ್ನೇ ಅನುಭವಿಸಿದರು. ಬದುಕಿನಲ್ಲಿ ಬಡತನ, ಸಂಸಾರದಲ್ಲಿ ಮಗನ ಸಾವು ಅವರನ್ನು ಘಾಸಿಗೊಳಿಸಿದುದರ ಸ್ವರೂಪ ಕವನದ ರೂಪ ತಾಳಿದೆ. ಮಗು ಸತ್ತಾಗ ಬೇಂದ್ರೆಯವರಿಂದ ಬಂದ ಕಾವ್ಯಾಶ್ರುಧಾರೆಗಳಿವು :

ಇದುವೆ ಬಡವಿಯ ಭಾಗ್ಯಾ, ಭೋಗ್ಯಾ,

ಎಂದು ಮನದಲಿ ತಿಳಿದು ನಾ ಬೇ

ರೊಂದು ಬಯಸದೆ 'ಆಗಲಕ್ಷಯ'

ಎಂದೆ - ನೀನೇ ನನ್ನ ಹೊನ್ನೋ ರನ್ನ ಏನೆಂದು...

(ಬೇಂ.ಸ.ಕಾ.ಸಂ. ೩, ಗಿಳಿಯು ಪಂಜರದೊಳಿಲ್ಲಾ, ಪು. ೧೭೮)

'ನೀ ಹಿಂಗ ನೋಡಬ್ಯಾಡ ನನ್ನ', 'ಗಿಳಿಯು ಪಂಜರದೊಳಿಲ್ಲಾ' ನೋವಿನ ಮಡುವಿನಿಂದ ಹುಟ್ಟಿದ ಕವಿತೆಗಳು. ''ಬೇಂದ್ರೆಯವರ ಅತ್ಯುತ್ತಮ ಕಾವ್ಯ ನಿರ್ಮಿತಿಯಾಗಿದ್ದು ಅವರು ಅಭದ್ರತೆ, ಬಡತನ ಮತ್ತು ಸಾವು-ನೋವುಗಳ ವಿಷವೃತ್ತದಲ್ಲಿ ಪರಿಭ್ರಮಿಸುತ್ತಿದ್ದಾಗಲೆಂಬ ಮಾತನ್ನು ಮರೆಯಲಾಗುವುದಿಲ್ಲ. ವಯಸ್ಸಿಗೆ ಬಂದ ಮಕ್ಕಳ ಮರಣ ಒಂದು ಕಡೆಯಾದರೆ, ದೈನಂದಿನ ಉದರಂಭರಣಕ್ಕೂ ಮಾಸ್ತಿಯವರಂಥ ಉದಾರಿಗಳ ನೆರವನ್ನು ಆಧರಿಸಬೇಕಾದ ಸನ್ನಿವೇಶ. ೧೯೪೪ರಲ್ಲಿ ಕಾಲೇಜು ಅಧ್ಯಾಪಕನ ಕೆಲಸ ದೊರೆತಾಗ ಅವರಿಗೆ ೪೮ ವರ್ಷಗಳೆಂದರೆ ಅವರು ಅನುಭವಿಸಿದ ತಲ್ಲಣಗಳ ಕಲ್ಪನೆ ಬರಬಹುದು.'' ಬೇಂದ್ರೆಯವರ ಇಂಥ ನೋವೆಲ್ಲ ಅವರ 'ಸಖೀಗೀತ'ದಲ್ಲಿ ಅಭಿವ್ಯಕ್ತಗೊಂಡಿದೆ. 'ವಿಧಿ ತಂದ ವಧು ನೀನು' ಎಂಬಂತೆ ಅವರು ತಮ್ಮ ಬದುಕಿನಲ್ಲಿ ವಿಧಿ ತಂದ ಸುಖ-ದುಃಖಗಳಿಗೂ ತಮ್ಮನ್ನು ಸಂಪೂರ್ಣ ತೆರೆದುಕೊಂಡರು.

'ಧಾರವಾಡ' ೧೯೧೦-೧೪ ಹಾಗೂ ೧೯೧೮-೩೩ರ ಕಾಲದ ನಡುವಣ ಬೇಂದ್ರೆಯವರ ಜೀವನದ ವಿವಿಧ ಆಯಾಮ ಶ್ರುತಪಡಿಸುವ ಕವನ.

ಬಂದೆ ತವರುಮನೆಗೆ ಬಡತನ ಎಂದೆನೇ ?

ಶಾಲಾ ಮಾಸ್ತರನಾಗಿ ನಾ ಧುಮುಕಿದೆ

ಹೊಸ ಕವನ ಹೇಳುತ್ತ , ಹೊಸ ಧಾಟಿ ಹಾಡುತ್ತ

ಕಾವ್ಯ ಪ್ರಭಾತದ ಹದಿ ಹಾಕಿದೆ (ಬೇಂ.ಸ.ಕಾ.ಸಂ. ೨, ಧಾರವಾಡ, ಪು. ೪೩೩)

೧೯೧೪-೧೮ರವರೆಗೆ ಪುಣೆಯಲ್ಲಿ ಬಿ.ಎ. ಮುಗಿಸಿ ಸ್ವಂತ ಊರು ಧಾರವಾಡಕ್ಕೆ ಬಂದಾಗ ಕವಿಯ ಮನಸ್ಸಿನಲ್ಲಿ ಮೂಡಿದ ಭಾವವಿದು. ಕವಿ ಸ್ವಾತಂತ್ರ್ಯ ಪೂರ್ವದ ಪರಿಸ್ಥಿತಿ ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ.

'ನಾಳಿನಾ ಕನಸು' ಬೇಂದ್ರೆಯವರ ಬದುಕಿನ ಸತ್ಯವನ್ನು ಹೇಳುವ ಕವನ. ಬೇಂದ್ರೆಯವರು ಶ್ರೀಮಂತರ ಜೊತೆ ಇರುವುದಕ್ಕಿಂತ ಬಡವರ ಜೊತೆಯೇ ಇದ್ದು ಅವರಲ್ಲಿ ತಾವೂ ಒಬ್ಬರಾಗಿ ಬೆರೆತುಹೋದುದೇ ಹೆಚ್ಚು. ಇಂಥ ಸಾಲುಗಳಿಂದ ಬೇಂದ್ರೆಯವರ ವ್ಯಕ್ತಿತ್ವದ ಶಿಲ್ಪ ನಿರ್ಮಾಣವಾಗುತ್ತದೆ. ಬೇಂದ್ರೆಯವರದು ಸರಳ ಜೀವನಶೈಲಿ ಎಂಬುದಿಲ್ಲಿ ಅತಿಮುಖ್ಯವಾದುದು.

ಚಳಿ ಚಳಿ ಚಳಿ

ಬಿವಿಲ್ಲನ್

ತಯಾರಾಗಿರೋಣ... ಓಟು ಕೇಳಲು ಬಂದವರ ಚಳಿ ಬಿಡಿಸಲು...

ಇವರು ಯಾವುದಕ್ಕೂ ಪ್ರಯೋಜನ ಇಲ್ಲದಿದ್ದರೂ ಪರವಾಗಿಲ್ಲ... ಚೆನ್ನಾಗಿ ಚಳಿ ಕಾಯಿಸಿಕೊಳ್ಳಲು ಇವರ ಪ್ರತಿಕೃತಿಗಳು ಪ್ರಯೋಜನಕ್ಕೆ ಬಂದವು...







ರೈಟ್... ನೀವಿನ್ನು ಇತರ ಪಕ್ಷಗಳ ಮೇಲೆ ಹಾರಾಡಿ...





ಒಬ್ಬರಿಗೊಬ್ಬರು ಚಳಿ ಕಾಯಿಸಿಕೊಳ್ಳಲು ಸಹಾಯ ಮಾಡುತ್ತಿದ್ದಾರೆ...

ಗುಡಿಸಲವನ್ನೆ ಗುಡಿಯನುವಂತೆ

ಬದುಕುವರೆಲ್ಲಾ ದೀನ ಜನ

ಚಿಂತೆಯ ಬಿಟ್ಟು ಎದೆಗೆದೆ ಕೊಟ್ಟು

ಕಳೆಯುವೆನಲ್ಲಿಯೆ ನನ್ನ ದಿನಾ (ಬೇಂ.ಸ.ಕಾ.ಸಂ.೪, ನಾಳಿನಾ ಕನಸು, ಪು. ೧೦೩)

ಬೇಂದ್ರೆಯವರ ನಿಲುವು ಏನು ? ಅವರ ದೃಷ್ಟಿಕೋನ ಯಾವ ಬಗೆಯದು ? ಬಡವರನ್ನು ಕುರಿತು ಅವರೇಕೆ ಬರೆಯುತ್ತಾರೆ ? ಎಂಬುದು ಅವರ ಬದುಕಿನ ಹಲವು ಸಂಗತಿಗಳಿಂದ ತಿಳಿಯಬಹುದಾದ ವಿಷಯ. ಬದುಕಿನ ದಿನನಿತ್ಯದ ಘಟನೆಗಳ ಜೊತೆಗೆ ಕೆಲವು ಕಾವ್ಯದ ಒಳಗೂ ಕವಿಯ ಅಮೂಲ್ಯ ವ್ಯಕ್ತಿತ್ವದ ರೂಪುರೇಷೆ ಇದ್ದುಬಿಡುತ್ತದೆ. ಇಂಥದನ್ನು ಅರಿತಿರುವುದು ಅತ್ಯವಶ್ಯ. ಬೇಂದ್ರೆಯವರದು ಕ್ರಿಯಾಶೀಲ ಸಮಾಜಮುಖಿ ಮನಸ್ಸು. ಅವರು ಸ್ಥಾವರಕ್ಕಿಂತ ಜಂಗಮಕ್ಕೆ, ಕೊಳೆತ ಮುತ್ತಿಗಿಂತ ಚಿಗುರುವ ಹುಲ್ಲಿಗೆ ಹೆಚ್ಚು ಪ್ರಾಧಾನ್ಯತೆ ಕೊಡುತ್ತಿದ್ದವರು. ಜಡತೆಗೆ ಬದಲು ಚಲನಶೀಲತೆ ಕವಿಯ ಜೀವಂತಿಕೆಯ ಚಿಂತನಾಲಹರಿಯಾಗಿತ್ತು. ಅವರದೇ ಕವನದ ಈ ಸಾಲುಗಳು ಅವರ ಅಪೂರ್ವ ವ್ಯಕ್ತಿತ್ವದ ಅಜರಾಮರತೆಗೆ ನಿದರ್ಶನ :

ಬಿತ್ತಿದರೆ ಬಿತ್ತುವುದು ಮುಕ್ಕು ಚಿಕ್ಕೆಯ ಕಾಳು

ಮುತ್ತು ರತುನವ ಬಿತ್ತಿ ಮಾಡದಿರು ಹೊಲ ಹಾಳು

(ಬೇಂ.ಸ.ಕಾ.ಸಂ. ೨, ಓ ಹಾಡೇ! ಪು. ೧೯)

ಈ ಭಾಗದಲ್ಲಿ ಬೇಂದ್ರೆಯವರ ಬದುಕು ಹಾಗೂ ಬಡತನದ ಅಭಿವ್ಯಕ್ತಿ ಸ್ವರೂಪ ಕಾಣಲಾಗಿದೆ. ಬೇಂದ್ರೆ ಬದುಕಿದಂತೆ ಬರೆದರು, ಬರೆದಂತೆ ಬದುಕಿದರು. ಅವರ ಸಾಮಾಜಿಕ ಕವಿತೆಗಳ ಶ್ರೇಷ್ಠತೆಗೆ ಇದುವೆ ಸಾಕ್ಷಿ. ಸಾಂಸಾರಿಕ ಪ್ರೀತಿ ಬಡತನದ ಸಮಸ್ಯೆಗೆ ಪರಿಹಾರವಾಗಬಲ್ಲದೆಂಬುದು ಇಲ್ಲಿ ಕಂಡುಬರುವ ಸತ್ಯದ ಹೊಳಹು. ಒಟ್ಟಾರೆ ಬೇಂದ್ರೆ ಕಾವ್ಯ ಜೀವನ ಮಹಾಕಾವ್ಯ.

ಎಚ್. ಕೆ. ವೆಂಕಟೇಶ

ಸಂಶೋಧಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು

# ಅಪ್ಪ



ನೆನಪ್ಪಗ ಮಾನ ಅಂದ್ರ ಪ್ರಾಣ
ಮಾನಕ ಪ್ರಾಣಾ ಕೊಟ್ಟಾಂವ
ಮಣ್ಣ-ಮಂದಿನ ನಂಬಿ ಬದುಕಿ
ಮಣ್ಣಾಗ ಮಣ್ಣ ಆದಾಂವ
ನಾಕ ಮಂದ್ಯಾಗs ಕಣ್ಮರೆಯಾದಾಂವ

ಜಾತಿಯಿಂದ ಕಡಮಿ ಅನಸ್ಕೊಂಡ್ರೂ
ಆ ಬೇಲಿ ದಾಟಿ ಹೋದಾಂವ.
'ನಮದು ಗೌಡ್ರ ಮನೆತನ,
ಬೇಕಂದ್ರ ಹೆಳವರಗಿ ಕೇಳ್ರಿ' ಅಂತ
ಹೆಗಲಿಗೆ ಟೈವಲ್‌ಹಾಕಿ ನಕ್ಕೊಂತs ಹೇಳಿದಾಂವ.
ಇಸ್ತ್ರಿ ಇಜಾರ, ಭಟಿ ಶರ್ಟ್
ಗರಿಗರಿ ಟೊಪ್ಪಿಗಿ ಇಟ್ಟ
ಹಾದಿಮ್ಯಾಲ ಮನಷ್ಯಾ ಆಗಿ
ಹರದ ಹೋದಾಂವ.

ಇಬ್ಬರ ಹೆಂಡಿರ ರಸಿಕನಾದರೂ
ಆ ಸುಖದಿಂದ ದೂರ ಉಳದಾಂವ.
ಈ ಕಾರಣಕ್ಕಾಗಿಯೇನೋ
ಕಳ್ಳಬಳ್ಳಿ ಕತ್ತರಿಸಿಕೊಂಡಾಂವ,
ರಕ್ತ ಸಂಬಂಧ ಹರ್‍ಕೊಂಡ ಬಂದಾಂವ
ಅವರs ನನ್ನ ವೈರಿ ಅಂತ ಕೆಂಪಾದಾಂವ.
ಕಡೆವರೆಗೂ ಅವ್ವನ ಸಂಗ,
ಬಾಡಗಿ ಎತ್ತಿನ ಜೋಡಿ
ದನಾ ದುಡದಂಗ ದುಡದಾಂವ.

'ಊರ ಉಪಕಾರ ಅರಿಯದು'
ಅನ್ನೋ ಮಾತ ಗೊತ್ತಿದ್ರೂ
ಊರಿನ ಪಲ್ಲಕ್ಕಿ ಕೆಳಗಿಳಸದಾಂವ;
ಪಲ್ಲಕ್ಕಿಯೊಳಗಿನ ದೇವರಮ್ಯಾಲ ಹಲ್ಲಕಡದಾಂವ.
ಪಾಕೇಟ್ ಪರಮಾತ್ಮ ಒಳಗೆ ಇಳದಾಗ
ಇದ್ದಬಿದ್ದ ಊರಗುಡಿ ಸುತ್ತಹೊಡದ
ಎಲ್ಲಾ ದೇವರ ನೆತ್ತಿ ಬಡದ
ಹೊಟ್ಯಾಗಿನ ಕಿಚ್ಚ ಹೊರಗ ಹಾಕಿ,
ಬಂಡಾಯದ ಲಡ್ಡ ಕಡದಾಂವ.
ಬಡವನ ಸಿಟ್ಟು ದವಡೆಗೆ ಮೂಲ
ನಿಷೇದಾನ ಮಾತ ಕಿಸೆದಾಗ ಅನ್ನುಹಾಂಗ
ಬೆಳಕ ಹರಿಯೋದ್ಕ ಆದs
ಬದುಕಿನ ನೊಗಕೆ ಹೆಗಲ ಕೊಟ್ಟಾಂವ.

ಒಲ್ಯಾಗ ಬೆಕ್ಕಾ ಮಲಗಿಸಿದ ಮನ್ಯಾಗ
ಹಿಟ್ಟ ಇಟ್ಟ ಒಲಿ ಹೊತ್ತಿಸಿದಾಂವ,
ನಾಯಿ ಎಬಿಸಿ ಕಾಳ ಸುರದಾಂವ.
ತನ್ನ ಗುಡಸಲ ತಟ್ಟಿ ಒದ್ದಾವ್ರ,
ಹಂಚ ಹಾರಿಸಿದ್ವಾರ ಮನಿಗಿ
ತೂಲಿ ಇಟ್ಟ ಸೂರ ಹಾಕಿದಾಂವ.
ಉಂಡ ಅಗಲಾಗ ಉಚ್ಚಿ ಹೊಯ್ಯೋ ಮಂದ್ಯಾಗ
ಕಾಲ ಕಳದಾಂವ.

ತನ್ನದನ್ನೋ ಹೊಲ ಇಲದಿದ್ರೂ
ರೈತ ಅನ್ನೋ ಪಟ್ಟ ಕಟ್ಕೊಂಡಾಂವ
ಮಂದಿ ಹೊಲದಾಗ ಹೆಜ್ಜಿ ಮೂಡಿಸಿ
ಊರಿನ ಸೀಮಿ ಹೇಳಿದಾಂವ.
ಮುದಕ ಎತ್ತ ಮಾರಿ
ಹೊಸ ಹೋರಿ ಕೊಳ್ಳಕಟ್ಟಿ
ಹೋಳಿವಾರಿಗಿ ಬೀಜಾ ಬಿತ್ತಿದಾಂವ.
ಊರಿನ ಹುಡುಗೋರ ಕೈಯಾಗ
ಎತ್ತಿನ ಹಗ್ಗಾ ಹಿಡಿಯೋದ ಕಲಿಸಿ
ಚಬಕಾ ಕೊಟ್ಟ, ಕೂರಗಿ ಕಟ್ಟಿ
ಮುಂದಿನ ಹೊಲಕ ಕಳಿಸಿದಾಂವ,
ಕರಲ ಹೊಲದಾಗ ತಾ
ನೆಗಲಾ ಹೊಡದಾಂವ.

ಇರೋದ್ಕ ಮನಿ-ಮಾರ ಮಾಡ್ದ
ಮಕ್ಕಳಿಗಾಗಿ ಆಸ್ತಿ-ಪಾಸ್ತಿ ಗಳಸದ
ಇದ್ರೊಳಗs ಹಸನ ಇದ್ದಾಂವ;
ಹುಟ್ಟಿಸಿದ ಅಪ್ಪನ ಆಸ್ತಿಯೊಳಗ
ನಾಕಮೊಳಾ ಜಾಗಾ ಕೇಳದಾಂವ.
'ಅನ್ಯಾಯ ಮಾಡಬ್ಯಾಡ್ರಿ,
ಮಾಡಿದಾಂವನ ಬಿಡಬ್ಯಾಡ್ರಿ'
ಈ ಮಾತ್ತೊಂದs ಮಕ್ಕಳಿಗಾಗಿ
ಆಸ್ತಿ ಬಿಟ್ಟ ಹೋದಾಂವ.

ದುತ್ತಂತ ಬೆಳೆದ ಮಕ್ಕಳೊಳಗ
ನಾಳಿನ ಕನಸ ಹೆಣದಾಂವ,
ಮಗಳಮ್ಯಾಲ ಜೆಂವಾ ಇಟ್ಟಾಂವ.
ಭಾಳ ವಿಶ್ವಾಸದ ದೊಡ್ಮಗಾ
ಅನ್ಯಜಾತಿ ಹೆಣ್ಣಿನ ಕೈಹಿಡಿದಾಗ
ಕಾಲಾಗ ಮುಳ್ಳಮುರದ್ಹಾಂಗ ಅಳುಕಿದಾಂವ ;
'ನನ್ಮಗಾ ಕಲತಿದ್ದ ಇಷ್ಟಯೇನು ?'
ಹಣೆಗೆ ಪ್ರಶ್ನೆ ಗಂಟಹಾಕಿದಾಂವ
'ನನ್ನ ದೊಡ್ಡ ಸೊಸಿ ಗೌಡತಿ' ಅನ್ಕೊಂತ
ಹಾಕಿದ ಪ್ರಶ್ನೆಗೆ ಉತರ ಹುಡುಕಿ
ತನ್ನೊಳಗs ಖುಷಿ ಪಟ್ಟಾಂವ.
ಕಳೆದಿಟ್ಟ ಭಟಿಶರ್ಟ್
ಮತ್ತ ತೊಡ್ತೇನಿ ಅಂದಾಂವ.
ಹಠಮಾರಿ ಅವ್ವ
ಕಿರಿಮಗನ ಸೊಕ್ಕ
ಬುದ್ಧಿಗೇಡಿ ಸುಳಿಗಿ ಸಿಕ್ಕ ನುಗ್ಗ ಆದಾಂವ.

ತಾ ಕಟ್ಟಿದ ಕನಿಸಿನ ಗಂಟ
ಇಲ್ಲೇ ಬಿಟ್ಟ ಹೇಳ್ದ ಹೋದಾಂವ

ಡಾ|| ಕೆ. ಎಸ್. ದೊಡ್ಡಮನಿ
ಪ್ಲಾಟ್ ನಂ. ೮೦, ಸರಾಫ್ ಕಾಲನಿ, ಖಾನಾಪೂರ ರಸ್ತೆ, ಟಿಳಕವಾಡಿ, ಬೆಳಗಾವಿ - ೫೯೦ ೦೦೬




# ಸಾಧಕ–ಬಾಧಕಗಳು

ಪ್ರತಿದಿನವೂ ಪತ್ರಿಕೆಗಳಲ್ಲಿ ಹಕ್ಕಿಜ್ವರದ ಔಷಧಿಗಳನ್ನು ಅನೇಕ ದೇಶಗಳು ಕೂಡಿಡತೊಡಗಿವೆ ಎಂದೋ, ಏಡ್ಸ್ ರೋಗದ ಲಸಿಕೆಯ ಪ್ರಯೋಗಗಳು ಆಶಾದಾಯಕವಾಗಿವೆ ಎಂದೋ ಅಥವಾ ಥಾಯ್ಲೆಂಡಿನಲ್ಲಿ ಮಹಿಳೆಯೊಬ್ಬಳು ಹಲವು ವರ್ಷ ಹಾಸಿಗೆ ಹಿಡಿದಿದ್ದವಳು ಸ್ಟೆಮ್‌ಸೆಲ್ ಚಿಕಿತ್ಸೆಯಿಂದ ಚೇತರಿಸಿಕೊಂಡಳೆಂದೋ, ಹೀಗೆ ಒಂದಲ್ಲ ಒಂದು ವೈದ್ಯಕೀಯ ಜಗತ್ತಿನ ಹೊಸ ಆವಿಷ್ಕಾರದ ಸುದ್ದಿ ಕಣ್ಣಿಗೆ ಬೀಳುತ್ತಲೇ ಇರುತ್ತದೆ. ಹಿಂದೊಮ್ಮೆ ಊಹಿಸಲೂ ಅಸಾಧ್ಯವಾದ ಸಂಗತಿಗಳನ್ನು ಇಂದು ವೈದ್ಯಕೀಯ ವಿಜ್ಞಾನ ಸಾಧಿಸತೊಡಗಿದೆ. ನವೀನ ತಂತ್ರಜ್ಞಾನಗಳ ಬಳಕೆ ಆ ಕ್ಷೇತ್ರಕ್ಕೆ ಹೊಸದೊಂದು ಆಯಾಮವನ್ನೇ ನೀಡಿದೆ.

ವೈಜ್ಞಾನಿಕ ಯುಗದ ಆರಂಭಕ್ಕೆ ಮುನ್ನ ಔಷಧಿಗಳನ್ನು ಅಂದಾಜಿನ ಮೇಲೆ, ಕೆಲವೊಮ್ಮೆ ತಪ್ಪಾಗಿ, ಬಳಸಿ ಅದರ ಅನುಭವದಿಂದ ಚಿಕಿತ್ಸೆಗಳು ನಡೆಯುತ್ತಿದ್ದವು. ಅಂತಹ ಸಾಂಪ್ರದಾಯಿಕ ಚಿಕಿತ್ಸಾ ಪದ್ಧತಿಗಳು ಜಗತ್ತಿನೆಲ್ಲೆಡೆ ಪ್ರಚಲಿತ ವಿದ್ದವು. ಮುಂದೆ ವಿಜ್ಞಾನದ ವಿವಿಧ ವಿಭಾಗಗಳ ಬೆಳವಣಿಗೆ ಯೊಂದಿಗೆ ಮನುಷ್ಯನ ದೇಹದ ರಚನೆ, ಕ್ರಿಯೆಗಳು, ರೋಗ ಪ್ರಕ್ರಿಯೆಗಳು ಅರಿವಾಗತೊಡಗಿದ ಮೇಲೆ, ವೈಜ್ಞಾನಿಕವಾದ ರೋಗ ಪರೀಕ್ಷಾ ವಿಧಾನಗಳು, ಚಿಕಿತ್ಸಾ ಕ್ರಮಗಳು ಅಸ್ತಿತ್ವಕ್ಕೆ ಬಂದವು. ಹೊಸ ಆವಿಷ್ಕಾರಗಳು, ಸಂಶೋಧನೆಗಳು ತೀವ್ರಗೊಂಡವು. ಇಂದು ಡಿ.ಎನ್.ಎ. ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ಜೆನೆಟಿಕ್ ಇಂಜಿನಿಯರಿಂಗ್‌ಗಳ ಬಳಕೆಯಿಂದಾಗಿ ಅಂಗಕಸಿ, ಸ್ಟೆಮ್‌ಸೆಲ್ ಚಿಕಿತ್ಸೆ, ಜೀನ್ ಚಿಕಿತ್ಸೆಗಳಂತಹ ಅತ್ಯಂತ ಮುಂದುವರಿದ ಚಿಕಿತ್ಸಾ ವಿಧಾನಗಳೂ ಕೂಡ ಸಾಧ್ಯವಾಗ ತೊಡಗಿವೆ. ದಿನಕ್ಕೊಂದು ಹೊಸ ಔಷಧಿ ಮಾರುಕಟ್ಟೆಗೆ ಬಿಡುಗಡೆಯಾಗುತ್ತಲಿದೆ. ಭಾರತದಲ್ಲಿ ಕೂಡ ಇತ್ತೀಚಿನ ದಿನಗಳಲ್ಲಿ ಸಂಶೋಧನೆ, ತಂತ್ರಜ್ಞಾನದ ಬಳಕೆ ಇತ್ಯಾದಿಗಳು ಹೆಚ್ಚುತ್ತಲಿವೆ. ವಿಶ್ವ ವ್ಯಾಪಾರ ಸಂಸ್ಥೆ ಅಸ್ತಿತ್ವಕ್ಕೆ ಬಂದ ಮೇಲೆ ಪೇಟೆಂಟ್ ಕಾಯಿದೆಗೆ ತಿದ್ದುಪಡಿ ತರಲಾಗಿದೆ. ಆದರಿಂದಾಗಿ ಹೊಸ ಹೊಸ ಔಷಧಿಗಳನ್ನು ಅಭಿವೃದ್ಧಿಪಡಿಸುವ ನಿಟ್ಟಿನಲ್ಲಿ ಅನೇಕ ಔಷಧಿ ತಯಾರಿಕಾ ಸಂಸ್ಥೆಗಳು ಪೈಪೋಟಿಗಿಳಿದಿವೆ. ಇವುಗಳ ಪರಿಣಾಮವಾಗಿ ಭಾರತದಲ್ಲಿ ಕ್ಲಿನಿಕಲ್ ಟ್ರಯಲ್‌ಗಳೆಂಬ ಹೊಸ ಪ್ರಯೋಗ ಗಳು ಅನೇಕ ದೊಡ್ಡ ಆಸ್ಪತ್ರೆಗಳು ಮತ್ತು ಸಂಶೋಧನಾ ಸಂಸ್ಥೆಗಳಲ್ಲಿ ಆರಂಭಗೊಂಡಿವೆ. ಈ ಪ್ರಯೋಗಗಳ ದೊಡ್ಡ ಕೇಂದ್ರವಾಗಿ ಭಾರತ ಹೊರಹೊಮ್ಮತೊಡಗಿದೆ.

**ಚಿಕಿತ್ಸಾ ಪ್ರಯೋಗ ಎಂದರೇನು ?**

ಹೊಸ ಔಷಧಿಗಳ ಆವಿಷ್ಕಾರದಲ್ಲಿ ಪ್ರಾಥಮಿಕವಾಗಿ ಉಪಯುಕ್ತವೆಂದು ಕಂಡುಬಂದ ವಸ್ತುಗಳನ್ನು ಮೊದಲು ಪ್ರಾಣಿಗಳ ಮೇಲೆ ಪ್ರಯೋಗ ನಡೆಸಿದ ನಂತರ ಆರೋಗ್ಯವಂತ ಮನುಷ್ಯರ ಮೇಲೆ ಮತ್ತು ರೋಗಿಗಳ ಮೇಲೆ ವಿವಿಧ ಹಂತಗಳಲ್ಲಿ ಪ್ರಯೋಗಿಸಲಾಗುತ್ತದೆ. ಈ ಎಲ್ಲ ಹಂತಗಳಲ್ಲಿ ಯಶಸ್ವಿಯಾದ ನಂತರವೇ ಔಷಧಿ ಮಾರುಕಟ್ಟೆಗೆ ಬಿಡುಗಡೆಗೊಳಿಸಲು ಯೋಗ್ಯವಾಗುತ್ತದೆ.

೧ನೇ ಹಂತ – ಆರೋಗ್ಯವಂತ ವ್ಯಕ್ತಿಗಳ ಮೇಲೆ ಪ್ರಯೋಗಿಸಿ ಔಷಧಿಯ ಸುರಕ್ಷತೆಯನ್ನು ತಿಳಿದುಕೊಳ್ಳುವುದು.

೨ನೇ ಹಂತ – ನಿಯಮಿತ ಸಂಖ್ಯೆಯ ರೋಗಿಗಳಿಗೆ ಕೊಟ್ಟು ಅದರ ಪರಿಣಾಮಕಾರಿ ಡೋಸ್ ಎಷ್ಟೆಂಬುದನ್ನು ನಿರ್ಧರಿಸುವುದು.

೩ನೇ ಹಂತ – ಬಹುಸಂಖ್ಯೆಯ ರೋಗಿಗಳಿಗೆ ನೀಡಿ ಆ ಔಷಧಿಯ ಪರಿಣಾಮಕಾರಿತ್ವ ಮತ್ತು ಸುರಕ್ಷತೆಯ ಬಗ್ಗೆ ಅರಿಯುವುದು.

೪ನೇ ಹಂತ – ಔಷಧಿಯನ್ನು ಮಾರುಕಟ್ಟೆಗೆ ಬಿಡುಗಡೆ ಮಾಡಿದ ಮೇಲೆ ಅದರ ಮೇಲೆ ನಿಗಾ ಇರಿಸುವುದು.

ಹೊಸ ಔಷಧಿಗಳಲ್ಲದೆ ಹೊಸ ರೋಗ ಪತ್ತೆಯ ಪರೀಕ್ಷಾ ಕ್ರಮಗಳು, ಚಿಕಿತ್ಸಾಕ್ರಮಗಳು, ಲಸಿಕೆಗಳು, ಯಂತ್ರೋಪಕರಣಗಳು, ವಿಕಿರಣಶೀಲ ವಸ್ತುಗಳು ಇತ್ಯಾದಿ ಯಾವುದನ್ನೇ ಪರೀಕ್ಷೆಗೊಳಪಡಿಸುವಾಗ ಇದೇ ಕ್ರಮವನ್ನು ಪಾಲಿಸಬೇಕಾಗುತ್ತದೆ. ಹೊಸದಾಗಿ ಅಭಿವೃದ್ಧಿ ಹೊಂದುತ್ತಿರುವ ಕ್ಷೇತ್ರಗಳಾದ ಜೀನೋಮ್ ಸಂಶೋಧನೆ, ಜೆನೆಟಿಕ್ ಇಂಜಿನಿಯರಿಂಗ್, ಸ್ಟೆಮ್‌ಸೆಲ್ ಸಂಶೋಧನೆ, ಮಾನವ ಕ್ಲೋನಿಂಗ್ ಮುಂತಾದ ಕಡೆ ಕ್ಲಿನಿಕಲ್ ಟ್ರಯಲ್‌ಗಳಿಗೆ ಬಹಳ ಬೇಡಿಕೆ ಇರುತ್ತದೆ.

**ಹಿಂದಿನ ಅನುಭವಗಳು**

ರೋಗರುಜಿನಗಳ ವಿರುದ್ಧದ ಮಾನವನ ಸಮರ ಎಂದಿಗೂ ನಿಲ್ಲದ ನಿರಂತರ ಪ್ರಕ್ರಿಯೆಯಾಗಿದೆ. ಔಷಧಿಗಳನ್ನು ಮನುಷ್ಯರಿಗೆ ಕೊಡುವ ಪ್ರಯೋಗ ನಡೆಸಿ, ಪೂರ್ಣವಾಗಿ ಅಧ್ಯಯನ ನಡೆಸದೇ ವೈದ್ಯ ವಿಜ್ಞಾನ ಮುಂದುವರಿಯುವುದೂ ಕೂಡ ಸಾಧ್ಯವಿಲ್ಲ ಎಂಬುದು ಎಲ್ಲರೂ ಒಪ್ಪುವ ವಿಚಾರ. ಆದರೆ ಅದು ಮಾನವನ ಪ್ರಾಣ, ಆರೋಗ್ಯ ಮತ್ತು ಮಾನವ ಹಕ್ಕುಗಳ ಪ್ರಶ್ನೆಯನ್ನು ಒಳಗೊಳ್ಳುವುದರಿಂದ ಅದನ್ನು ನಡೆಸಲು ಕಟ್ಟುನಿಟ್ಟಾದ ನೀತಿ ನಿಯಮಾವಳಿಗಳು ಇರಲೇಬೇಕು. ಈ ಕುರಿತಾದ ಕೋಲಾಹಲ ಮೊದಲು ತಲೆದೋರಿದ್ದು ಎರಡನೇ ಮಹಾಯುದ್ಧದ ನಂತರ ನಡೆದ ನ್ಯೂರೆಂಬರ್ಗ್ ವಿಚಾರಣೆಯ ಸಂದರ್ಭದಲ್ಲಿ. ಜರ್ಮನಿಯಲ್ಲಿ ಹಿಟ್ಲರ್ ಯಹೂದಿ ಸೆರೆಯಾಳುಗಳ ಮೇಲೆ, ಅವರ ಅನುಮತಿ ಇಲ್ಲದೇ ಅನೇಕ ರೀತಿಯ ವೈದ್ಯಕೀಯ ಪ್ರಯೋಗಗಳನ್ನು ನಡೆಸಿದ್ದ ಎಂಬುದು ಆಗ ಬೆಳಕಿಗೆ ಬಂದಿತು. ಮುಂದೆ ಇಂತಹ ಕ್ರೂರ ಕೃತ್ಯಗಳು ಜಗತ್ತಿನಲ್ಲಿ ಮರುಕಳಿಸಬಾರದೆಂದು ೧೯೪೭ರಲ್ಲಿ ನ್ಯೂರೆಂಬರ್ಗ್ ಕೋಡ್ ಮತ್ತು ೧೯೬೪ರಲ್ಲಿ ಹೆಲ್ಸಿಂಕಿ ಡಿಕ್ಲರೇಷನ್‌ಗಳನ್ನು ಅಂಗೀಕರಿಸಲಾಯಿತು. ಅನಂತರದ ದಿನಗಳಲ್ಲಿ ತೀವ್ರವಾಗಿ ನಿಂದನೆಗೆ ಗುರಿಯಾದ ಇನ್ನೊಂದು ಘಟನೆ ಅಮೆರಿಕಾದಲ್ಲಿ ಬೆಳಕಿಗೆ ಬಂದಿತು. ಅಮೆರಿಕಾದ ಆರೋಗ್ಯ ಇಲಾಖೆ ಅಲಬಾಮಾದ ಟಸ್ಕಜೀ ಎಂಬಲ್ಲಿ ೩೯೯ ಜನ ನೀಗ್ರೋಗಳ ಮೇಲೆ ೧೯೩೨ರಿಂದ ೧೯೭೨ರವರೆಗೆ ೪೦ ವರ್ಷಗಳಷ್ಟು ದೀರ್ಘಕಾಲ ಸಿಫಿಲಿಸ್ ರೋಗಿಗಳಿಗೆ, ಆಗ ಚಿಕಿತ್ಸೆ ಲಭ್ಯವಿದ್ದರೂ ನೀಡದೇ ರೋಗದ ಪರಿಣಾಮಗಳನ್ನು ತಿಳಿದುಕೊಳ್ಳುವ ಅಮಾನವೀಯ ಪ್ರಯೋಗ ನಡೆಸಿತು. ಇದು ಮಾನವನ ಇತಿಹಾಸದಲ್ಲಿಯೇ ಅತಿ ದೀರ್ಘಕಾಲ ನಡೆದ ಔಷಧಿಯಲ್ಲದ ವೈದ್ಯಕೀಯ ಪ್ರಯೋಗವಾಗಿತ್ತು. ಇವರಲ್ಲಿ ಅನೇಕ ಜನ ರೋಗದಿಂದ ಸಾವಿಗೀಡಾದರು ! ಇನ್ನೂ ಅನೇಕರು ರೋಗ ಹರಡುವುದಕ್ಕೆ ಕಾರಣರಾದರು !!

೧೯೯೯ರಲ್ಲಿ ಅಮೆರಿಕಾದ ಪೆನ್ಸಿಲ್ವೇನಿಯಾ ವಿಶ್ವವಿದ್ಯಾನಿಲಯದಲ್ಲಿ ನಡೆದ ಜೀನ್ ಥೆರಪಿ ಪ್ರಯೋಗದ ಪರಿಣಾಮವಾಗಿ ೧೮ ವರ್ಷದ ಜೆಸ್ಸಿ ಗೆಲ್ಸಿಂಗರ್ ಎಂಬ ಯುವತಿ ಸಾವಿಗೀಡಾಗಬೇಕಾಯಿತು. ೨೦೦೬ನೇ ಇಸವಿಯಲ್ಲಿ ಲಂಡನ್‌ನ ಆಸ್ಪತ್ರೆಯೊಂದರಲ್ಲಿ ಸಂಧಿವಾತ ರೋಗದ ಔಷಧಿಯನ್ನು ಆರೋಗ್ಯವಂತ ಮನುಷ್ಯರ ಮೇಲೆ ಪ್ರಯೋಗ ನಡೆಸಿದಾಗ ಅವರಲ್ಲಿ ಅನೇಕ ಜನರ ದೇಹಗಳು ವಿಪರೀತ ಊದಿಕೊಂಡು, ಹಲವು ಅಂಗಗಳು ಊನವಾಗಿದ್ದು, ಅವರು ಇನ್ನೂ ಕೂಡ ಚಿಕಿತ್ಸೆಗೆ ಸ್ಪಂದಿಸದೇ ಆಸ್ಪತ್ರೆಗಳಲ್ಲಿ ಬವಣೆಪಡುತ್ತಿದ್ದಾರೆ. ಈ ಮೇಲಿನ ಎಲ್ಲ ಘಟನೆಗಳನ್ನು ಅವಲೋಕಿಸಿದಾಗ ಈ ಕ್ಲಿನಿಕಲ್ ಟ್ರಯಲ್‌ಗಳು ಜನ ಅಂದುಕೊಂಡಷ್ಟು ಅಪಾಯರಹಿತವೇನೂ ಅಲ್ಲ ಎಂಬುದು ಸ್ಪಷ್ಟವಾಗುತ್ತದೆ. ಮುಂದುವರಿದ ದೇಶಗಳಲ್ಲೇ ಇಂತಹ ಅನಾಹುತಗಳು ನಡೆದಿರಬೇಕಾದರೆ, ಭಾರತದಲ್ಲಿ ನಾವು ಕ್ಲಿನಿಕಲ್ ಟ್ರಯಲ್‌ಗಳನ್ನು

ಡಾ|| ಸುರೇಶ್ ಹೆಗ್ಡೆ ಬಿ.

ನಡೆಸಲು ಕಂಪನಿಗಳಿಗೆ ಮುಕ್ತ ಅವಕಾಶ ನೀಡುವ ಮೊದಲು ಸ್ವಲ್ಪ ಯೋಚಿಸಬೇಕಾಗಿತ್ತಲ್ಲವೆ ?

**ನಮ್ಮ ದೇಶದ ಸ್ಥಿತಿ**

ಬೇರೆ ದೇಶಗಳಲ್ಲಿ ನಡೆದಂತಹ ಅನಾಹುತಗಳು ಭಾರತದಲ್ಲೂ ನಡೆದಿಲ್ಲ ಎಂದೇನೂ ಅಲ್ಲ. ಇಲ್ಲಿ ನಡೆದ ಘಟನೆಗಳಿಗೆ ಅಷ್ಟು ಪ್ರಚಾರ ಸಿಗಲಿಲ್ಲ ಅಷ್ಟೇ. ಕೆಲವು ವರ್ಷಗಳ ಹಿಂದೆ ಭಾರತದಲ್ಲಿ ಅಮೆರಿಕಾದ ಖಾಸಗಿ ಸಂಶೋಧನಾ ಸಂಸ್ಥೆಯೊಂದು ಮಲೇರಿಯಾ ರೋಗದಲ್ಲಿ ಬಳಕೆಯಾಗುವ ಕ್ವಿನಾಕ್ರೈನ್ ಎಂಬ ಔಷಧಿಯನ್ನು ಗರ್ಭನಿರೋಧಕವಾಗಿ ಮಹಿಳೆಯರ ಗರ್ಭಕೋಶದೊಳಗೆ ಸೇರಿಸುವ ಪ್ರಯೋಗವನ್ನು ನಡೆಸಿತ್ತು. ಅದರಿಂದಾಗುವ ದುಷ್ಪರಿಣಾಮಗಳು ಗೊತ್ತಾಗಿ ಅನೇಕ ಸಂಘ-ಸಂಸ್ಥೆಗಳು ಅದನ್ನು ವಿರೋಧಿಸುವ ಹೊತ್ತಿಗಾಗಲೇ ಮೂವತ್ತು ಸಾವಿರ ಮಹಿಳೆಯರ ಮೇಲೆ ಅದನ್ನು ಪ್ರಯೋಗಿಸಲಾಗಿತ್ತು. ಅದರಲ್ಲಿ ೧೦ ಸಾವಿರ ಮಹಿಳೆಯರು ಪಶ್ಚಿಮ ಬಂಗಾಳದವರಾಗಿದ್ದರು. ಈ ಪ್ರಯೋಗದ ವಿರುದ್ಧ ಸಂಘಟನೆಗಳು ಸುಪ್ರೀಂ ಕೋರ್ಟಿನ ಮೊರೆಹೋದಾಗ ಈ ಔಷಧಿ ಪ್ರಯೋಗವನ್ನು ಕೋರ್ಟು ನಿಷೇಧಿಸಿತು.

೧೯೭೬ರಿಂದ ೮೮ರವರೆಗೆ ಭಾರತೀಯ ವೈದ್ಯಕೀಯ ಸಂಶೋಧನಾ ಸಂಸ್ಥೆ (ಐ.ಸಿ.ಎಂ.ಆರ್.) ಆಶ್ರಯದಲ್ಲಿ ನವದೆಹಲಿಯ ಇನ್‌ಸ್ಟಿಟ್ಯೂಟ್ ಆಫ್ ಸೈಟಾಲಜಿ ಆ್ಯಂಡ್ ಪ್ರಿವೆಂಟಿವ್ ಆಂಕಾಲಜಿ ಸಂಸ್ಥೆ ೧೧೫೦ ಮಹಿಳೆಯರಲ್ಲಿ ಗರ್ಭಕೋಶದ ಕ್ಯಾನ್ಸರ್‌ನ ಪೂರ್ವಭಾವಿ ಹಂತ ಹೇಗೆ ಉಲ್ಬಣಗೊಳ್ಳುತ್ತದೆ ಎಂಬುದನ್ನು ಅಧ್ಯಯನ ಮಾಡಲು ಅವರಿಗೆ ಚಿಕಿತ್ಸೆ ನೀಡದೇ ಪ್ರಯೋಗಕ್ಕೆ ಒಳಪಡಿಸಿತು. ಇದರ ಪರಿಣಾಮವಾಗಿ ೭೧ ಮಹಿಳೆಯರು ಪೂರ್ಣಪ್ರಮಾಣದ ಕ್ಯಾನ್ಸರ್‌ಗೆ ತುತ್ತಾದರು. ರೋಗಕ್ಕೆ ಚಿಕಿತ್ಸೆ ಸಾಧ್ಯವಿದ್ದರೂ ನೀಡದೇ ನಡೆಸಿದ ಈ ಪ್ರಯೋಗ ಅಮೆರಿಕಾದ ಟಸ್ಕಜೀ ಪ್ರಯೋಗವನ್ನೇ ಹೋಲುವುದಿಲ್ಲವೆ ? ಈ ಪ್ರಯೋಗ ನಡೆಸಲು ಅನಕ್ಷರಸ್ಥರಾದ ಮಹಿಳೆಯರಿಂದ ಬರೀ ಬಾಯಿಮಾತಿನ ಒಪ್ಪಿಗೆ ಪಡೆಯಲಾಗಿತ್ತು! ಇತ್ತೀಚೆಗೆ ಭಾರತದ ಎರಡು ಸುಪ್ರಸಿದ್ಧ ಬಯೋಟೆಕ್ನಾಲಜಿ ಸಂಸ್ಥೆಗಳು ಹೃದಯಾಘಾತದಲ್ಲಿ ರಕ್ತ ಹೆಪ್ಪುಗಟ್ಟದಂತೆ ತಡೆಯುವ ಔಷಧಿಗಳನ್ನು ಹಲವು ಜನರ ಮೇಲೆ ಪ್ರಯೋಗಿಸಿದವು. ಅವರಲ್ಲಿ ೮ ಜನ ಮರಣ ಹೊಂದಿದರು. ಈ ವಿಷಯ ಸುಪ್ರೀಂ ಕೋರ್ಟಿನವರೆಗೆ ಹೋಗಿ ಆ ಸಂಸ್ಥೆಗಳಿಗೆ ಕೋರ್ಟು ಛೀಮಾರಿ ಹಾಕಿದ್ದು ಎಷ್ಟು ಜನರಿಗೆ ಗೊತ್ತಿದೆ ?

ಈ ಘಟನೆಗಳು ಕೆಲವು ಉದಾಹರಣೆಗಳಷ್ಟೇ. ಇಂತಹ ಇನ್ನೂ ಅನೇಕ ಘಟನೆಗಳು ಜನರ ಗಮನಕ್ಕೆ ಬಾರದೇ ಮುಚ್ಚಿಹೋಗಿವೆ. ಈ ಘಟನೆಗಳ ಪರಿಣಾಮವಾಗಿ ಮತ್ತು ವೈದ್ಯಕೀಯ ಕ್ಷೇತ್ರದ ತೀವ್ರಗತಿಯ ಬೆಳವಣಿಗೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಐ.ಸಿ.ಎಂ.ಆರ್. ೧೯೯೬ರಲ್ಲಿ ಜಸ್ಟೀಸ್ ಎಂ. ಎನ್. ವೆಂಕಟಾಚಲಯ್ಯನವರ ನೇತೃತ್ವದಲ್ಲಿ ಸಮಿತಿಯೊಂದನ್ನು ನೇಮಿಸಿ, ಕ್ಲಿನಿಕಲ್ ಟ್ರಯಲ್‌ಗಳ ಕುರಿತಾದ ಸಮಗ್ರ ಮಾರ್ಗದರ್ಶಿ ಸೂತ್ರಗಳನ್ನು ರೂಪಿಸಲು ಕೇಳಿಕೊಂಡಿತು. ಆ ಸಮಿತಿಯ ಶಿಫಾರಸುಗಳನ್ವಯ ೨೦೦೦ನೇ ಇಸವಿಯಲ್ಲಿ 'ಮಾನವನ ಮೇಲೆ ಬಯೋ ಮೆಡಿಕಲ್ ಸಂಶೋಧನೆ ನಡೆಸುವುದಕ್ಕೆ ನೈತಿಕತೆಯ ಮಾರ್ಗದರ್ಶಿ ಸೂತ್ರಗಳು' ಎಂಬ ನಿಯಮಾವಳಿಯೊಂದನ್ನು ಐ.ಸಿ.ಎಂ.ಆರ್. ಅಂಗೀಕರಿಸಿತು. ಆದರೆ ಸಮಸ್ಯೆ ಅಷ್ಟಕ್ಕೇ ಪರಿಹಾರವಾದಂತಾಗುವುದಿಲ್ಲ. ಏಕೆಂದರೆ ಇತ್ತೀಚಿನ ದಿನಗಳಲ್ಲಿ ಈ ಮಾರ್ಗದರ್ಶನದ ಪ್ರಕಾರವೇ ಪ್ರಯೋಗಗಳು ನಡೆಯುತಿವೆ ಎಂಬ ಕುರಿತು ಹಲವು ಕಡೆ ಸಂಶಯಗಳಿದ್ದಿವೆ. ಅನೇಕ ಪತ್ರಿಕೆಗಳಲ್ಲೂ ಈ ಬಗ್ಗೆ ವರದಿಗಳು ಪ್ರಕಟಗೊಂಡಿವೆ.

**ಈಚಿನ ಬೆಳವಣಿಗೆಗಳು**

ಒಂದು ದಶಕದ ಹಿಂದೆ ಭಾರತದಲ್ಲಿ ನಾಲ್ಕೈದು ಕ್ಲಿನಿಕಲ್ ಟ್ರಯಲ್ ನಡೆಸುವ ಸಂಶೋಧನಾ ಸಂಸ್ಥೆಗಳಿದ್ದರೆ ಇಂದು ಅವುಗಳ ಸಂಖ್ಯೆ ೫೦ನ್ನೂ ಮೀರಿವೆ. ಇವೆಲ್ಲವೂ ಖಾಸಗಿ ಕ್ಷೇತ್ರದ ದೇಶೀ ಹಾಗೂ ವಿದೇಶೀ ಸಂಸ್ಥೆಗಳು ಎಂಬುದು ಕುತೂಹಲಕರ ಅಂಶ. ಹಲವು ವಿದೇಶೀ ಔಷಧ ತಯಾರಿಕಾ ಸಂಸ್ಥೆಗಳು, ಆಸ್ಪತ್ರೆಗಳು ಇವುಗಳಿಗೆ ಸಂಶೋಧನೆಯ ಹೊರಗುತ್ತಿಗೆ ನೀಡುತ್ತಿವೆ. ಅಮೆರಿಕಾದಂತಹ ಮುಂದುವರಿದ ದೇಶದಲ್ಲಿ ಮಿಲಿಯಗಟ್ಟಲೆ ಡಾಲರ್‌ಗಳನ್ನು ಸುರಿಯಬೇಕಾದ ಕೆಲಸ ಇಲ್ಲಿ ಕೆಲವೇ ಸಾವಿರ ಡಾಲರ್‌ಗಳಲ್ಲಿ ಮುಗಿಯುತ್ತದೆ ಎಂಬುದು ಇಲ್ಲಿನ ಪ್ರಮುಖ ಆಕರ್ಷಣೆ. ಟ್ರಯಲ್‌ಗಳನ್ನು ನಡೆಸಲು ಅರ್ಹತೆಯುಳ್ಳವರೂ ಇಲ್ಲಿ ಹೇರಳವಾಗಿ ದೊರೆಯುತ್ತಾರೆ. ಆದರೆ ಇದಕ್ಕಿಂತ ಅಪಾಯಕಾರಿ ಅಂಶವೆಂದರೆ ಪ್ರಯೋಗಕ್ಕೆ ಒಳಗಾಗಲು ಜನ ಇಲ್ಲಿ ಸುಲಭವಾಗಿ ದೊರೆಯುತ್ತಾರೆ! ಇಂತಹ ಕಾರಣಕ್ಕಾಗಿ ಈ ದೇಶದಲ್ಲಿ ತಲೆಯೆತ್ತಿರುವ ಸಂಸ್ಥೆಗಳು ಜನರ ಆರೋಗ್ಯದ ಕಾಳಜಿಯಿಂದ ಸಂಶೋಧನೆ ನಡೆಸುತ್ತವೆಯೋ ಅಥವಾ ತಮ್ಮ ಜೇಬು ಭರ್ತಿ ಮಾಡಿಕೊಳ್ಳಲು ಹವಣಿಸುತ್ತಿವೆಯೋ ಎಂಬುದು ನಿಮ್ಮ ಊಹೆಗೆ ಬಿಟ್ಟ ವಿಚಾರ.

ಈಗಾಗಲೇ ದೇಶದ ಪ್ರಮುಖ ನಗರಗಳಲ್ಲಿ ದೊಡ್ಡ ಆಸ್ಪತ್ರೆಗಳಲ್ಲಿ ಕ್ಲಿನಿಕಲ್ ಟ್ರಯಲ್ ದೊಡ್ಡ ಉದ್ಯಮವಾಗಿ ಪ್ರಾರಂಭವಾಗಿಬಿಟ್ಟಿದೆ. ಭಾರತದಲ್ಲಿ ೨೦೧೦ರ ಹೊತ್ತಿಗೆ ೨ ಮಿಲಿಯನ್ ರೋಗಿಗಳು ಈ ಟ್ರಯಲ್‌ಗಳಲ್ಲಿ ಭಾಗವಹಿಸಲಿದ್ದಾರೆ ಮತ್ತು ಈ ಕ್ಷೇತ್ರದ ವಹಿವಾಟು ೧೫ ಬಿಲಿಯನ್ ಡಾಲರ್ ಮುಟ್ಟುವ ನಿರೀಕ್ಷೆ ಇದೆ. ಕ್ಲಿನಿಕಲ್ ಟ್ರಯಲ್‌ಗಳಲ್ಲಿ ಯಾವುದೇ ಪ್ರಲೋಭನೆ ಮತ್ತು ಒತ್ತಡ ಇರಬಾರದು ಎಂಬುದು ಒಂದು ಪ್ರಮುಖವಾದ ನಿಯಮ. ಆದರೆ ಹಣ ಕೊಟ್ಟರೆ ಕಿಡ್ನಿ ದೊರೆಯುವ ಈ ದೇಶದಲ್ಲಿ ಆಮಿಷ, ಒತ್ತಡ ಇಲ್ಲವೆಂದರೆ ನಂಬಬಹುದೇ? ಆರೋಗ್ಯವಂತ ವ್ಯಕ್ತಿಗೆ ದಿನಕ್ಕೆ ೪ ಸಾವಿರ ರೂಪಾಯಿ ನೀಡಿ ಆತನನ್ನು ಕ್ಲಿನಿಕಲ್ ಟ್ರಯಲ್‌ಗಳಿಗೆ ಒಳಪಡಿಸಿದ ಘಟನೆ ಬೆಂಗಳೂರಿನಲ್ಲಿ ನಡೆದಿರುವುದನ್ನು ಪತ್ರಿಕೆಗಳು ವರದಿ ಮಾಡಿವೆ. ಪ್ರಯೋಗದಲ್ಲಿ ಭಾಗವಹಿಸುವ ವ್ಯಕ್ತಿಯಿಂದ ಆತನ ಪೂರ್ಣ ಅರಿವಿನಿಂದ ಒಪ್ಪಿಗೆ ಪತ್ರ ಬರೆಸಿಕೊಳ್ಳಬೇಕೆಂಬುದು ಇನ್ನೊಂದು ನಿಯಮ. ಅಕ್ಷರ ಜ್ಞಾನವಿಲ್ಲದ ಅಮಾಯಕ ಜನ ಪ್ರಯೋಗದ ಎಲ್ಲ ಆಗುಹೋಗುಗಳನ್ನು ಅದರಿಂದಾಗಬಹುದಾದ ಅಪಾಯಗಳನ್ನು ಹಾಗೂ ತಮ್ಮ ಹಕ್ಕುಗಳನ್ನು ತಿಳಿದುಕೊಂಡು ಅದಕ್ಕೆ ಒಪ್ಪಿಗೆ ಕೊಡುತ್ತಾರೆಂದು ನಿರೀಕ್ಷಿಸಲು ಸಾಧ್ಯವೆ ? ಹಾಗಾಗಿ ಅವರು ಪ್ರಯೋಗ ಪಶುಗಳಾಗುವ ಸಾಧ್ಯತೆ ಹೆಚ್ಚಾಗಿರುತ್ತದೆ. ಇದರಲ್ಲಿ ಭಾಗವಹಿಸುವ ವೈದ್ಯರು ತಮ್ಮ ಜವಾಬ್ದಾರಿಯನ್ನು ಅರಿತು ನಡೆಯದಿದ್ದರೆ ಅಮಾಯಕ ಜನರನ್ನು ರಕ್ಷಿಸುವವರಾರು ?

ವೈದ್ಯಕೀಯ ಸಂಶೋಧನೆ ನಡೆಸುವ ವ್ಯಕ್ತಿಗೆ ಆ ಸಂಶೋಧನೆಯಲ್ಲಿ ವೈಯಕ್ತಿಕ ಹಿತಾಸಕ್ತಿ ಇರಬಾರದು ಎಂದು ಇನ್ನೊಂದು ನಿಯಮವೂ ಇದೆ. ಅನೇಕ ಔಷಧಿ ತಯಾರಿಕಾ ಸಂಸ್ಥೆಗಳು ತಾವೇ ಆಸ್ಪತ್ರೆಗಳನ್ನು ನಡೆಸುತ್ತಾ ಅಲ್ಲಿ ತಮ್ಮ ಕಂಪನಿಯ ಔಷಧಗಳನ್ನು ಪ್ರಯೋಗಕ್ಕೆ ಬಳಸಿದರೆ, ಈ ನಿಯಮವನ್ನು ಗಾಳಿಗೆ ತೂರಿದಂತಾಗುವುದಿಲ್ಲವೆ ? ಪ್ರಯೋಗದಿಂದ ಹೊರ ಹೊಮ್ಮುವ ಅಂಕಿಅಂಶಗಳು ಆ ಔಷಧವನ್ನು ಪರಿಣಾಮಕಾರಿ ಎಂದು ಖಚಿತಪಡಿಸಿದರೆ ಅದನ್ನು ನಂಬುವುದು ಹೇಗೆ? ಹೀಗೆ ನೀತಿ-ನಿಯಮಾವಳಿಗಳು ಐ.ಸಿ.ಎಂ.ಆರ್.ನ ಕಡತಗಳಲ್ಲಿ ಮಾತ್ರ ಉಳಿದುಬಿಡಬಹುದೆಂಬ ಭಯ ಅನೇಕರನ್ನು ಕಾಡತೊಡಗಿದೆ.

**ನಮ್ಮ ನಿರೀಕ್ಷೆ**

ಸಂಶೋಧನೆಗಳಿಲ್ಲದೆಯೇ ಆರೋಗ್ಯ ಕ್ಷೇತ್ರ ಮುಂದುವರಿಯುವುದು ಸಾಧ್ಯವಿಲ್ಲ. ಆದರೆ ಜನಸಾಮಾನ್ಯರಿಗೆ ತೀರಾ ಅಗತ್ಯವಾದ ಸಾಂಕ್ರಾಮಿಕ ರೋಗಗಳ ಚಿಕಿತ್ಸೆ ಮತ್ತು ತಡೆಗಟ್ಟುವಿಕೆಯ ಬಗ್ಗೆ ಸಂಶೋಧನೆಗಳು ಏಕೆ ನಡೆಯುತ್ತಿಲ್ಲ? ಮಲೇರಿಯಾ, ಕ್ಷಯರೋಗ, ಕುಷ್ಠರೋಗ, ಕಾಲಾ ಅಜಾರ್ ಮುಂತಾದ ರೋಗಗಳು ಭಾರತದಲ್ಲಿ ಲಕ್ಷಾಂತರ ಜನರನ್ನು ಬಲಿತೆಗೆದುಕೊಳ್ಳುತ್ತಿವೆ. ಇವುಗಳಿಗೆ ಹೊಸ ಪರಿಣಾಮಕಾರಿ ಔಷಧಿಗಳು ಮತ್ತು ರೋಗ ನಿರೋಧಕ ಲಸಿಕೆಗಳನ್ನು ಸಂಶೋಧಿಸುವತ್ತ ತೀವ್ರ ಗಮನ ಹರಿಸಬೇಕಿದೆ. ಸರ್ಕಾರಿ ಸಂಸ್ಥೆಗಳಲ್ಲಿ ಕೂಡ ಸಾರ್ವಜನಿಕ ಆರೋಗ್ಯ ಕ್ಷೇತ್ರಕ್ಕೆ ಅಗತ್ಯವಾಗಿರುವ ಔಷಧಿಗಳ ಸಂಶೋಧನೆ ನಡೆಯಬೇಕು. ಏಕೆಂದರೆ ದೇಶದ ಖಾಸಗಿ ಸಂಸ್ಥೆಗಳಲ್ಲಿ ನಡೆಯುತ್ತಿರುವ ಸಂಶೋಧನೆಗಳಲ್ಲಿ ಹಣಗಳಿಕೆಯ ದಾಹವೇ ಹೆಚ್ಚಾಗಿ ಕಾಣುತ್ತಿದ್ದು, ಜನರ ಆರೋಗ್ಯದ ಬಗೆಗಿನ ಕಾಳಜಿ ಎಳ್ಳಷ್ಟೂ ಕಂಡುಬರುತ್ತಿಲ್ಲ.

ಖಾಸಗಿ ಸಂಸ್ಥೆಗಳ ಸಂಶೋಧನೆಗಳಲ್ಲಿ ಪಾರದರ್ಶಕತೆಯ ಕೊರತೆ ಎದ್ದುಕಾಣುತ್ತಿರುವ ಸಮಸ್ಯೆಯಾಗಿದೆ. ಅವುಗಳ ಮೇಲೆ ಸರ್ಕಾರದ ಹತೋಟಿ ಸಂಪೂರ್ಣವಾಗಿ ಇಲ್ಲವಾದರೆ, ಅವು ಜನರನ್ನು ಪ್ರಯೋಗಪಶುಗಳನ್ನಾಗಿಸುವ ದಂಧೆಯಾಗಿಬಿಡಬಹುದು. ಅದಕ್ಕಾಗಿ ಸರ್ಕಾರ ಐ.ಸಿ.ಎಂ.ಆರ್. ಮಾರ್ಗದರ್ಶಿ ಸೂತ್ರಗಳನ್ನು ಪಾಲಿಸದವರ ಮೇಲೆ ಕಠಿಣಕ್ರಮ ಜರುಗಿಸಲು ಸಾಧ್ಯವಾಗುವಂತೆ, ತಪ್ಪಿತಸ್ಥರಿಗೆ ಜೈಲು ಶಿಕ್ಷೆ ನೀಡಲು ಅನುಕೂಲವಾಗುವಂತೆ ಕಾನೂನಿನಲ್ಲಿ ಸೂಕ್ತ ಬದಲಾವಣೆಗಳನ್ನು ತರಬೇಕು. ಮುಂದುವರಿದ ದೇಶಗಳಲ್ಲಿರುವಂತೆಯೇ ಇಲ್ಲಿ ಕೂಡ ಕ್ಲಿನಿಕಲ್ ಟ್ರಯಲ್‌ಗಳ ಮೇಲುಸ್ತುವಾರಿ ಮಾಡಲು ಬೋರ್ಡ್ ಒಂದನ್ನು ರಚಿಸಬೇಕು. ಇಷ್ಟೇ ಅಲ್ಲದೆ ಮಾಧ್ಯಮಗಳ ಮೂಲಕ ಕ್ಲಿನಿಕಲ್ ಟ್ರಯಲ್‌ಗಳ ಬಗ್ಗೆ ಜನರಲ್ಲಿ ಸರಿಯಾದ ತಿಳುವಳಿಕೆ ಮೂಡಿಸಿ, ಅವರು ತಪ್ಪು ನಿರ್ಧಾರಗಳನ್ನು ತೆಗೆದುಕೊಂಡು ಬಲಿಪಶುಗಳಾಗದಂತೆ ತಡೆಯುವ ಕ್ರಮಗಳನ್ನು ಸರ್ಕಾರ ಕೈಗೊಳ್ಳಬೇಕು. ಈ ಎಲ್ಲ ಮುಂಜಾಗ್ರತಾ ಕ್ರಮಗಳನ್ನೂ ಸಂಬಂಧಪಟ್ಟ ಎಲ್ಲರೂ ಅನುಸರಿಸಿದಾಗ ಮಾತ್ರವೇ ಜನ ಇದನ್ನು ಒಪ್ಪಿಕೊಳ್ಳಬಹುದು.

**ಡಾ|| ಸುರೇಶ್ ಹೆಗ್ಡೆ ಬಿ.**
ಆನಂದ್ ಕ್ಲಿನಿಕ್, ೧೭೮, ಬಿ.ಇ.ಎಂ.ಎಲ್. ಬಡಾವಣೆ, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

**ಸಂಸಾರ**

ಭವ ಬಂಧನಗಳಲಿ
ಸಿಲುಕಿ
ಹೊಸ ಬಂಧಗಳ
ಬೆಸೆದು
ಜೀವಧಾರೆಯನೆರೆವ
ಸಾಗರ

ನಾ. ದಿವಾಕರ

# ಸ್ವಾಭಾವಿಕ ಜೇನುನೊಣದಿಂದ ಮನುಷ್ಯನಿಗೆ ಆಗುವ ಬಹೂಪಯೋಗಗಳು

ರೈತನ ಮಿತ್ರರಲ್ಲಿ ಜೇನುಳುಗಳು ಅಥವಾ ಜೇನುನೊಣಗಳು ತಮ್ಮ ವಿಶಿಷ್ಟ ಕೊಡುಗೆಗಳಿಂದ ಹೆಸರುವಾಸಿಯಾಗಿರುತ್ತವೆ. ಹೇಗೆ ಎರೆಹುಳುಗಳು ರೈತನ ಹೊಲಗದ್ದೆಗಳಲ್ಲಿ ತಮ್ಮ ಕ್ರಿಯೆಯಿಂದ ಹೆಚ್ಚಿನ ಫಲವತ್ತತೆಗೆ ಕಾರಣವಾಗಿ ಬೆಳೆಯಲ್ಲಿನ ಇಳುವರಿಯನ್ನು ವೃದ್ಧಿಸುತ್ತವೆಯೋ ಹಾಗೆಯೇ ಜೇನುನೊಣಗಳು ಸಹ ತಮ್ಮ ಪರಾಗಸ್ಪರ್ಶ ಕ್ರಿಯೆಯಿಂದ ರೈತನ ಬೆಳೆಯ ಇಳುವರಿಯನ್ನು ಹೆಚ್ಚಿಸುತ್ತವೆ.

ಭಾರತದಲ್ಲಿನ ಪ್ರಮುಖ ಜೇನು ಕುಟುಂಬಗಳ ಜಾತಿಯಲ್ಲಿ ಮೂರು ವಿಧವಾದ ಪ್ರಭೇದಗಳನ್ನು ನೋಡಬಹುದು. ಅವುಗಳಲ್ಲಿ (೧) ಹೆಜ್ಜೇನು ಗಾಳಿ ಬೆಳಕಿನಲ್ಲಿ, ಎತ್ತರದ ಮರದಲ್ಲಿ, ಕಟ್ಟಡಗಳಲ್ಲಿ, ಬಂಡೆಕಲ್ಲಿನಲ್ಲಿ ಗೂಡು ಕಟ್ಟುತ್ತದೆ. ಇದಲ್ಲದೆ ನೀರು ಸಿಗುವ ಜಾಗಗಳಲ್ಲಿ ಅತೀ ಎತ್ತರ ಮತ್ತು ಗಾತ್ರದ ಆಲದ ಮರ, ಅತ್ತಿಮರ, ಭಾಗೆ, ತಾರೆ, ನೇರಳೆ ಮರಗಳಲ್ಲದೆ, ಎತ್ತರವಾದ ಕಲ್ಲಿನ ಬಂಡೆಗಳಲ್ಲಿ, ಮನೆ ಮತ್ತು ಪಟ್ಟಣಗಳ ದೊಡ್ಡ ದೊಡ್ಡ ನಿವೇಶನಗಳಲ್ಲಿ ಅಂದರೆ ತಮ್ಮ ರಕ್ಷಣೆಗೆ ಮತ್ತು ಆಹಾರಕ್ಕೆ ಅನುಕೂಲಕರವಾದ ಜಾಗಗಳಲ್ಲಿ ಮನೆ ಮಾಡಿಕೊಳ್ಳುತ್ತವೆ. (೨) ಕಿರುಜೇನು ಅಥವಾ ಕೋಲ್ಜೇನುಗಳು, ಚಿಕ್ಕ ಜೇನುನೊಣವಾಗಿದ್ದು, ಕಡಿಮೆ ಜೇನನ್ನು ಸಂಗ್ರಹಿಸುವುದು. (೩) ತುಡುವೆ ಜೇನು ಹೆಚ್ಚು ಅರಿಗಳನ್ನು ಕಟ್ಟುತ್ತದೆ. ಇದು ನಿಸರ್ಗದಲ್ಲಿರುವ ಮರದ ಪೊಟ್ಟರೆ, ಹುತ್ತ, ಬಿಲದೊಳಗೆ ವಾಸಿಸುತ್ತದೆ. (೪) ಇದಲ್ಲದೆ ಮುಜಂಟಿ ಜೇನು, ನಸರೆ ಜೇನು ಎನ್ನುವುವು ಸಹ ಇವೆ.

ಜೇನುನೊಣಗಳು ಸಸ್ಯಗಳ ಹೂವಿನಿಂದ ಮಕರಂದವನ್ನು ಹೀರಿ ತಮ್ಮ ಹೊಟ್ಟೆಯಲ್ಲಿರುವ ಮಧುಚೀಲದಲ್ಲಿ ತುಂಬಿದಾಗ ಇದಕ್ಕೆ ಜೇನ್ನೊಣಗಳ ಹೊಟ್ಟೆಯಲ್ಲಿರುವ ಕಿಣ್ವ ರಸಗಳು ಸೇರಿ ಮಕರಂದವನ್ನು ಪಚನಗೊಳಿಸುತ್ತವೆ. ಹೀಗೆ ಪಚನವಾದ ಮಕರಂದವನ್ನು ಜೇನುನೊಣಗಳು ತಮ್ಮ ಮಧುಚೀಲದಿಂದ ನಾಲಗೆಯ ಮೂಲಕ ಹೊರತಂದು ಅರಿಯಲ್ಲಿರುವ ಸಹಸ್ರಾರು ಕಣಗಳಲ್ಲಿ ತುಂಬಿ ಅದರಲ್ಲಿರುವ ಹೆಚ್ಚಿನ ತೇವಾಂಶವನ್ನು ರೆಕ್ಕೆ ಬಡಿತದ ಮೂಲಕ ಆವಿಯಾಗಿಸಿ ಹೊರದೂಡಿದ ನಂತರ ಕಣಗಳಿಗೆ ಮೊಹರು ಮಾಡಿಡುತ್ತವೆ. ಇದೇ ಅದು ಜೇನು ತುಪ್ಪ. ಸಿಹಿ ಎಂದರೆ ಮನುಷ್ಯನಿಗೆ ಮೊಟ್ಟ ಮೊದಲು ನೆನಪಿಗೆ ಬರುವುದು ಜೇನುತುಪ್ಪ, ಅಲ್ಲವೆ !!

ಜೇನುತುಪ್ಪದಲ್ಲಿ ತೇವಾಂಶ (೧೭-೨೫%), ಫಲಸಕ್ಕರೆ (೩೪-೪೦%), ಡೆಕ್ಸ್‌ಟ್ರೋಸ್ (೩೨-೩೮%), ಕಬ್ಬಿನ ಸಕ್ಕರೆ (೨-೫%), ಅಂಟು (೧-೨%); ಕಬ್ಬಿಣ, ಸುಣ್ಣ, ಮೆಗ್ನೀಶಿಯಂ, ಮ್ಯಾಂಗನೀಸ್, ತಾಮ್ರ ಮುಂತಾದ ಖನಿಜಾಂಶಗಳು, ಸಾವಯವ ಆಮ್ಲಗಳು, ಪೋಷಕ ದ್ರವ್ಯಗಳು, ಸತ್ವಾಂಶಗಳು – ಬಿ-೧, ಬಿ-೨, ಬಿ-೩, ಬಿ-೫, ಬಿ-೬, ಬಿ-೧೨, ಸಿ ಮತ್ತು ಕೆ ಇರುತ್ತವೆ.

ಜೇನುತುಪ್ಪ ಪ್ರಧಾನವಾಗಿ ಶಕ್ತಿವರ್ಧಕ ಆಹಾರ. ಜೇನುತುಪ್ಪ ಮೊದಲೇ ಜೇನ್ನೊಣಗಳ ಹೊಟ್ಟೆಯಲ್ಲಿ ಪಚನಗೊಂಡಿರುವುದರಿಂದ ಸುಲಭವಾಗಿ ಮತ್ತು ಶೀಘ್ರವಾಗಿ ಜೀರ್ಣಗೊಳ್ಳುತ್ತದೆ. ಜೇನಹನಿಯನ್ನು ಎಳೆಯ ಕಂದಮ್ಮಗಳಿಗೆ ತಿನ್ನಿಸಿದರೆ ಬಹುಬೇಗ ಅವರಿಗೆ ಸರಳವಾಗಿ ಮಾತು ಬರುತ್ತದೆಂಬ ನಂಬಿಕೆಯೂ ಜನರಲ್ಲಿದೆ. ಜೇನಿನ ಸೇವನೆಯಿಂದ ಮಕ್ಕಳಿಗೆ ತಾಯಿಯ ಎದೆ ಹಾಲಿನಂತೆಯೇ ಜೀರ್ಣಶಕ್ತಿ ನೀಡುತ್ತದೆ. ಅಷ್ಟೇ ಅಲ್ಲದೆ ದೇಹಕ್ಕೆ ಅಗತ್ಯವಾಗುವ ಪೌಷ್ಟಿಕಾಂಶಗಳನ್ನು ನೀಡಿ ಸಂರಕ್ಷಿಸುತ್ತದೆ. ಜೇನುತುಪ್ಪದಲ್ಲಿ ಗ್ಲೂಕೋಸ್ ಸಕ್ಕರೆ ಅಂಶ ಇರುವುದರಿಂದ ಇದು ಶೀಘ್ರವಾಗಿ ರಕ್ತದೊಡನೆ ಬೆರೆತು ತತ್‌ಕ್ಷಣ ಶಕ್ತಿಯನ್ನು ವರ್ಧಿಸುತ್ತದೆ. ಆಯಾಸವನ್ನು ಪರಿಹರಿಸುತ್ತದೆ.

ಜೇನುತುಪ್ಪದ ಸೇವನೆಯಿಂದ ನ್ಯುಮೋನಿಯಾ, ಕ್ಷಯ, ವಿಷಮಶೀತ ಜ್ವರ, ಕೆಮ್ಮಲು, ಸಿಹಿಮೂತ್ರರೋಗ, ರಕ್ತದ ಒತ್ತಡ, ಹೃದಯ ದುರ್ಬಲತೆ, ಗಂಟಲು ಬೇನೆ, ಸಿಡುಬು ಮೊದಲಾದ ರೋಗಗಳನ್ನು ಉಪಶಮನಗೊಳಿಸಬಹುದೆನ್ನಲಾಗಿದೆ. ಇವಲ್ಲದೆ ಜೇನುತುಪ್ಪ ಸುಟ್ಟಗಾಯ ಮಾಯಲು, ರಕ್ತ ಶುದ್ಧಿಗೆ, ಚರ್ಮದ ಹೊಳಪಿಗೆ, ಮೆದುಳು ಶಕ್ತಿಗೆ ಸಹಾಯಕಾರಿಯಾಗಿರುತ್ತದೆ. ಆದರಂತೆಯೇ ವಯೋವೃದ್ಧರಿಗೆ ಇದು ಬಹಳ ಪೌಷ್ಟಿಕ ಆಹಾರ. ಜೊತೆಗೆ ಕಫ, ಕರುಳುಬೇನೆ, ಅಜೀರ್ಣ ನಿವಾರಣೆ, ರೋಗನಿರೋಧಕ ಶಕ್ತಿ ವೃದ್ಧೀಕರಣತೆಯನ್ನು ಮತ್ತು ಮೈಭಾರ ಕಡಿಮೆ ಮಾಡಿಕೊಳ್ಳಲು ಸಹಕಾರಿ. ಜೇನುತುಪ್ಪದ ಔಷಧಿಯಂತಹ ಗುಣಗಳು ಮನುಷ್ಯನಿಗೆ ಬಹಳ ಉಪಕಾರಿಯಾಗಿವೆ.

ಎಸ್. ರಾಜಶೇಖರ್
"ಶ್ರೀಕೃಷ್ಣ ಪ್ರೋಸ್", ಬ್ಯಾಡರಹಳ್ಳಿ, ಬೆಂಗಳೂರು -

# ಕರ್ನಾಟಕವನ್ನು ಯಾರು ಆಳುತ್ತಿದ್ದರು?



**ಜ್ಯೋತಿಷ್ಯಕ್ಕೆ ದೇಶ ಕಾಲಗಳ ನಿಖರತೆ ಬಹಳ ಅವಶ್ಯಕ. ಮಗುವಿನ ಜನನ ಕಾಲವನ್ನು ನಿಶ್ಚಯಿಸುವಾಗ ಒಂದು ನಿಮಿಷದ ವ್ಯತ್ಯಾಸವಾದರೂ ತಿಥಿ ನಕ್ಷತ್ರ ರಾಶಿಗಳೇ ಬೇರೆಯಾಗುವ ಸಂಭವ ಇದೆ. ಆಗ ವ್ಯಕ್ತಿಯ ಜಾತಕವೇ ಬೇರೆಯಾಗಬಹುದು. ಇಂದು ಎಷ್ಟು ಮಂದಿಯ ಜಾತಕಗಳು ಕರಾರುವಾಕ್ಕಾಗಿ ಇರಬಲ್ಲುವು ? ಈಗ ಕಂಪ್ಯೂಟರಿನ ಮೂಲಕ ಜನ್ಮಪತ್ರಿಕೆಗಳನ್ನು ಸರಿಯಾಗಿ, ಶುದ್ಧವಾಗಿ ತಯಾರಿಸಿಕೊಡುತ್ತಾರೆಂದು ಹೇಳುತ್ತಾರೆ. ಅವುಗಳಿಗೂ ದೇಶ ಕಾಲಗಳನ್ನು ನಾವೇ 'ಫೀಡ್' ಮಾಡಬೇಕಲ್ಲವೆ ? ಅದೇ ಸರಿ ಇಲ್ಲದಿದ್ದರೆ ? ಇಂದು ನಮ್ಮ ದೇಶದಲ್ಲಿ ದೃಗ್ಗಣಿತ, ಸೂರ್ಯಸಿದ್ಧಾಂತವೆಂಬ ಎರಡು ಮುಖ್ಯ ಗಣಿತಗಳ ಆಧಾರದಿಂದ ಪಂಚಾಂಗವನ್ನು, ಜನ್ಮಪತ್ರಿಕೆಗಳನ್ನು ತಯಾರಿಸುತ್ತಾರೆ. ಎರಡರಲ್ಲೂ ತುಂಬಾ ವ್ಯತ್ಯಾಸವಿದೆ. ಪರಿಣಾಮವಾಗಿ ಒಂದು ಗಣಿತಾನುಸಾರ ಹಲವರಿಗೆ ನಿನ್ನೆ ಗಣೇಶ ಚತುರ್ಥಿಯಾಗಿದ್ದರೆ ಮತ್ತೆ ಹಲವರಿಗೆ ಇಂದು. ಪರಿಣಾಮವಾಗಿ ಯಾವುದೇ ಒಂದು ಹಬ್ಬ ಇಡೀ ದೇಶದಲ್ಲಿ ಒಂದೇ ದಿನ ಆಚರಣೆಯಲ್ಲಿ ಕಂಡುಬರುತ್ತಿಲ್ಲ.**

ಹಲವು ದಿನಗಳಿಂದ ನನ್ನನ್ನು ಕಾಡುತ್ತಿದ್ದ ಒಂದು ಪ್ರಶ್ನೆಯೆಂದರೆ ನಮ್ಮ ದೇಶವನ್ನು ಅದರಲ್ಲೂ ಮುಖ್ಯವಾಗಿ ಕರ್ನಾಟಕ ರಾಜ್ಯವನ್ನು ಯಾರು ಆಳುತ್ತಿದ್ದರು ಎಂಬುದು. ರಾಷ್ಟ್ರಪತಿಗಳೇ, ರಾಜ್ಯಪಾಲರೇ, ಪ್ರಧಾನ ಮಂತ್ರಿಗಳೇ ಅಥವಾ ರಾಜ್ಯ ಮುಖ್ಯ ಮಂತ್ರಿಗಳೇ ? ಬಹಳಷ್ಟು ತಲೆಕೆರೆದು ಕೊಂಡ ಮೇಲೆ ಪ್ರಶ್ನೆಗೆ ದೊರಕಿದ ಉತ್ತರ ಮೇಲಿನವರು ಯಾರೂ ಅಲ್ಲ; ಜ್ಯೋತಿಷಿಗಳು, ಮಂತ್ರವಾದಿಗಳು, ಮಠಾಧಿಪತಿಗಳು ಮತ್ತು ವಾಸ್ತುಶಾಸ್ತ್ರಿಗಳು ತಮ್ಮ ಅನುಭವಾಮೃತವನ್ನು ಧಾರೆ ಎರೆದು ಕಾಲಕಾಲಕ್ಕೆ ಮಂತ್ರಿಗಳಿಗೆ, ರಾಜಕೀಯ ಮುಖಂಡರಿಗೆ ಮಾರ್ಗದರ್ಶನ ಮಾಡಿ ನಿಜಾರ್ಥದಲ್ಲಿ ದೇಶವನ್ನು, ನಮ್ಮ ರಾಜ್ಯವನ್ನು ಆಳುತ್ತಿದ್ದಾರೆ ಎಂಬುದು.

ಆಡಳಿತದ ಇಂದಿನ ಸ್ಥಿತಿಗತಿಗಳನ್ನು ಆಳವಾಗಿ ಯೋಚಿಸಿದಾಗ ನಿಜಕ್ಕೂ ಅದರಲ್ಲಿ ಅನುಮಾನವೇ ಇಲ್ಲವೆಂಬುದು ನೂರಕ್ಕೆ ನೂರು ಸತ್ಯ. ಯಾಕೆಂದರೆ ಒಬ್ಬ ಮುಖ್ಯಮಂತ್ರಿ ಅಥವಾ ಸಹಾಯಕ ಮಂತ್ರಿ ಪ್ರಮಾಣ ವಚನ ಸ್ವೀಕರಿಸುತ್ತಲೇ ಮೊತ್ತ ಮೊದಲು ತನ್ನ ಹಿತೈಷಿ, ಜ್ಯೋತಿಷಿಯ ಬಳಿಗೆ ಓಡಿಹೋಗಿ ಗದ್ದುಗೆಯನ್ನೇರಲು ಒಳ್ಳೆಯ ದಿನ ಸಮಯವನ್ನು ಗೊತ್ತು ಮಾಡಿಕೊಂಡು ಬರುತ್ತಾನೆ. ಆತ ಅನುಕೂಲವಾದ ತಿಥಿ, ವಾರ, ನಕ್ಷತ್ರಗಳನ್ನು ನೋಡಿ ರಾಹುಕಾಲ, ಯಮಗಂಡ ಕಾಲ ಇಲ್ಲದ ವೇಳೆ ಶುಭ ಮುಹೂರ್ತದಲ್ಲಿ ಸಿಂಹಾಸನವೇರಲು ಸೂಚಿಸುತ್ತಾನೆ. ಇವರು ಗುಳಿಕ ಕಾಲವನ್ನು ಯಾಕೆ ಗಣನೆಗೆ ತೆಗೆದುಕೊಳ್ಳುವುದಿಲ್ಲವೋ, ಗೊತ್ತಿಲ್ಲ. ಆಮೇಲೆ ವಾಸ್ತುಶಾಸ್ತ್ರಿಗಳ ಬಳಿಗೆ ಹೋಗಿ ಯಾವ ಬಾಗಿಲಿನಿಂದ ಒಳಗೆ ಪ್ರವೇಶಿಸ ಬೇಕು ? ಎಡಗಾಲು ಮೊದಲಿಡಬೇಕೋ ಅಥವಾ ಬಲಗಾಲೋ ? ಯಾವ ದಿಕ್ಕಿಗೆ ಮುಖ ಮಾಡಿ ಕುಳಿತುಕೊಳ್ಳಬೇಕು. ಅಲ್ಲಿ ಏನೇನು ಇರಬೇಕು, ಏನೇನು ಇರಬಾರದು. ಎಷ್ಟು ಕುರ್ಚಿಗಳು ಯಾವ ಬದಿ ಯಲ್ಲಿ ಇರಬೇಕು ? ಮಲಬದ್ಧತೆ, ಉರಿಮೂತ್ರ ಇತ್ಯಾದಿ ತೊಂದರೆಗಳು ಬಾರದಂತೆ ತನ್ನ ಖಾಸಗಿ ಟಾಯಿಲೆಟ್, ಎಲ್ಲಿ ಇರಬೇಕು, ಹೇಗಿರಬೇಕು, ಯಾವುದು ವಾಸ್ತುಶಾಸ್ತ್ರಕ್ಕನುಸಾರವಾಗಿ ಇಲ್ಲದಿದ್ದರೆ ಆದಷ್ಟು ಬೇಗನೆ ಪುನರ್ನಿರ್ಮಾಣ ಕೆಲಸ ಮಾಡಿಸಬೇಕೆಂಬ ಸಲಹೆಯನ್ನು ಪಡೆದುಕೊಂಡ ಮೇಲೆ ಶುಭದಿನದಂದು ಪೂಜೆಗೆ ಪೂಜಾರಿಯನ್ನು ಆಮಂತ್ರಿಸಲು ಆತನ ಬಳಿಗೆ ಹೋಗುತ್ತಾನೆ. ಅವನು ಪೂಜಾ ಕಾರ್ಯಕ್ಕೆ ಬೇಕಾದ ಧೂಪದೀಪಾದಿ ಸಾಮಗ್ರಿಗಳ ಪಟ್ಟಿಯನ್ನು ಕೊಡುತ್ತಾನೆ. ಮೌಲ್ಯ ಪಾವತಿಸಿದರೆ ಅವುಗಳನ್ನೆಲ್ಲಾ ನಾನೇ ತರುತ್ತೇನೆಂದೂ ಹೇಳುತ್ತಾನೆ. ಹೀಗೆ ಸಾಂಗವಾಗಿ ಶುಭಾರಂಭ ಆದಮೇಲೆ ಮಂತ್ರಿಗಳು ತನ್ನ ಚೇಲಾ ಹಾಗೂ ರಕ್ಷಣಾಭಟರೊಂದಿಗೆ ಪ್ರಸಿದ್ಧ ದೇವಸ್ಥಾನಗಳಿಗೆ ಭೇಟಿ ಕೊಟ್ಟು ದೇವರ ದರ್ಶನ ಮಾಡಿ ಬರುತ್ತಾರೆ. ಈ ವಿಷಯದಲ್ಲಿ ವಾಮಪಂಥೀಯರನ್ನು ಬಿಟ್ಟರೆ ಬೇರೆ ಎಲ್ಲಾ ಪಕ್ಷಗಳ ಮುಖಂಡರೂ ಅಧಿಕಾರದಲ್ಲಿರಲಿ ಇಲ್ಲದಿರಲಿ ಮಂತ್ರಿಗಳೂ ಏಕ್ ಹೀ ಥೈಲೀಮೆ ಚಟ್ಟೆ ಬಟ್ಟೆ ಆಗಿರುತ್ತಾರೆ. ಅವರಲ್ಲಿ ವರ್ಗಭೇದವೇ ಇರುವುದಿಲ್ಲ.

**ಎಂ. ವಿ. ಭಟ್**

ಜನರ ಹಿತಕ್ಕಾಗಿ ತನುಮನದಿಂದ ಕೆಲಸ ಮಾಡಬೇಕಾದ ನಮ್ಮ ಮಂತ್ರಿಗಳು ಶಾಸಕರು ದಿನಬೆಳಗಾದರೆ ದೇವಸ್ಥಾನಗಳಿಗೆ ಸುತ್ತುಬರುತ್ತಾ, ಜೋಯಿಸರ ಮನೆಬಾಗಿಲು ಕಾಯುತ್ತಾ, ಮಂತ್ರವಾದಿಗಳ ಸಲಹೆ ಮತ್ತು ವಾಸ್ತುಶಾಸ್ತ್ರಿಗಳ ಮಾರ್ಗದರ್ಶನ ಪಡೆಯುತ್ತಾ ಸರ್ಕಾರಿ ಬಂಗಲೆಗಳನ್ನು, ಕಾರ್ಯಾಲಯಗಳನ್ನು ಮನಬಂದಂತೆ ಬದಲಾಯಿಸುತ್ತಾ ಆರಿಸಿ ಕಳುಹಿಸಿದ ಜನರನ್ನು ಮರೆತು ತನ್ನ ತನ್ನ ಕುಟುಂಬದ ಕ್ಷೇಮಾಭಿವೃದ್ಧಿಯನ್ನೇ ಹಗಲಿರುಳೂ ಚಿಂತಿಸುತ್ತಾ ಕಾಲಕಳೆದರೆ ಪ್ರಜಾಪ್ರಭುತ್ವಕ್ಕೆ ತಿಲಾಂಜಲಿಯೇ ಗತಿ.

ನಮ್ಮ ಕೆಲವು ಕೆಟ್ಟ ಶಾಸನ ವ್ಯವಸ್ಥೆಯ ದೆಸೆಯಿಂದ ಮಂತ್ರಿಗಳು ಸರ್ಕಾರಿ ಖರ್ಚಿನಲ್ಲಿ ಎಲ್ಲಿಗೆ ಬೇಕಾದರೂ ಹೋಗಬಹುದು. ರಕ್ಷಣೆಗೆ ಕಾವಲು ಪಡೆಗಳನ್ನು ಇಟ್ಟುಕೊಳ್ಳಬಹುದು. ಸರ್ಕಾರಿ ಬಂಗಲೆ, ವಾಹನಗಳನ್ನು ಬಳಸಿಕೊಳ್ಳಬಹುದು. ಕಾಲಿಗೆ ಕೈಗೆ ಸೇವಕರನ್ನು ಇಟ್ಟುಕೊಳ್ಳಬಹುದು. ದಕ್ಷಿಣದ ಒಂದು ರಾಜ್ಯದ ಮುಖ್ಯಮಂತ್ರಿಗಳ ರಕ್ಷಣೆಗೆ ೩೩೮ ಮಂದಿ ವಿಶೇಷ ತರಬೇತಿ ಪಡೆದ ಪೊಲೀಸರು ಇದ್ದಾರಂತೆ. ಬರೇ ಅವರ ರಕ್ಷಣೆಯ ಸಲುವಾಗಿ ವಾರ್ಷಿಕ ೩೩ ಕೋಟಿ ಹಣ ಖರ್ಚಾಗುತ್ತದೆಯಂತೆ. ಜನರೇ ಆರಿಸಿ ಕಳುಹಿಸಿದ ಒಬ್ಬ ಮಂತ್ರಿಯ ಪಾಡೇ ಹೀಗಾದರೆ ಸಾಮಾನ್ಯ ಜನರ ಪಾಡೇನು ? ಏನಿಲ್ಲ, ನಿರಪರಾಧಿಗಳಾದ ಲಕ್ಷ ಲಕ್ಷ ಜನರು ಇತ್ತೀಚೆಗಿನ ವರ್ಷಗಳಲ್ಲಿ ಉಗ್ರರಿಂದ ಹತರಾದರು, ಹತರಾಗುತ್ತಿದ್ದಾರೆ.

ಸಿಂಗಪುರದಲ್ಲಿ, ಅಮೆರಿಕದಲ್ಲಿ ಇನ್ನೂ ಹಲವು ದೇಶಗಳಲ್ಲಿ ಪ್ರಧಾನ ಮಂತ್ರಿಯೇ ಇರಲಿ ಅಥವಾ ಅಧ್ಯಕ್ಷನೇ ಇರಲಿ ಎಲ್ಲಿಗೆ ಹೋಗುವುದಿದ್ದರೂ ಹಿಂದೆ ಮುಂದೆ ನಮ್ಮಲ್ಲಿಯಂತೆ ಕಾವಲು ಪಡೆ ಇರುವುದಿಲ್ಲ, ಹೋಗುವ ದಾರಿಯಲ್ಲಿ ಉಳಿದ ವಾಹನಗಳಿಗೆ ತಡೆ ಇರುವುದಿಲ್ಲ. ಸಿಂಗಪುರದಲ್ಲಿ ಅಧ್ಯಕ್ಷ ಮತ್ತು ಪ್ರಧಾನ ಮಂತ್ರಿ ತಾವೇ ಕಾರನ್ನು ಚಲಾಯಿಸಿಕೊಂಡು ಹೋಗು ವುದನ್ನು ನಾನು ಕಂಡಿದ್ದೇನೆ. ನಮ್ಮ ದೇಶದಲ್ಲಿ ವಿಐಪಿಗಳ ರಕ್ಷಣೆಗಾಗಿ ಬರೇ ಆರು ತಿಂಗಳು ಅಧಿಕಾರದಲ್ಲಿದ್ದರೂ ಕೋಟಿ ಕೋಟಿ ಹಣ ಖರ್ಚಾಗುತ್ತಿದೆ. ತನ್ನ ಪಕ್ಷದ ಬರೇ ೧೯ ಮಂದಿ ಸದಸ್ಯರು ಆರಿಸಿ ಬಂದಿದ್ದರೂ ಒಬ್ಬ ಪ್ರಧಾನ ಮಂತ್ರಿಯಾಗಿ ಆಜನ್ಮ ಆತ ಸರ್ಕಾರದ ಸಕಲ

ಸೌಲಭ್ಯಗಳನ್ನು ಪಡೆದುಕೊಂಡು ಮೆರೆಯುತ್ತಿರುತ್ತಾನೆ. ವರ್ಷದಿಂದ ವರ್ಷಕ್ಕೆ ಇಂತಹವರ ಸಂಖ್ಯೆ ಏರುತ್ತಲೇ ಇರುತ್ತದೆ.

ಮೊನ್ನೆ ಮೊನ್ನೆ ಆಯುಧ ಪೂಜೆ ನಡೆಯಿತು. ಮಂತ್ರಿಗಳೊಬ್ಬರು (ಈಗ ಮಾಜಿ) ತನ್ನ ಪಡೆಯೊಂದಿಗೆ ನನ್ನ ಮನೆಯ ಹತ್ತಿರದಲ್ಲಿದ್ದ ದೇವಸ್ಥಾನಕ್ಕೆ ಬಂದು ತನ್ನ ವಾಹನಕ್ಕೆ ಪೂಜೆ ಮಾಡಿಸಿ ದೇವರಿಗೆ, ಅರ್ಚಕರಿಗೆ ಕಾಣಿಕೆ ಇತ್ತು ಹೊರಟುಹೋದರು. ವಾಹನಗಳ ಚಕ್ರಗಳಿಗೆ ಬಲಿ ಇಡಲು ಲಿಂಬೆ ಹಣ್ಣುಗಳನ್ನು ಬುಟ್ಟಿಯಲ್ಲೇ ತಂದಿದ್ದರು. ಇದರಲ್ಲೇನೂ ಆಶ್ಚರ್ಯವಿಲ್ಲ. ನಮ್ಮ ಮಂತ್ರಿಗಳು, ಶಾಸಕರು ಹರಕೆ ಸಂಪ್ರದಾಯಕ್ಕೆ ಕುರಿ, ಕೋಳಿ, ಕೋಣಗಳನ್ನೇ ಚಂಡಿ ದೇವತೆಗೆ ಬಲಿದಾನ ಮಾಡುತ್ತಿರುವಾಗ ಲಿಂಬೆಹಣ್ಣಿನದ್ದೇನು ಮಹಾ ! ಅಂದು ಸಾಯಂಕಾಲದವರೆಗೆ ಬಂದ ವಾಹನಗಳಿಗೆ ಅರ್ಪಿಸಿದ ಲಿಂಬೆಹಣ್ಣುಗಳ ಸಂಖ್ಯೆ ಒಂದು ಸಾವಿರ ಮೀರಿರಬಹುದು. ಎಲ್ಲೆಲ್ಲೂ ಲಿಂಬೆಹಣ್ಣುಗಳ ಕಡಿ, ಹೂ, ಕುಂಕುಮ, ಉರಿದು ಉಳಿದ ಅಗರಬತ್ತಿಗಳ ರಾಶಿ. ಕೆಲವು ತಿಂಗಳುಗಳ ಹಿಂದೆ ಮಂತ್ರಿಯೊಬ್ಬರು ತನ್ನ ಸಹಚರರೊಂದಿಗೆ ಬಂದು ನಮ್ಮ ಮನೆಯ ಮುಂದೆ ಹಾದುಹೋಗುವ ರಸ್ತೆಯ ಒಂದೆರಡು ಮೂಲೆಗಳಲ್ಲಿ ಅರ್ಚಕರಿಂದ ಪೂಜೆ ಮಾಡಿಸಿ ತನ್ನ ದಿವ್ಯಹಸ್ತದಿಂದ ಕಲ್ಲೊಂದನ್ನು ಇಟ್ಟು ಆ ಕಲ್ಲಿಗೆ ಕೈ ಮುಗಿದು ಹೊರಟುಹೋದರು. ಕೆಲವು ದಿನಗಳ ತನಕ ಆ ಕಲ್ಲುಗಳಿಗೆ ನಾಯಿಗಳಿಂದ ಮೂತ್ರಾಭಿಷೇಕ ನಡೆಯಿತು. ಈಗ ಆ ಕಲ್ಲುಗಳು ಮಾಯವಾಗಿ ಕಲ್ಲಿರಿಸಿದ ಜಾಗವೇ ಯಾವುದೆಂದು ತಿಳಿಯುವುದಿಲ್ಲ. ೫-೬ ವರ್ಷಗಳ ಹಿಂದೆ ಪಂಚಾಯಿತಿವತಿಯಿಂದ ಮಳೆ ನೀರೇ ಬಾರದ ರಸ್ತೆಯ ಬದಿಯಲ್ಲಿ ಮಳೆ ನೀರು ಹರಿದುಹೋಗಲೆಂದು ಎರಡು ಬದಿಗಳಲ್ಲೂ ಚಪ್ಪಡಿ ಕಲ್ಲುಗಳನ್ನು ಇರಿಸಿ ಕಣಿ ಮಾಡಿಸಿದರು. ಎಷ್ಟು ಹಣ ನುಂಗಿದ್ರೋ ! ಇಂದು ಆ ಕಣಿ, ಪ್ಲಾಸ್ಟಿಕ್ ಚೀಲಗಳಿಂದ ಹೊಲಸುಗಳಿಂದ ಎಸೆದ ಕಸಕಡ್ಡಿಗಳಿಂದ ತುಂಬಿಹೋಗಿ ಕಣಿ ಎಲ್ಲಿದೆ ಎಂದೇ ತಿಳಿಯುವುದಿಲ್ಲ.

ರಕ್ಷಣಾ ಪಡೆಯು ಒಂದು ಸಾರ್ವಜನಿಕ ರಸ್ತೆಯ ಒಂದು ಬದಿಯಲ್ಲಿ ಸ್ವಲ್ಪೆತ್ತರಕ್ಕೆ ಸಾವಿರಾರು ರೂ.ಗಳನ್ನು ಖರ್ಚು ಮಾಡಿ ಕಾಲುದಾರಿಯನ್ನು ನಿರ್ಮಿಸಿದ್ದಾರೆ. ರಸ್ತೆ ಮಾತ್ರ ಹದಗೆಟ್ಟು ವಾಹನಗಳ ಓಡಾಟವೇ ಅಸಾಧ್ಯವಾಗಿದೆ. ಮುಂದಿನಿಂದ ಒಂದು ವಾಹನ ಬಂದರೆ ವಾಹನ ನಿಂತೇ ಇರಬೇಕು. ಕಾಲುದಾರಿಯ ದೆಸೆಯಿಂದ ಬದಿಗೆ ಸರಿದು ಮುಂದಕ್ಕೆ ಹೋಗುವಂತೆಯೂ ಇಲ್ಲ. ಇದು ನಮ್ಮ ದೇಶದ ಸ್ಥಿತಿಗತಿ. ಇಲ್ಲಿ ಹಣ ನುಂಗುವುದಕ್ಕಾಗಿಯೇ ಕೆಲಸಗಳಾಗುತ್ತಿವೆಯಲ್ಲದೆ ತೆರಿಗೆಯ ಹಣದಿಂದ ಜನತೆಗೆ ಅನುಕೂಲವಾಗಲಿ ಎಂದು ಯಾವ ಕೆಲಸವೂ ಆಗುತ್ತಿಲ್ಲ.

ಜನರ ಸೇವೆಗೆ ಸಿಕ್ಕಿದ ಅವಕಾಶವನ್ನು ಸದುಪಯೋಗಪಡಿಸದೆ ನಮ್ಮ ಶಾಸಕರು, ಮಂತ್ರಿಗಳು ಏನೇ ಆದರೂ ಸೋತರೂ ಗೆದ್ದರೂ ಮಠ ದೇವಸ್ಥಾನಗಳಿಗೆ ಸುತ್ತು ಬರುವುದನ್ನು ಜುಟ್ಟು ಗಡ್ಡ ಬೆಳೆಸಿಕೊಂಡು, ಮುಖಕ್ಕೆ ಅಂಗೈ ಅಗಲದ ಭಸ್ಮರೇಖೆಗಳನ್ನು ಬಳಿದುಕೊಂಡು, ಅಡಕೆಗಾತ್ರದ ಕುಂಕುಮಬೊಟ್ಟು ಕಾಣಿಸಿ, ಕೊರಳಿಗೆ ರುದ್ರಾಕ್ಷಿಮಾಲೆಗಳನ್ನು ಹಾಕಿಕೊಂಡು ಕಾವಿ ಬಟ್ಟೆ ತೊಟ್ಟು, ತನ್ನ ಕಾರ್ಯಾಲಯದ ಮುಂದುಗಡೆ ತಪ್ಪುತಪ್ಪಾಗಿ ಬರೆದ ಬೋರ್ಡು ತೂಗುಹಾಕಿ ಗಿರಾಕಿಗಳಿಗಾಗಿ ಹೊಂಚುಹಾಕುತ್ತಾ ಸರ್ವಾರ್ಥಸಿದ್ಧಿ ಪ್ರದಾಯಕ ಮಂತ್ರವಾದಿಗಳ, ಅರೆಬೆಂದ ಜೋಯಿಸರ, ಇಂದು ಪಾಯಖಾನೆಗಳಿಗೂ ನುಗ್ಗಿ ಬಂದ ವಾಸ್ತುತಜ್ಞರ ವಿದ್ಯಾದಾನದ ಹೆಸರಿನಲ್ಲಿ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿ ಕೋಟಿಗಟ್ಟಲೆ ಹಣ ಲಪಟಾಯಿಸುವ ಮಠಾಧಿಪತಿಗಳ ಕಾಲಿಗೆ ಸಾಷ್ಟಾಂಗ ವಂದಿಸಿ ಧನ್ಯರಾಗುವುದನ್ನು ಎಂದೂ ಬಿಡುವುದಿಲ್ಲ. ಇವರಲ್ಲಿ ಅನೇಕರು ಮಂತ್ರಿಗಳ ಪ್ರಭಾವಶಾಲಿ ವ್ಯಕ್ತಿಗಳ ಕುಟುಂಬದ ಸ್ಥಾಯೀ ಹಿತಚಿಂತಕರಾಗಿರುತ್ತಾರೆ. ಅವರ ಸಲಹೆಯನ್ನು ಪಡೆಯದೆ ಒಂದು ಹೆಜ್ಜೆ ಮುಂದಕ್ಕೆ ಅವರು ಇಡಲಾರರು. ಇಂತಹ ಮುಖಂಡರೇ ಎಲ್ಲೆಲ್ಲೂ ತುಂಬಿಕೊಂಡಿರುವುದರಿಂದ, ಅಂತಹವರೇ ದೇಶವನ್ನು ಆಳುತ್ತಿರುವುದರಿಂದ ನಮ್ಮ ದೇಶದಲ್ಲಿಂದು ಅಶಿಕ್ಷಿತರ, ಬಡಜನರ, ಹಳ್ಳಿಯ ರೈತರ, ಕೂಲಿ ಕಾರ್ಮಿಕರ ಸ್ಥಿತಿ ಇಷ್ಟು ವರ್ಷ ಸಂದರೂ ಸ್ವಾತಂತ್ರ್ಯ ಸಿಕ್ಕಿದಾಗ ಹುಟ್ಟಿದ ಮಕ್ಕಳು ಇಂದು ಮುದುಕರಾಗಿದ್ದರೂ ಒಂದು ಇಂಚಿನಷ್ಟೂ ಸುಧಾರಿಸಿಲ್ಲ. ಸರ್ಕಾರಿ ದಾಖಲೆಗಳಲ್ಲಿ ಬೇಕಾದಷ್ಟು ಸುಧಾರಣೆ ಕಂಡುಬರುತ್ತದೆ. ದೇಶದ ಒಳಗೆ ಹೋಗಿ ನೋಡಿದರೆ ಸರ್ವತ್ರ ನಿರಾಶಾದಾಯಕ ವಾತಾವರಣವೇ ಕಂಡುಬಾರದಿರದು.

ಹಾಗೆಂದು ಎಲ್ಲಾ ಮಠಾಧಿಪತಿಗಳೂ, ಧಾರ್ಮಿಕ ಮುಖಂಡರೂ, ಶಾಸಕರೂ, ಮಂತ್ರಿಗಳೂ ಒಂದೇ ವರ್ಗಕ್ಕೆ ಸೇರಿದವರೆಂದು ಹೇಳಿದರೆ ಖಂಡಿತ ತಪ್ಪಾದೀತು. ಎಲ್ಲಾ ವರ್ಗಗಳಲ್ಲೂ ಜನಪರ ಕಾಳಜಿವುಳ್ಳ ಸದಭಿರುಚಿಯ ರಾಜಕೀಯ ಮುಖಂಡರೂ ಧಾರ್ಮಿಕ ನೇತಾರರೂ ಇದ್ದಾರೆ. ಆದರೆ ಅವರ ಸಂಖ್ಯೆ ಬೆರಳೆಣಿಕೆಯಷ್ಟು. ಇದೇ ದೊಡ್ಡ ಕೊರತೆ. ಇನ್ನು ಪೂಜೆ ಪುರಸ್ಕಾರ, ದೈವಭಕ್ತಿ ಇದೆಲ್ಲಾ ತೀರಾ ವೈಯಕ್ತಿಕ ವಿಚಾರವಾದುದರಿಂದ ಅದರಲ್ಲಿ ಬೇರೆಯವರಿಗೆ ಮೂಗು ತೂರಿಸಲು ಅವಕಾಶ ಇಲ್ಲ. ನಿಜ, ಆದರೆ ಜನರ ಸೇವೆಯ ಹೆಸರಿನಲ್ಲಿ ಪ್ರತಿಜ್ಞೆ ಮಾಡಿ ಆಮೇಲೆ ಖಜಾನೆಯ ಹಣಕ್ಕೆ ಕನ್ನ ಹಾಕುತ್ತಾ ಸ್ವೇಚ್ಛಾಚಾರಿಗಳಾಗಿ ಕಾಲಕಳೆಯುವುದು ಎಷ್ಟು ಸರಿ ? ನಮ್ಮ ಮುಖಂಡರು ಇದನ್ನು ಯೋಚಿಸಿ ಸುಧಾರಿಸಿ ಮುನ್ನಡೆದರೆ ಇನ್ನಾದರೂ ಕೆಲವೇ ವರ್ಷಗಳಲ್ಲಿ ನಮ್ಮ ದೇಶ ಜಗತ್ತಿನ ಅತ್ಯುತ್ತಮ ದೇಶವಾಗುವುದರಲ್ಲಿ ಯಾರಿಗೂ ಸಂಶಯ ಬೇಡ. ಯಾಕೆಂದರೆ, ಇಲ್ಲಿ ಇಲ್ಲದಿರುವುದು ಬೇರೆ ಎಲ್ಲಿಯೂ ಇಲ್ಲ. ಆಳುವವರಲ್ಲಿ ಇಚ್ಛಾಶಕ್ತಿ, ಸಾಧಿಸಿಯೇ ಬಿಡಬೇಕೆಂಬ ಛಲ ಮಾತ್ರ ಬೇಕಷ್ಟೆ.

ಜ್ಯೋತಿಷ್ಯಕ್ಕೆ ದೇಶಕಾಲಗಳ ನಿಖರತೆ ಬಹಳ ಅವಶ್ಯಕ. ಮಗುವಿನ ಜನನ ಕಾಲವನ್ನು ನಿಶ್ಚಯಿಸುವಾಗ ಒಂದು ನಿಮಿಷದ ವ್ಯತ್ಯಾಸವಾದರೂ ತಿಥಿ ನಕ್ಷತ್ರ ರಾಶಿಗಳೇ ಬೇರೆಯಾಗುವ ಸಂಭವ ಇದೆ. ಆಗ ವ್ಯಕ್ತಿಯ ಜಾತಕವೇ ಬೇರೆಯಾಗಬಹುದು. ಇಂದು ಎಷ್ಟು ಮಂದಿಯ ಜಾತಕಗಳು ಕರಾರುವಾಕ್ಕಾಗಿ ಇರಬಲ್ಲುವು ? ಈಗ ಕಂಪ್ಯೂಟರಿನ ಮೂಲಕ ಜನ್ಮಪತ್ರಿಕೆಗಳನ್ನು ಸರಿಯಾಗಿ, ಶುದ್ಧವಾಗಿ ತಯಾರಿಸಿಕೊಡುತ್ತಾರೆಂದು ಹೇಳುತ್ತಾರೆ. ಅವುಗಳಿಗೂ ದೇಶ ಕಾಲಗಳನ್ನು ನಾವೇ 'ಫೀಡ್' ಮಾಡಬೇಕಲ್ಲವೆ ? ಅದೇ ಸರಿ ಇಲ್ಲದಿದ್ದರೆ ? ಇಂದು ನಮ್ಮ ದೇಶದಲ್ಲಿ ದೃಗ್ಗಣಿತ, ಸೂರ್ಯಸಿದ್ಧಾಂತವೆಂಬ ಎರಡು ಮುಖ್ಯ ಗಣಿತಗಳ ಆಧಾರದಿಂದ ಪಂಚಾಂಗವನ್ನು, ಜನ್ಮಪತ್ರಿಕೆಗಳನ್ನು ತಯಾರಿಸುತ್ತಾರೆ. ಎರಡರಲ್ಲೂ ತುಂಬಾ ವ್ಯತ್ಯಾಸವಿದೆ. ಪರಿಣಾಮವಾಗಿ ಒಂದು ಗಣಿತಾನುಸಾರ ಹಲವರಿಗೆ ನಿನ್ನೆ ಗಣೇಶ ಚತುರ್ಥಿಯಾಗಿದ್ದರೆ ಮತ್ತೆ ಹಲವರಿಗೆ ಇಂದು. ಪರಿಣಾಮವಾಗಿ ಯಾವುದೇ ಒಂದು ಹಬ್ಬ ಇಡೀ ದೇಶದಲ್ಲಿ ಒಂದೇ ದಿನ ಆಚರಣೆಯಲ್ಲಿ ಕಂಡುಬರುತ್ತಿಲ್ಲ. ಸ್ವಾತಂತ್ರ್ಯ ಪ್ರಾಪ್ತಿಯ ನಂತರ ಭಾರತ ಸರ್ಕಾರ ದೃಗ್ಗಣಿತವೇ ಬಳಕೆಯಲ್ಲಿರಬೇಕೆಂದು ಸಾರಿದರೂ ಅದು ಇನ್ನೂ ಸಾರ್ವತ್ರಿಕವಾಗಿಲ್ಲ. ಹಲವರು ಗ್ರಹಣಾದಿಗಳನ್ನು ದೃಗ್ಗಣಿತಾನುಸಾರ ತಿಳಿಸಿ ಜಾತಕಾದಿಗಳನ್ನು ಸೂರ್ಯಸಿದ್ಧಾಂತದ ಪ್ರಕಾರ ತಯಾರಿಸುತ್ತಾರೆ. ಯಾವುದನ್ನು ನಂಬಬೇಕು ? ಯಾವುದನ್ನು ಬಿಡಬೇಕು ? 'ಪ್ರತ್ಯಕ್ಷಂ ಜ್ಯೌತಿಷಂ ಶಾಸ್ತ್ರಂ ಚಂದ್ರಾರ್ಕೌ ಯತ್ರ ಸಾಕ್ಷಿತೌ' ಎಂಬಂತೆ ಗ್ರಹಣಾದಿಗಳಿಗೆ ದೃಗ್ಗಣಿತವೇ ಸರಿ.

ಒಟ್ಟಿನಲ್ಲಿ ಹೇಳುವುದಾದರೆ ಆಸ್ತಿಕತೆ ಎಂಬುದು ತೀರಾ ವೈಯಕ್ತಿಕ ವಿಚಾರವಾಗಿದ್ದು, ಅದನ್ನು ರಾಜಕೀಯಕ್ಕೆ ಎಳೆದುತರಬಾರದು, ಬೀದಿ ಕೇರಿಗಳಲ್ಲಿ ಜಗಳದ ವಸ್ತುವನ್ನಾಗಿ ಮಾಡಬಾರದು. ಅವರವರ ಭಾವಕ್ಕೆ ಸಂಬಂಧಪಟ್ಟ ವಿಷಯವಾಗಿದ್ದರೂ ಜನಸೇವಕರು ಮಾತ್ರ ತೆರಿಗೆಯ ಹಣವನ್ನು ಬಳಸಿಕೊಂಡು ಇಷ್ಟಾರ್ಥಸಿದ್ಧಿಗೆ ಆಮೋದ ಪ್ರಮೋದಕ್ಕೆ ಮುಂದಾಗಬಾರದು. ಸಿಕ್ಕಿದ ಅವಕಾಶವನ್ನು ಜನರ ಕಲ್ಯಾಣಕ್ಕಾಗಿ ಸದುಪಯೋಗಪಡಿಸಿಕೊಂಡು ಹತ್ತು ಜನರ ಬಾಯಿಯಿಂದ ಒಳ್ಳೆಯ ಶಾಸಕ, ಒಳ್ಳೆಯ ಮಂತ್ರಿ ಎಂದು ಹೇಳಿಸಿಕೊಂಡರೆ ಅದೇ ಅವರ ಭಾಗ್ಯ. ಅದರಲ್ಲೇ ಅವರ ಜೀವನದ ಸಾಫಲ್ಯ. ಅಂಥವರು ಸತ್ತಾಗ ಜನರು ಅಳುತ್ತಿರಬೇಕು. ಪರರ ಅನ್ನಕ್ಕೆ ಕಲ್ಲುಹಾಕಿ, ತನ್ನ ಹೊಟ್ಟೆ ಉಬ್ಬಿಸಿಕೊಂಡು ಬಾಳಿದ ವ್ಯಕ್ತಿ ಮಂತ್ರಿ, ಶಾಸಕ ಮತ್ತು ಅಧಿಕಾರಿ ಸತ್ತಾಗ ಜನರು ಅಯ್ಯೋ ಮಾರಿ ಹೋಯಿತಲ್ಲಾ ಅಂದು ಸಂತೋಷಪಡುವಂತೆ ಯಾರೂ ಬಾಳಬಾರದು.

ಎಂ. ಎ. ಭಟ್
'ಶ್ರೀಮಿತ್ತೂರು', ಮೇದರಹಳ್ಳಿ - ಚಿಕ್ಕಬಾಣಾವರ, ಬೆಂಗಳೂರು - ೫೬೦ ೦೯೦





## ಗಣಿಗಾರಿಕೆ ಮತ್ತು ಪರಿಸರ ಕಿಂಪಾದವೋ ಎಲ್ಲ

*ವಿ. ಸಂಗೀತ*

**ಪುಟ : ೧೭+೧೧೧=೧೨೮ ಬೆಲೆ : ರೂ. ೧೫೦**

**ಸಖಿ ಪ್ರಕಾಶನ, ಹೊಸಪೇಟೆ**

ಈ ಕೃತಿಯಲ್ಲಿ ಬಳ್ಳಾರಿ ಜಿಲ್ಲೆಯ ಗಣಿಗಾರಿಕೆ, ಅಭಿವೃದ್ಧಿ ಮತ್ತು ಪರಿಸರ ಪ್ರಶ್ನೆಗಳನ್ನು ಕುರಿತು ಲೇಖಿಕಿ ಕ್ರಮಬದ್ಧವಾದ ಅಧ್ಯಯನವನ್ನು ನಡೆಸಿದ್ದಾರೆ. ಹೊಸಪೇಟೆ, ಸಂಡೂರು ಪ್ರದೇಶದ ಗಣಿಗಾರಿಕೆಯ ಚಟುವಟಿಕೆಗಳಿಂದ ಉಂಟಾಗಿರುವ ಪರಿಸರ ಮಲಿನತೆ, ಐತಿಹಾಸಿಕ ತಾಣಗಳಿಗೆ ಬಂದೊದಗಿದ ಅಪಾಯಗಳು ಮತ್ತು ಆರೋಗ್ಯದ ಸಮಸ್ಯೆಗಳನ್ನು ಮುಖ್ಯವಾಗಿ ಚರ್ಚಿಸಿದ್ದಾರೆ. ವಿವಿಧ ಜ್ಞಾನಶಿಸ್ತುಗಳ ನೆರವು, ಕ್ಷೇತ್ರಕಾರ್ಯ, ಸಂದರ್ಶನ ಮತ್ತು ನಿಖರ ಮಾಹಿತಿಯನ್ನು ಒದಗಿಸುವ – ಈ ಬಗೆಯ ಅಧ್ಯಯನ ವಿಧಾನದಿಂದ ಈ ಕೃತಿಯು ಬಹಳ ಉಪಯುಕ್ತತೆಯಿಂದ ಕೂಡಿದೆ. ಅನೇಕ ತಾತ್ವಿಕ ವಿಚಾರಗಳಿಂದ ಅಭಿವೃದ್ಧಿ ಬಗೆಗೆ ಪರ್ಯಾಯ ಸಾಂಸ್ಕೃತಿಕ ವ್ಯಾಖ್ಯೆಯನ್ನು ಕಟ್ಟಿಕೊಳ್ಳುತ್ತಾ, ಅಭಿವೃದ್ಧಿ ಮತ್ತು ಪರಿಸರ ಸಂರಕ್ಷಣೆ ಒಂದನ್ನೊಂದು ಪೋಷಿಸುವಂತಿರಬೇಕೆಂಬ ವಿಶ್ಲೇಷಣೆ ಮಹತ್ವದ್ದಾಗಿದೆ.



## ಡೊಂಬರು – ಒಂದು ಚಾರಿತ್ರಿಕ ಹಿನ್ನೋಟ

*ಸಂ.: ಎ. ಎಸ್. ಪ್ರಭಾಕರ, ಡಾ|| ಟಿ. ಎನ್. ಚಂದ್ರಕಾಂತ್*

**ಪುಟ : x + ೧೯೨ ಬೆಲೆ : ರೂ. ೧೦೦**

**ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ**

ಈ ಕೃತಿಯು ಡೊಂಬರ ಹುಟ್ಟಿನ ಕಥೆ, ಡೊಂಬರು ಪದದ ಮೂಲ, ಡೊಂಬರ ವಿಧಗಳು, ಅವರ ಸಾಮಾಜಿಕ ಸ್ಥಾನಮಾನ, ಆಸ್ತಿಹಕ್ಕು, ಧರ್ಮ, ಕುಲಕಸುಬು – ಮೊದಲಾದ ವಿಚಾರಗಳನ್ನು ತಿಳಿಸುವ ಲೇಖನಗಳ ಸಂಗ್ರಹವಾಗಿದೆ. ಆ ಮೂಲಕ ಡೊಂಬರು ಜನಾಂಗದ ಬಗೆಗೆ ವಿಪುಲ ಮಾಹಿತಿಯನ್ನು ಈ ಕೃತಿ ಒದಗಿಸುತ್ತದೆ. ಈ ಕೃತಿಯಲ್ಲಿನ ವಸಾಹತು ಕಾಲಘಟ್ಟದಲ್ಲಿ ನಡೆದ 'ಡೊಂಬರ' ಕುರಿತ ಅಧ್ಯಯನದ ಲೇಖನಗಳು – ಕೆಳ 'ಜನಾಂಗ'ವೊಂದನ್ನು ನೋಡುವ ಬ್ರಿಟಿಷ್ ಪ್ರಭುತ್ವದ ಸಂಕುಚಿತ ಓರಿಯಂಟಲ್ ಅಧ್ಯಯನದ ಮಾದರಿಯನ್ನು ಪರಿಚಯಿಸುತ್ತವೆ. ಈ ಕೃತಿಯ ಲೇಖನಗಳು ಅಲೆಮಾರಿ ಜನಾಂಗವೊಂದರ ಹಾಡುಪಾಡನ್ನು ತಿಳಿಸುತ್ತಲೇ ಅವರ ದುಃಸ್ಥಿತಿಗೆ ಕಾರಣವಾದ ವ್ಯವಸ್ಥೆಯನ್ನು ವಿಶ್ಲೇಷಿಸುತ್ತವೆ.

## ನೀಲಾಂಬಿಕಾ

*ಬಿ. ಎ. ಸನದಿ*

**ಪುಟ : ೬೪ ಬೆಲೆ : ರೂ. ೫೦**

**ಕನ್ನಡ ಪ್ರಕಾಶನ, ಟೊರೊಂಟೊ, ಕೆನಡಾ**



ರಂಗಭೂಮಿಯಲ್ಲಿ ಪ್ರದರ್ಶನಗೊಂಡಿರುವ, ಮರಾಠಿ ಭಾಷೆಗೆ ಅನುವಾದಗೊಂಡಿರುವ ಬಿ. ಎ. ಸನದಿಯವರ 'ನೀಲಾಂಬಿಕಾ' ನಾಟಕವು ಬಸವಣ್ಣನ ಮಡದಿಯಾದ 'ನೀಲಾಂಬಿಕೆ'ಯ ಜೀವನ ಕುರಿತದ್ದಾಗಿದೆ. ಎಂಟು ದೃಶ್ಯಗಳನ್ನುಳ್ಳ ಈ ನಾಟಕದಲ್ಲಿ ವೀರಶೈವ ಕಾವ್ಯ ಮತ್ತು ವಚನ ಸಾಹಿತ್ಯದಲ್ಲಿ ಚಿತ್ರಿಸಿರುವ ನೀಲಾಂಬಿಕೆಯ ವ್ಯಕ್ತಿಚಿತ್ರಕ್ಕೆ ಲೋಪವಾಗದಂತೆ ಇನ್ನಷ್ಟು ಮೆರಗು ನೀಡಲಾಗಿದೆ. ಬಸವಣ್ಣನ ಮಡದಿ ಎಂದಷ್ಟೇ ನೋಡದೆ ಮಹಾಮನೆಯ ಜವಾಬ್ದಾರಿ ಹೊತ್ತ ಸ್ವತಂತ್ರ ವ್ಯಕ್ತಿತ್ವದ ವಚನಗಾರ್ತಿಯಾಗಿ ಚಿತ್ರಿಸಲಾಗಿದೆ. ಬಸವಣ್ಣ ಕೈಲಾಸವಾಸಿಯಾದರೆಂದು ತಿಳಿದಾಗ ತಾನೂ ದೇಹವನ್ನು ಲಿಂಗೈಕ್ಯಗೊಳಿಸುವ ಆಕೆಯ ಭಕ್ತಿಯನ್ನು ಈ ನಾಟಕದಲ್ಲಿ ಚಿತ್ರಿಸಲಾಗಿದೆ.



## ಇತಿಹಾಸ ಸಂಪದ (ಶಿವಮೊಗ್ಗ ಪರಿಸರದ ಐತಿಹಾಸಿಕ ಪ್ರಬಂಧಗಳು)

*ಜಯದೇವಪ್ಪ ಜೈನಕೇರಿ*

**ಪುಟ : xx + ೩೧೨ + ೪೦ ಬೆಲೆ : ರೂ. ೨೦೦**

**ಶಾಂತಲಾ ಪ್ರಕಾಶನ**, ೮೭, ಶಾಂತಲಾ, ಕುವೆಂಪು ರಸ್ತೆ, ಶಿವಮೊಗ್ಗ - ೫೭೭ ೨೦೧, ಕರ್ನಾಟಕ

ಈ ಕೃತಿಯು ಈಗಾಗಲೇ ಅನೇಕ ಪತ್ರಿಕೆಗಳಲ್ಲಿ ಪ್ರಕಟವಾದ ಲೇಖನಗಳ ಸಂಗ್ರಹವಾಗಿದ್ದು, ವಿಭಿನ್ನ ಸಂದರ್ಭಗಳಲ್ಲಿ ಬರೆದ ಒಟ್ಟು ನಲವತ್ತೊಂಭತ್ತು ಲೇಖನಗಳನ್ನು ಒಳಗೊಂಡಿದೆ. ಮುಖ್ಯವಾಗಿ ಶಿವಮೊಗ್ಗ ಪರಿಸರವನ್ನು ಪರಿಚಯಿಸುವ ಐತಿಹಾಸಿಕ ಲೇಖನಗಳು, ಸಂಶೋಧನ ಲೇಖನಗಳು ಇಲ್ಲಿವೆ. ಪ್ರತಿಯೊಂದು ಲೇಖನವೂ ಲೇಖಕರ ಆಸಕ್ತಿಯಿಂದಾಗಿ ಐತಿಹಾಸಿಕ ವಿವರಣೆ ಹಾಗೂ ಪರಿಚಯಾತ್ಮಕ ನೆಲೆಯಿಂದ ಮೂಡಿದ್ದು, ಅನೇಕ ಮಾಹಿತಿಗಳನ್ನು ಒದಗಿಸುತ್ತದೆ. ಇಲ್ಲಿನ ಬಹುತೇಕ ಲೇಖನಗಳು ಇತಿಹಾಸದ ಬಗೆಗೆ ಅಪಾರ ಮಾಹಿತಿ ನೀಡಿ, ಓದುಗರಲ್ಲಿ ಆಸಕ್ತಿ ಮೂಡಿಸುವಂತಿವೆ.



## ಸಾಮ್ರಾಜ್ಯಶಾಹಿ ಮತ್ತು ರಾಷ್ಟ್ರೀಯವಾದ – ಮಧ್ಯ ಪ್ರಾಚ್ಯ ಚರಿತ್ರೆಯ ಒಂದು ನಿರೂಪಣೆ

*ಬಾರ್ಕೂರು ಉದಯ*

**ಪುಟ : xiv + ೨೭೪ ಬೆಲೆ : ರೂ. ೧೫೦**

**ಜನವಾದಿ ಪ್ರಕಾಶನ, ಸಾಸ್ತಾನ, ಗುಂಡ್ಮಿ**

ಈ ಕೃತಿಯಲ್ಲಿ ಮಧ್ಯ ಪ್ರಾಚ್ಯವನ್ನು ಕೇಂದ್ರದಲ್ಲಿರಿಸಿ ಅಮೆರಿಕಾ ಸಾಮ್ರಾಜ್ಯಶಾಹಿ ಪ್ರಭುತ್ವದ ಹುಟ್ಟು, ಬೆಳವಣಿಗೆ ಮತ್ತು ಅದರ ವಿಸ್ತಾರವನ್ನು ಗುರುತಿಸುವ ಪ್ರಯತ್ನವನ್ನು ಲೇಖಕರು ಮಾಡಿದ್ದಾರೆ. ಅಮೆರಿಕಾ ಸಾಮ್ರಾಜ್ಯಶಾಹಿ ಪ್ರಭುತ್ವದ ಮೂಲ ಉದ್ದೇಶಗಳನ್ನು, ಅದು ಹಾಕಿಕೊಂಡ ಕಾರ್ಯತಂತ್ರಗಳನ್ನು ಮತ್ತು ತನ್ನ ಇರುವಿಕೆಯನ್ನು ಕಾಯ್ದುಕೊಳ್ಳಲು ಅಮೆರಿಕಾ, ಪ್ರಾದೇಶಿಕ ಪ್ರಭುತ್ವಗಳೊಂದಿಗೆ ಮಾಡಿಕೊಂಡ ಒಡಂಬಡಿಕೆಯ ಸ್ವರೂಪವನ್ನು ವಿಮರ್ಶಿಸುವ ಪ್ರಯತ್ನವನ್ನು ಈ ಕೃತಿಯಲ್ಲಿ ಕಾಣಬಹುದು. ಬೆನೆಡಿಕ್ಟ್ ಆ್ಯಂಡರ್‌ಸನ್, ಎಡ್ವರ್ಡ್ ಸೈಯಿದ್ ಮುಂತಾದವರ 'ರಾಷ್ಟ್ರೀಯವಾದ'ದ ತಾತ್ವಿಕ ಹಿನ್ನೆಲೆಯಲ್ಲಿ ಅರಬ್ ರಾಷ್ಟ್ರಗಳಲ್ಲಿ ರೂಪುಗೊಂಡ ರಾಷ್ಟ್ರೀಯವಾದ ಮತ್ತು ಅದನ್ನು ಬಲಪಡಿಸಲು ಹುಟ್ಟಿಕೊಂಡ ಸಾಮ್ರಾಜ್ಯಶಾಹಿ ಮನೋಭಾವದ ಪರಿಕಲ್ಪನೆಯನ್ನು ಮಧ್ಯ ಪ್ರಾಚ್ಯ ರಾಷ್ಟ್ರಗಳ ಸಮಸ್ಯೆಗಳೊಂದಿಗೆ ಲೇಖಕರು ಚರ್ಚಿಸಿದ್ದಾರೆ. ಹಾಗಾಗಿ ಚರಿತ್ರೆಯೊಂದನ್ನು ಬರೆಯುವುದರ ಜತೆಗೆ ಹಾಗೆ ರೂಪಗೊಂಡ ಚರಿತ್ರೆಗೆ ಇರುವ ರಾಜಕೀಯ ಹುನ್ನಾರ ಹಾಗೂ ಬಹುಮುಖೀ ನೆಲೆಗಳನ್ನು ಕುರಿತು ಲೇಖಕರು ವಿಶ್ಲೇಷಿಸಿದ್ದಾರೆ. ಆ ಕಾರಣ ಈ ಕೃತಿಯು – 'ಚರಿತ್ರೆ' ಕಟ್ಟುವ ಕೆಲಸವಷ್ಟೇ ಅಲ್ಲದೆ, ವಿವಿಧ ಶಿಸ್ತುಗಳ ಹಿನ್ನೆಲೆಯಲ್ಲಿ ಸಾಮಾಜಿಕ ವ್ಯವಸ್ಥೆ, ಆರ್ಥಿಕ ಸಂಕಟವನ್ನು ವಿಶ್ಲೇಷಿಸುವ ಕೆಲಸವನ್ನೂ ಮಾಡಿದೆ. ಇಂತಹ ಕೃತಿಯೊಂದು ಕನ್ನಡದಲ್ಲಿ ಮೂಡಿರುವುದು ಬಹಳ ಉಪಯುಕ್ತವಾದುದ್ದಾಗಿದ್ದು ಸ್ವಾಗತಾರ್ಹವಾಗಿದೆ.



## ದೇಗುಲದಲ್ಲಿ ದೆವ್ವ (ಕಾದಂಬರಿ)

*ಅನು : ಡಾ|| ಬಂಜಗೆರೆ ಜಯಪ್ರಕಾಶ*

**ಪುಟ : ೩೦೪ ಬೆಲೆ : ರೂ. ೨೦೦**

**ಹೊನ್ನಾರು ಪ್ರಕಾಶನ**, ಸಾರ್ವಜನಿಕ ಆಸ್ಪತ್ರೆ ಹಿಂಭಾಗ, ವಿದ್ಯಾನಗರ, ತಿಪಟೂರು-೫೭೨೨೦೨, ತುಮಕೂರು ಜಿ.

ಈ ಕಾದಂಬರಿಯ ಮೂಲ ಕೃತಿಕಾರ ಕೆನ್ಯಾ ದೇಶದ ಖ್ಯಾತ ಕಾದಂಬರಿಕಾರನಾದ ಗೂಗಿ ವಾ ಥಿಯಾಂಗೋ. 'ಡೆವಿಲ್ ಆನ್ ದಿ ಕ್ರಾಸ್' ಆಫ್ರಿಕಾ ಖಂಡದ ಸಾಮಾಜಿಕ ಆರ್ಥಿಕ ದುಃಸ್ಥಿತಿ, ಮನುಷ್ಯ-ಮನುಷ್ಯರ ನಡುವಿನ ಸಂಬಂಧದ ಮೇಲೆ ಬೆಳಕು ಚೆಲ್ಲಿದ ಕಾದಂಬರಿ. ವಸಾಹತುಶಾಹಿಯಿಂದ ಬಿಡುಗಡೆಗೊಂಡರೂ ನವಸಾಮ್ರಾಜ್ಯಶಾಹಿ ಶೋಷಣೆಗಳ ವಿಕೃತಿಗಳನ್ನು ಜಗತ್ತಿಗೆ ವಿವರಿಸಿದ ವಿನೂತನವಾದ ಕೃತಿ ಇದು. ಕೆನ್ಯಾದ ಮೌಖಿಕ ವೀರಗಾಥೆಗಳ ಶೈಲಿಯನ್ನು ಅನುಸರಿಸಿ ಈ ಕೃತಿ ರಚಿತವಾಗಿದೆ. ಬಂಜಗೆರೆ ಜಯಪ್ರಕಾಶ್ ಹೇಳಿರುವಂತೆ ''ಈ ಕೃತಿ ಸಮಕಾಲೀನ ಸಂದರ್ಭಕ್ಕೆ ಪ್ರಸ್ತುತವಾಗಬಲ್ಲದು. ಏಕೆಂದರೆ, ಇಂದು ಭಾರತವೂ ಸೇರಿದಂತೆ ಜಗತ್ತಿನ ಬಹುತೇಕ ರಾಷ್ಟ್ರಗಳು ಎದುರಿಸುತ್ತಿರುವ ಜಾಗತೀಕರಣದ ಸಮಸ್ಯೆಗಳನ್ನು ಅವಲೋಕಿಸಲೂ ಒತ್ತಾಯಿಸುತ್ತದೆ. ''ವಸಾಹತುಶಾಹಿ ಆಳ್ವಿಕೆಯ ಉರುಳಿನಿಂದ ಇತ್ತೀಚೆಗೆ ಹೊರಬಿದ್ದ ದೇಶಗಳು ರೋಗಗ್ರಸ್ತವಾಗಿವೆ. ಈ ದೇಶಗಳು ತಮ್ಮ ಆರ್ಥಿಕ ವ್ಯವಸ್ಥೆಗಳನ್ನು ಹೇಗೆ ನಿರ್ವಹಿಸಬೇಕೋ ಅದನ್ನು ಅಮೆರಿಕನ್ ತಜ್ಞರಿಂದ ಕಲಿತುಕೊಳ್ಳಬೇಕೆಂದುಕೊಳ್ಳುತ್ತವೆ. ಆದ್ದರಿಂದಲೇ ಬಡತನವನ್ನು ತೊಲಗಿಸುವುದಕ್ಕೆ ಅಸಾಧ್ಯವಾಗಿದೆ.'' ಇದು ಕೃತಿಯ ಮುಖ್ಯ ಅಂಶ.

**– ಸುಜಾತ ಲಕ್ಷ್ಮೀಪುರ**

*ನಂ. ೧೭೧, ೭ನೇ ಅಡ್ಡರಸ್ತೆ, ಲಕ್ಷ್ಮೀಪುರ, ಬೆಂಗಳೂರು - ೫೬೦ ೦೧೯*

# ಕನ್ನಡಕ್ಕೆ ಕಾಲಿರಿಸಿದ 'ಮೂಲಮಾಧ್ಯಮಕಕಾರಿಕಾ'

ಆಕಾರ ನಿರಾಕಾರವೆಂಬೆರಡೂ ಸ್ವರೂಪಂಗಳು
ಒಂದು ಆಹ್ವಾನ ಒಂದು ವಿಸರ್ಜನ
ಒಂದು ವ್ಯಾಕುಳ ಒಂದು ನಿರಾಕುಳ
ಉಭಯ ಕುಳರಹಿತ ಗುಹೇಶ್ವರ.

ಇದು ಅಲ್ಲಮ ನೀಡಿದ ಪಂಥಾತೀತವಾದ ಲೋಕ ವಿವರಣೆ. ನಮ್ಮ ಸುತ್ತಲಿನ ಲೋಕವನ್ನು ಗ್ರಹಿಸ ಬೇಕಾಗಿರುವ ಸರಿಯಾದ ಕ್ರಮವನ್ನು ಮತ್ತು ನಾವು ಲೋಕಗ್ರಹಿಕೆಯಲ್ಲಿ ಮಾಡುತ್ತಿರುವ ಸಾಮಾನ್ಯ ತಪ್ಪನ್ನು ಪ್ರಭು ಇಲ್ಲಿ ವಿವರಿಸಿದ್ದಾನೆ. ಈ ವಚನದ ವಿಶೇಷ ವೆಂದರೆ ನಮಗೆ ಈಗ ಅತ್ಯಂತ ಕ್ಲಿಷ್ಟವೆನಿಸುತ್ತಿರುವ ಈ ಸಂಗತಿಯನ್ನು ಸರಳಗೊಳಿಸಿ ನುಡಿಯಲು ಬೇಕಾಗುವ ಪರಿಭಾಷೆಯನ್ನು ಈ ವಚನದಲ್ಲಿ ಕನ್ನಡದಲ್ಲಿ ಸಿದ್ಧಪಡಿಸ ಲಾಗಿದೆ. ಇದು ಒಂದು ಭಾಷೆಯ ಸಾಮರ್ಥ್ಯವನ್ನೇ ವಿಸ್ತರಿಸಿರುವ ದೊಡ್ಡ ಪ್ರಯತ್ನ. ಸಾಮಾನ್ಯವಾಗಿ ನಾವು ಲೋಕವನ್ನು ಅವಳಿ ವೈರುಧ್ಯಗಳಲ್ಲಿ ಗ್ರಹಿಸಿ ತಪ್ಪಾಗಿ ನಡೆದುಕೊಳ್ಳುತ್ತೇವೆ. ಎದುರಿಗೆ ಕಂಡ ಆಕಾರಗಳನ್ನೆಲ್ಲ ಸ್ವತಂತ್ರ ಶಾಶ್ವತ ವಸ್ತುಗಳೆಂದು ಭ್ರಮಿಸಿಬಿಡುತ್ತೇವೆ. ಅವುಗಳು ಶಾಶ್ವತ 'ನಿಜ'ಗಳೆಂದು ಭಾವಿಸಿ ಸ್ವೀಕರಿಸಿ ಬಿಡುತ್ತೇವೆ, ಆಹ್ವಾನಿಸುತ್ತೇವೆ. ಬದಲಾಗುವ ಅದನ್ನು ಕಂಡು ವ್ಯಾಕುಲಗೊಳ್ಳುತ್ತೇವೆ ಅಥವಾ ಎದುರಿಗೆ ಸಂಭವಿಸುತ್ತಿರುವ ಮತ್ತು ಸಂಭವಿಸಬಹುದಾದ ಸಂಗತಿಗಳನ್ನು ಅವು ಶಾಶ್ವತವಾಗಿ 'ಇಲ್ಲ'ವೆಂದು ಗ್ರಹಿಸಿ ತಪ್ಪೆಸಗುತ್ತೇವೆ. ನಮ್ಮೆದುರಿನ ಲೋಕ ಸಮಸ್ತವನ್ನು ಮಾಯೆಯೆಂದು, 'ಇಲ್ಲ'ವೆಂದು ಭಾವಿಸಿ, ವಿಸರ್ಜಿಸಿ ಕೈತೊಳೆದುಕೊಳ್ಳುತ್ತೇವೆ. ಸುಖ-ದುಃಖಗಳನ್ನು ಉಂಟು ಮಾಡುವ (ಈ ಎರಡನ್ನೂ ಸೇರಿಸಿ ಬೌದ್ಧಧರ್ಮದಲ್ಲಿ 'ದುಃಖ'ವೆಂದು ಸೂಚಿಸಲಾಗಿದೆ) ನಮ್ಮೆದುರಿಗೆ ಜರುಗುತ್ತಿರುವ ಲೋಕ ಸಮಸ್ತವನ್ನೂ ಹಾಗೆ ನಿರಾಕರಿಸಿ ನಿರಾಕುಳಗೊಳ್ಳಲಾಗದು. ಆಕಾರ ನಿರಾಕಾರ ಎರಡೂ ಅಲ್ಲದ, ಆಹ್ವಾನ-ವಿಸರ್ಜನ ಎರಡೂ ಅಲ್ಲದ ಈ ಅವಳಿ ವೈರುದ್ಧ್ಯಗಳನ್ನು ಬಿಟ್ಟು ಸರಿಯಾದ ಲೋಕಸತ್ಯ ವನ್ನು (ಗುಹೇಶ್ವರನನ್ನು) ಕಟ್ಟಿಕೊಳ್ಳುವ ಕ್ರಮವನ್ನು ಅಲ್ಲಮ ಕುಳರಹಿತನಾಗಿ ನೀಡಿದ್ದಾನೆ. ಅವಳಿ ವೈರುದ್ಧ್ಯ ಗಳನ್ನು ಬಿಟ್ಟುಕೊಟ್ಟರೆ ಉಳಿವ 'ಯಾನ'ವನ್ನು ಮಾತ್ರ ಸೂಚಿಸಿದ್ದಾನೆ. ಇದು ಬುದ್ಧ ನೀಡಿದ, ನಾಗಾರ್ಜುನ ವಿವರಿಸಿದ ಮತ್ತು ಅಲ್ಲಮ ಸೂಚಿಸುತ್ತಿರುವ ಮಾಧ್ಯಮ ಮಾರ್ಗ.

ಬುದ್ಧ ಲೋಕವನ್ನು ಇದೆ-ಇಲ್ಲ ಎಂಬ ಎರಡು ತುದಿಗಳಿಂದ ವಿವರಿಸದೆ ಅದನ್ನು ನಿರಂತರವಾಗಿ ಹರಿಯುತ್ತಿರುವ ಪ್ರವಾಹವೆಂದು ವಿವರಿಸಿದ್ದಾನೆ. ಲೋಕದಲ್ಲಿ 'ಆಗಿ ಇರುವುದು' ಯಾವುದೂ ಇಲ್ಲ: ಇಲ್ಲವೂ 'ಆಗುತ್ತಲೇ' ಇರುತ್ತದೆ. ಆದರೆ ಸಾಮಾನ್ಯ ಮಾನವ ಮತಿ ಎಲ್ಲದರಲ್ಲೂ ಶಾಶ್ವತವಾದ ಒಂದನ್ನು ಹುಡುಕುತ್ತಿರುತ್ತದೆ. ಈ ಹುಡುಕಾಟ ಎಲ್ಲದಕ್ಕೂ ಒಂದು ನಿಶ್ಚಿತ ಪ್ರಾರಂಭವನ್ನು ಶಾಶ್ವತ ಅಂತ್ಯವನ್ನೂ ಕಂಡು ಕೊಳ್ಳಲು ಹಾತೊರೆಯುತ್ತದೆ. ಈ ನಿಲುವು ಅಂತಿಮ ವಾಗಿ ದುಃಖವಾಗಿ ಪರಿಣಮಿಸುತ್ತದೆ. ಏಕೆಂದರೆ ಸದಾ ಬದಲಾಗುತ್ತಲೇ ಇರುವುದನ್ನು, 'ಹಾಗೇ ಇದೆ' ಎಂದುಕೊಂಡು ವ್ಯವಹರಿಸಿದಾಗ ನಿರಾಸೆಯಾಗಲೇ ಬೇಕು. ಈ ದುಃಖಕ್ಕೆ ಪರಿಹಾರವೆಂದರೆ ಲೋಕವನ್ನು ಸರಿಯಾಗಿ ಅದು ಇರುವಂತೆಯೇ, ಎಂದರೆ ಸದಾ ಹರಿಯುತ್ತಿರುವ ಪ್ರವಾಹವೆಂದು, ಭಾವಿಸಬೇಕು. ಹಾಗೆ ಭಾವಿಸಿದಾಗ ವ್ಯಾಕುಲವಾಗಲೀ ನಿರಾಕುಳ ವಾಗಲೀ ಉಂಟಾಗದು. ಇದು ಯಾವುದೇ ಧರ್ಮದ ಅಥವಾ ಪಂಥಬದ್ಧವಾದ ವಿವರಣೆ ಅಲ್ಲ. ನಾವೆಲ್ಲಾ ಇರಬೇಕಾದ್ದೇ ಹಾಗೆ. ಈ ಮಧ್ಯಮ ಮಾರ್ಗವನ್ನು ಪೂರ್ಣ ಪ್ರಮಾಣದ ಚಿಂತನಾ ಪ್ರಸ್ಥಾನವನ್ನಾಗಿ ರೂಪಿಸಿಕೊಟ್ಟವನು ದಾರ್ಶನಿಕ ನಾಗಾರ್ಜುನ. ಕನ್ನಡದ ನೆಲದವನು. ಇಂದಿಗೂ ವಿಶ್ವದ ಮಹಾನ್ ದಾರ್ಶನಿಕರಲ್ಲೊಬ್ಬ.

ಧರ್ಮಗಳ ನೆಲೆಯಿಂದ ಪ್ರೇರಿತವಾದ ಜ್ಞಾನ ಮೀಮಾಂಸೆಗಳು 'ಗೊತ್ತಿರುವುದರ' ಕಡೆಯಿಂದ 'ಗೊತ್ತಿಲ್ಲದ್ದರ' ಕಡೆಗೆ ಚಲಿಸಿದರೆ, ವಿಜ್ಞಾನ 'ಗೊತ್ತಿಲ್ಲದ್ದ'ರಿಂದ 'ಗೊತ್ತಾಗಿಸಿಕೊಳ್ಳುವ'ತ್ತ ಸಂಚಲನೆ ಮಾಡುತ್ತದೆ. ಧರ್ಮದೃಷ್ಟಿಗೆ 'ಎಲ್ಲವೂ ತಿಳಿದಿದೆ' ಎಂಬ ಭ್ರಮೆ ಸ್ಥಾಯಿಯಾದುದು. ಇವುಗಳಲ್ಲಿ ಎಲ್ಲ ಪ್ರಶ್ನೆ ಗಳಿಗೂ ಉತ್ತರವಿರುತ್ತದೆ. ಸಿದ್ಧಗೊಳ್ಳದೇ ಇರುವ ಬಿಕ್ಕಟ್ಟುಗಳಿಗೂ ಪರಿಹಾರವಿರುತ್ತದೆ. ತನ್ನ ತಿಳಿವಳಿಕೆ ಪ್ರಶ್ನಾತೀತವೆಂಬ ಧಾರ್ಷ್ಟ್ಯ ಇವುಗಳದ್ದು. ಹೀಗಾಗಿ ಸದಾ ಹೆಜಮನಿಯ ರಾಜಕೀಯದೊಂದಿಗೆ ಬೆರೆತಿರುತ್ತವೆ. ವಿಜ್ಞಾನವು ಲೋಕ ರಹಸ್ಯಗಳನ್ನು ''ಗೊತ್ತಿಲ್ಲದಿರುವು ದರಿಂದ ಗೊತ್ತಿರುವ ಕಡೆ'' ಹೋಗುವ ವಿಧಾನದಲ್ಲಿ ಭೇದಿಸುತ್ತಾ ಹೋದಂತೆ ಅದೂ ಯಾಜಮಾನ್ಯದ ನೆಲೆಯನ್ನು ಸ್ಥಾಪಿಸಿಬಿಡುತ್ತದೆ. ಇದೊಂದು ಬಗೆಯ ಪಾಂಥಿಕ ಕುರುಡು. ಯಾವುದೇ ರಚನೆ ಅಂತಿಮವಾಗಿ ತನ್ನ ಭಜನೆಯಲ್ಲಿ ತಾನೇ ಮುಳುಗುವ ವ್ಯಾಧಿಗೆ ಸಿಲುಕು ತ್ತದೆ. ಹೀಗಾಗಿ ಯಾವುದೇ ರಚನೆಯನ್ನು ಮುರಿಯ ದಿದ್ದರೆ ಅದರ ಆಚೆಗಿನ ಜಗತ್ತು ಕಾಣುವುದಿಲ್ಲ. ಇಂತಹ ಎಲ್ಲ ಬಗೆಯ ರಚನೆಗಳನ್ನು ವಿರಚನೆ ಮಾಡುವ ವಿರಚನೆಯನ್ನೇ ಪುನಾರಚಿಸುವ ಆವರ್ತನ ಚಿಂತನೆಯೆ ತಥಾಗತ ಬುದ್ಧನು ವಿವರಿಸಿದ ಶೂನ್ಯತತ್ವ.

ಕ್ರಿಸ್ತಪೂರ್ವ ೫ನೇ ಶತಮಾನದಲ್ಲಿ ಬಾಳಿದ ಬುದ್ಧನಿಗೂ ಸುಮಾರು ಕ್ರಿಸ್ತಶಕ ಎರಡನೇ ಶತಮಾನದಲ್ಲಿ ಜೀವಿಸಿದ್ದ ನಾಗಾರ್ಜುನನ ಕಾಲಕ್ಕೂ ಅಂತರವಿದೆ. ನಾಗಾರ್ಜುನ ಬುದ್ಧನಿಂದ ವಿವರಿಸಲ್ಪಟ್ಟ ಮಾಧ್ಯಮಕ ಫಿಲಾಸಫಿಯನ್ನು ತನ್ನ 'ಕಾರಿಕಾ'ದಲ್ಲಿ ವ್ಯಾಖ್ಯಾನಿಸಿದ. ನಟರಾಜ ಬೂದಾಳು ಅವರು ಈ



ತತ್ವದ ಸಾರವನ್ನು ಕನ್ನಡೀಕರಿಸಿದ್ದಾರೆ.

ಇಪ್ಪತ್ತನೇ ಶತಮಾನದ ಜ್ಞಾನ ಪ್ರಸ್ಥಾನಗಳ ಮಿತಿ ಯೆಂದರೆ ಪಾಶ್ಚಾತ್ಯ ಚಿಂತನಾ ವಿಧಾನಗಳನ್ನು ಪ್ರಮಾಣ ವೆಂದು ನಂಬಿದ್ದು. ಸಾಹಿತ್ಯ, ಕಲೆ, ವಿಜ್ಞಾನ ಮುಂತಾದ ಎಲ್ಲ ವಿಷಯಗಳಿಗೂ ಈ ಮಾತು ಅನ್ವಯಿಸುತ್ತದೆ. ಪೌರ್ವಾತ್ಯ ಚಿಂತನಾಧಾರೆಗಳ ಅವಜ್ಞೆಗೆ ಕಾರಣಗಳು ಹಲವಾರು ಇರಬಹುದು. ಆ ಚರ್ಚೆ ಇಲ್ಲಿ ಮುಖ್ಯವಲ್ಲ. ಈ ಗ್ಲಾನಿಯಿಂದ ಬಿಡಿಸಿಕೊಳ್ಳುವ ಕರ್ಮಗಳನ್ನು ಇಂಗ್ಲಿಷ್ ಬರಹಗಾರರಾದ ಎಡ್ವರ್ಡ್ ಸೈದ್‌ನಿಂದ ತೊಡಗಿ ಕನ್ನಡದಲ್ಲಿ ಡಿ. ಆರ್. ನಾಗರಾಜ್, ಯು. ಆರ್. ಅನಂತಮೂರ್ತಿ ಮುಂತಾದವರು ಹುಡುಕಿ ದ್ದಾರೆ. ಈ ಮಾರ್ಗದ ಮುಂದುವರಿಕೆಯಾಗಿ ಎಸ್. ನಟರಾಜ ಬೂದಾಳರ 'ಮೂಲಮಾಧ್ಯಮಕಕಾರಿಕಾ'

**ಡಾ|| ಬಿ. ಸಿ. ನಾಗೇಂದ್ರ ಕುಮಾರ್**

ನಾಗಾರ್ಜುನನ
ಮೂಲಮಾಧ್ಯಮಕಕಾರಿಕಾ

ಲೇಖಕರು
ಎಸ್. ನಟರಾಜ ಬೂದಾಳು

ಪುಟ : ೨೦೦ ಬೆಲೆ : ರೂ. ೧೫೦

ಪ್ರಕಾಶಕರು
**ಅಭಿನವ**
ಸಂ. ೧೭/೧೮/೨, ಮೊದಲನೆಯ ಮುಖ್ಯರಸ್ತೆ
ಮಾರೇನಹಳ್ಳಿ, ವಿಜಯನಗರ
ಬೆಂಗಳೂರು - ೫೬೦ ೦೪೦

ಕೃತಿಯು ಹೊಸ 'ದೇಸೀ ಕಣ್ಣಾಗಿ' ಮೂಡಿಬಂದಿದೆ.

ಬುದ್ಧ, ಅಲ್ಲಮ, ನಾಗಾರ್ಜುನ ಮುಂತಾದವರು ದೇಸಿಯೂ ಅಲ್ಲ; ವೈಶ್ವಿಕವೂ ಅಲ್ಲ; ಯಾವ ವಿಶೇಷಣಗಳಿಗೂ ನಿಲುಕದವರು. ಎಲ್ಲಾ ದ್ವಿಮಾನಗಳನ್ನು ಭಂಗಗೊಳಿಸಿದಂಥವರನ್ನು ಮತ್ತೆ ಅವಳಿ ವೈರುದ್ಧ್ಯಗಳಿಗೆ ಅಂಟಿಸುವುದು ಸೂಕ್ತವಲ್ಲ. ಈ ಎಲ್ಲಾ ಸೂಕ್ಷ್ಮಗಳೊಂದಿಗೆ ಬೂದಾಳು ಅವರು ಬುದ್ಧ-ನಾಗಾರ್ಜುನರ ಚಿಂತನೆಯ ಸಾರವನ್ನು ಕನ್ನಡದ ಕಣ್ಣಿನಲ್ಲಿ ದರ್ಶಿಸಿದ್ದಾರೆ. ನಾಗಾರ್ಜುನ ತನ್ನ ಕಾಲದಲ್ಲಿ ಹೇಗೆ ಬುದ್ಧನ ಚಿಂತನೆಯನ್ನು ಪುನಃ ವಿವರಿಸದೆ ಮರುಚಿಂತನೆಗೆ ಗುರಿಪಡಿಸಿದನೊ ಹಾಗೆಯೇ ನಟರಾಜ ಸಹ ನಿರಂತರವಾಗಿ ಪ್ರವಹಿಸುತ್ತಿರುವ ವರ್ತಮಾನದಲ್ಲಿ ಈ ಇಬ್ಬರ ಮೂಲಕ ಹರಿದುಬಂದ 'ಕಾರಿಕೆ'ಯನ್ನು ವ್ಯಾಖ್ಯಾನಿಸಿದ್ದಾರೆ.

ತತ್ವಜ್ಞಾನ, ವಿಜ್ಞಾನ, ಶಾಸ್ತ್ರ, ಕಲೆಗಳು ಲೋಕವನ್ನು ವಿವರಿಸಲು ತಮ್ಮದೇ ಆದ ಕ್ರಮವನ್ನು ಅನುಸರಿಸುತ್ತವೆ; ಹಾಗೂ ತಂತಮ್ಮ ಕ್ರಮಗಳೇ ಆತ್ಯಂತಿಕವೆಂದು ಭಾವಿಸುತ್ತವೆ. ಜ್ಞಾನ ಮೀಮಾಂಸೆಗಳು ಅನುಸರಿಸುವ ವಿಧಾನಗಳ ಮಿತಿಯನ್ನು ಒಡೆದುಹಾಕುವ ಬಗೆ 'ಮಾಧ್ಯಮಕಕಾರಿಕೆ'ಯ ಅಂತಃಸತ್ವ ಎನ್ನಬಹುದು. 'ಮಾಧ್ಯಮಕ ಮಾರ್ಗ' ಎಂಬುದು ಸಮಚಿತ್ತದ ದೃಷ್ಟಿಕೋನ. ಹೀಗೇ ನೋಡಬೇಕೆನ್ನುವುದಕ್ಕಿಂತ, ಹೀಗೂ ನೋಡಬಹುದೆಂಬ, ಹೀಗೇಕೆ ನೋಡಬೇಕೆಂಬ, ಹೀಗೇಕೆ ನೋಡಬಾರದೆಂಬ ಪ್ರಶ್ನೆಗಳ ಭಿನ್ನ ಮಾರ್ಗಗಳ ಸಂಕಲನಾನುಸಂಧಾನ ಕಾರಿಕೆಯದು. ಪ್ರಮಾಣಗಳನ್ನು ಆಧರಿಸಿ ಲೋಕವನ್ನು ವಿವರಿಸಲು ದರ್ಶನಗಳು ಯತ್ನಿಸುತ್ತಿದ್ದಾಗ ನಾಗಾರ್ಜುನ, ಅಲ್ಲಮರು ಪ್ರಮಾಣಗಳನ್ನು ಅಪ್ರಮಾಣವೆಂದು ನಿರಾಕರಿಸಿಬಿಡುತ್ತಾರೆ. ಇದೇ ರೀತಿ ಡಾ॥ ನಟರಾಜ ಬೂದಾಳು ಅವರು ಸಹ ವಿಜ್ಞಾನ ಪ್ರಮಾಣಗಳ ಪಾರಮ್ಯದ ಈ ಕಾಲದಲ್ಲಿ ನಿರಾಕುಳಗೊಳಿಸುವ ಪರಂಪರೆಯನ್ನು ಮುಂದುವರಿಸಿದ್ದಾರೆ.

ಪ್ರತಿಯೊಂದನ್ನೂ ಅವಳಿ ವೈರುದ್ಧ್ಯಗಳಲ್ಲಿ ನೋಡುವುದು ಇಂದಿನ ಜ್ಞಾನಶಿಸ್ತುಗಳ ಮಿತಿಯಾಗಿದೆ. ಸರ್ವವಿದಿತ ಸ್ಥಿತಿಯಲ್ಲಿ ನಿಂತು ವಿವರಿಸುವ ಜಗದ್ಗುರು, ಜ್ಯೋತಿಷಿಗಳ ದೃಷ್ಟಿಕೋನದ ಅಬ್ಬರದ ಎದುರಿಗೆ 'ಮಾಧ್ಯಮಕ ಕಾರಿಕೆ' ಭಿನ್ನವಾಗಿ, ಬಿಡುಗಡೆಯಾಗಿ ಪರ್ಯಾಯವಾಗಿ ಕಾಣಿಸುತ್ತದೆ. ನಾಗಾರ್ಜುನ ಕೇವಲ ವೈದಿಕ ದರ್ಶನಗಳ ಮಿತಿ ಮತ್ತು ಸಮಸ್ಯೆಗಳನ್ನಷ್ಟೇ ವಿವರಿಸದೆ, ತನ್ನ ಮನೆಯೊಳಗಿನ ಶತ್ರುಗಳಾದ (ಅಂದರೆ ಬೌದ್ಧಧರ್ಮದ ಒಳಗಿದ್ದೂ ಬುದ್ಧನ ಚಿಂತನೆಗಳನ್ನು ಸರಿಯಾಗಿ ಅರ್ಥೈಸದೆ ಇರುವ) ಸೌತ್ರಾಂತಿಕರು, ಸರ್ವಾಸ್ತಿವಾದಿಗಳು, ಕ್ಷಣವಾದಿಗಳು ಮುಂತಾದವರ ದರ್ಶನಗಳ ಬಿಕ್ಕಟ್ಟುಗಳನ್ನು ತನ್ನ 'ಕಾರಿಕೆ'ದಲ್ಲಿ ಅನಾವರಣಗೊಳಿಸಿದ. ಈ ಕೃತಿಯ ಇಪ್ಪತ್ತೇಳು ಅಧ್ಯಾಯಗಳು 'ಪರೀಕ್ಷೆ'ಗೆ ಬದ್ಧವಾಗಿವೆ. ಪ್ರತ್ಯಯ, ಗತಾಗತ, ಸ್ಕಂದ ಧಾತು, ರಾಗ-ರಕ್ತ, ಕರ್ಮ, ಸ್ವಭಾವ, ಆತ್ಮ, ಕಾಲ, ಸಾಮಗ್ರಿ, ಆರ್ಯಸತ್ಯ ಇತ್ಯಾದಿಗಳನ್ನು ಪರೀಕ್ಷೆಗೆ ಗುರಿಪಡಿಸುವ ನಾಗಾರ್ಜುನನ ಉದ್ದೇಶ ಇದರಿಂದ ನಿಚ್ಚಳವಾಗುತ್ತದೆ. ಉಪನಿಷತ್ತುಗಳು ಆತ್ಮವನ್ನು ಅವಿನಾಶಿಯೆಂದು, ಮೋಕ್ಷವನ್ನು ಗುರಿಯೆಂದು, ಕರ್ಮವನ್ನು ಅನಿವಾರ್ಯವೆಂದು, ಸಂಸಾರವನ್ನು ಬಂಧನವೆಂದು ಬಿಂಬಿಸಿದವು. ಇಂತಹ 'ಅನರ್ಥಕ'ಗಳನ್ನು ನಾಗಾರ್ಜುನ ಕಾರಿಕೆಯೆಂಬ ಬಡಿಗೆಯಿಂದ ಘಟ್ಟಿಸಿ ಛಿದ್ರಗೊಳಿಸುತ್ತಾನೆ. ಎಲ್ಲಾ ಬಗೆಯ ದೃಷ್ಟಿವಾದಗಳಿಂದ ಬಿಡುಗಡೆ ಹೊಂದಲು ಬುದ್ಧನಿಂದ ವಿವರಿಸಲಾದ 'ಶೂನ್ಯತೆ'ಯೆಂಬ ಚಿಂತನಾ ದಂಡವನ್ನು ಪ್ರಯೋಗಿಸುತ್ತಾನೆ.

''ಈ ಕೃತಿಯು ಯಾವುದೋ ಕಾಲದ ಕೃತಿಯೆನಿಸದೆ ಅತ್ಯಂತ ಸಮಕಾಲೀನವೆನಿಸುತ್ತದೆ.'ಕಾಲ ಪರೀಕ್ಷೆ' ಅಧ್ಯಾಯವನ್ನು ಓದುವಾಗ ಐನ್‌ಸ್ಟೈನ್‌ರ 'ಸಾಪೇಕ್ಷ ಸಿದ್ಧಾಂತ'ಕ್ಕೆ ಎದುರಾದಂತೆನಿಸುತ್ತದೆ. ಸ್ಟೀಫನ್ ಹಾಕಿಂಗ್‌ರ 'ಎ ಬ್ರೀಫ್ ಹಿಸ್ಟರಿ ಆಫ್ ಟೈಮ್' ಕೃತಿ ಕುರಿತು ಓದಿದ ನೆನಪಾಗುತ್ತದೆ. ಹೀಗಾಗಿ 'ಕಾರಿಕೆ'ಯು ಒಂದು ತತ್ವಜ್ಞಾನ ಕೃತಿಯಲ್ಲ; ಸಾಹಿತ್ಯ ಕೃತಿಯೂ ಅಲ್ಲ; ಯಾವುದೇ ವರ್ಗೀಕರಣಕ್ಕೂ ನಿಲುಕದೆ ತಾನು ನಿರ್ವಹಿಸುವ ವಸ್ತುವಿನಂತೆಯೆ ನಿಗದಿತಗಳಿಗೆ ಒಳಪಡದಿರುವುದೇ ಈ ಕೃತಿಯ ವೈಶಿಷ್ಟ್ಯ.''

ಆಂಪೈರ್ ತಪ್ಪು;
ಭಾರತಕ್ಕೆ ಆಪತ್ತು!




ನಮ್ಮವರ ಕಳಪೆ ಆಟಕ್ಕೆ, ಕಳಪೆ
ಹಂಪಾಯರಿಂಗ ಮಾನ ಕಾಪಾಡಿತು...
ಇನ್ನು ಅವರೆಲ್ಲಾ ಎದೆ ಸೆಟೆದುಕೊಂಡು
ಸ್ವದೇಶ ಹಿಂತಿರುಗುವಲ್ಲಿ ಸಂದೇಹವಿಲ್ಲ...

ಎಲ್ಲಾ ಪ್ರಮಾಣಗಳನ್ನು ಅಪ್ರಮಾಣವಾಗಿಸುವ ಬುದ್ಧ, ನಾಗಾರ್ಜುನರ ದಾರಿಯಲ್ಲಿ ಸಾಗಿದ ಬೂದಾಳರು ಒಂದು ಕಡೆ ಹೀಗೆ ಬರೆಯುತ್ತಾರೆ. ನಾಗಾರ್ಜುನ ಅನುಸರಿಸುವ ಪ್ರತಿಯೊಂದನ್ನೂ ಪರೀಕ್ಷಿಸುತ್ತಾ ಹೋಗುವ ಕ್ರಮವನ್ನು ವಿವರಿಸುವಾಗ ''ಆಧುನಿಕ ವಿಜ್ಞಾನವೂ ಒಪ್ಪುವ ಕ್ರಮ'' ಎಂದು ಬರೆಯುತ್ತಾರೆ. ಸಮಕಾಲೀನ ಸಂದರ್ಭದಲ್ಲಿನ ಚಿಂತನೆಗಳ ಮೇಲಿನ ವಿಜ್ಞಾನ ಯಾಜಮಾನ್ಯಕ್ಕೆ ಇದು ಸಣ್ಣ ನಿದರ್ಶನ.

ಮೂಲಮಾಧ್ಯಮಕಕಾರಿಕಾ ಕೃತಿಯನ್ನು ಪ್ರವೇಶಿಸಲು ಕೆಲವು ಸಾಧನಗಳು ಅನಿವಾರ್ಯ. ಇವುಗಳು ಕೃತಿ ರಚನೆಯ ಹಿಂದಿನ ತಾತ್ವಿಕೆಯಲ್ಲೂ ಪಾತ್ರವಹಿಸಿವೆ. ಅವುಗಳೆಂದರೆ (೧) ಕಾರಣ ಮೀಮಾಂಸೆ (೨) ಪರಿಣಾಮ ಮೀಮಾಂಸೆ (೩) ಪ್ರಕ್ರಿಯಾ ಮೀಮಾಂಸೆ (೪) ಪ್ರತೀತ್ಯ ಸಮುತ್ಪಾದ (೫) ಪ್ರಮಾಣ ನಿರಾಕರಣೆ ಮತ್ತು (೬) ಭಿನ್ನಾಭಿನ್ನ ನಿರಾಕರಣೆ.

ಕಾರಣ ಮೀಮಾಂಸೆ ಲೋಕ ವಿವರಣೆಗೆ ಆದಿಕಾರಣವೊಂದನ್ನು ಆಧರಿಸುತ್ತದೆ. ಪರಿಣಾಮ ಮೀಮಾಂಸೆ ಲೋಕಕ್ಕೊಂದು ನಿಶ್ಚಿತ ಅಂತ್ಯವುಂಟು ಎಂಬ ನಿಲುವನ್ನು ತಾಳುತ್ತದೆ. ಇವೆರಡು ಪರಿಕಲ್ಪನೆಗಳು ಜಡ ದೃಷ್ಟಿವಾದಿಗಳು ಅನುಸರಿಸುವಂಥವು. ಇಂತಹ ಕ್ರಮಗಳಿಂದ ಬಿಡುಗಡೆಯನ್ನು ಕಂಡುಕೊಳ್ಳುವ ವಿಧಾನಗಳಾಗಿ ಪ್ರಕ್ರಿಯಾ, ಪ್ರತೀತ್ಯ ಮುಂತಾದ ಮೇಲೆ ವಿವರಿಸಲಾದ ಚಿಂತನಾ ವಿಧಾನಗಳು ಒದಗಿಬಂದಿವೆ. ಪ್ರಕ್ರಿಯಾ ಮೀಮಾಂಸೆಯದು ಲೋಕದಲ್ಲಿನ ಎಲ್ಲವೂ ಚಲನಶೀಲವೆಂಬ ಗ್ರಹಿಕೆ. ಹೀಗಾಗಿ ಇದು ಕಾರಣ ಮತ್ತು ಪರಿಣಾಮಗಳ ವಿವರಣೆಗೆ ಹೋಗುವುದಿಲ್ಲ. ಈ ಮಾರ್ಗವನ್ನು ಅನುಸರಿಸಿದ ಕಾರಣದಿಂದಾಗಿ ಬುದ್ಧನಿಗೆ ಜಗತ್ತಿನ ಆದಿ-ಅಂತ್ಯಗಳ ಬಗೆಗೆ ಮಹಾ ಮೌನ ವಹಿಸಲು ಸಾಧ್ಯವಾಯಿತು. ಪ್ರತೀತ್ಯ ಸಮುತ್ಪಾದವು ಯಾವುದಕ್ಕೂ ಸ್ವತಂತ್ರವೆಂದು ಗುರುತಿಸಬಹುದಾದ ಅಸ್ತಿತ್ವವಿರುವುದಿಲ್ಲ, ಪರಸ್ಪರ ಅವಲಂಬನೆಯಿಂದ ಮಾತ್ರ; ಒಂದು ಸಂಬಂಧ ಭಂಗಗೊಂಡರೆ ಪರಿಣಾಮವೂ ಭಂಗಗೊಳ್ಳುತ್ತದೆ ಎಂದು ವಿವರಿಸುತ್ತದೆ.

ಕವಿಯ ಸೃಜನಶೀಲತೆ, ವಿದ್ವಾಂಸನ ಅಧ್ಯಯನದ ಹಸಿವು ಹಾಗೂ ಜ್ಞಾನಿಯ ಅಂತರ್ವೀಕ್ಷಣೆಯ ತ್ರಿವಳಿ ಗುಣಗಳು ನಟರಾಜ ಬೂದಾಳರಲ್ಲಿ ಸಹಜವಾಗಿ ಸಮ್ಮಿಳಿತಗೊಂಡಿವೆ. ಈ ಕೃತಿಯ ಪ್ರಸ್ತಾವನೆಯಲ್ಲಿ ಅವರು 'ಕಾರಿಕೆ'ಯ ಸೂಕ್ತ ಪ್ರವೇಶಕ್ಕೆ ಬಾಗಿಲುಗಳನ್ನು ತೆರೆದಿರಿಸಿದ್ದಾರೆ. ಆಧುನಿಕ ಚಿಂತನಾ ಪ್ರಸ್ಥಾನಗಳಲ್ಲಿ ಒಂದಾದ ಡಿಸ್‌ಕೋರ್ಸ್ ಪರಿಕಲ್ಪನೆಗೂ 'ಶೂನ್ಯತೆ'ಗೂ ಇರುವ ಗಾಢವಾದ ಸಂಬಂಧಗಳು, ಡೆರಿಡಾ ಮಂಡಿಸಿದ ಅವಕೇಂದ್ರೀಕರಣ ಪರಿಕಲ್ಪನೆ, ರಾಚನಿಕೋತ್ತರ ವಾದಿಗಳ ಕೇಂದ್ರ ಭಂಜಕ ವಿಧಾನ ಇತ್ಯಾದಿಗಳು ಶೂನ್ಯತತ್ವದೊಂದಿಗೆ ಹೊಂದಿರುವ ಜಲಭೂಮಿ ಸಂಬಂಧದ ನೆಲೆಗಳನ್ನು ವಿಸ್ತಾರವಾಗಿ ಪ್ರಸ್ತಾಪಿಸಿದ್ದಾರೆ.

ಕೆ. ವಿ. ನಾರಾಯಣ ಅವರ ಮುನ್ನುಡಿ ಮತ್ತು ಕೆ. ಟಿ. ಶಿವಪ್ರಸಾದ್ ಅವರ ಹಿನ್ನುಡಿಗಳು ಕಾರಿಕೆಯನ್ನು ಹೊಕ್ಕು ಹೊರಬರುವ ಕದಗಳಂತಿವೆ. ಬುದ್ಧ, ಎರಡನೇ ಬುದ್ಧನೆಂದು ಪ್ರಸಿದ್ಧನಾದ ನಾಗಾರ್ಜುನ ಹಾಗೂ 'ಮೂಲಮಾಧ್ಯಮಕಕಾರಿಕಾ'ವನ್ನು ಕನ್ನಡದ ಕಣ್ಣಿನಲ್ಲಿ ಕಂಡು ಪುನರ್ವ್ಯಾಖ್ಯಾನಿಸಿದ ನಟರಾಜ ಬೂದಾಳರಿಗೆ ''ಶರಣಂ ಗಚ್ಛಾಮಿ''. ಈ ಕೃತಿಯ ಬಗೆಗಿನ ಗಂಭೀರವಾದ, ವ್ಯಾಪಕವಾದ ಚರ್ಚೆಯು ಕನ್ನಡ ಚಿಂತನಾ ಪರಂಪರೆಗೆ ಹೊಸ ಸಾಧ್ಯತೆಯನ್ನು ತೋರಿಸಿಕೊಡುತ್ತದೆ ಎನ್ನುವುದರಲ್ಲಿ ಸಂಶಯವಿಲ್ಲ.

**ಡಾ॥ ಬಿ. ಸಿ. ನಾಗೇಂದ್ರ ಕುಮಾರ್**
'ಚಂದ್ರಾಲಯ', ೫೬, ಬಿ.ಟಿ.ಎಸ್. ರಸ್ತೆ, ೧೦ನೇ ಅಡ್ಡರಸ್ತೆ, ವಿಲ್ಸನ್ ಗಾರ್ಡನ್, ಬೆಂಗಳೂರು - ೨೭

# ಸ್ವಾತಂತ್ರ್ಯ ಹೋರಾಟಗಾರ ಕಿಟ್ಟಪ್ಪ ಗೌಡರು

—— ಬಿಳುಮನೆ ರಾಮದಾಸ್ ——

ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದು ಅರವತ್ತು ವರ್ಷಗಳಾಯಿತು. ಪ್ರತಿವರ್ಷವೂ ಆಗಸ್ಟ್ ಹದಿನೈದರಂದು ಸ್ವಾತಂತ್ರ್ಯದ ಅರಿವಿಲ್ಲದ ರಾಜಕಾರಣಿಗಳು ಬಾವುಟ ಹಾರಿಸಿ ಭಾಷಣ ಬಿಗಿಯುತ್ತಾರೆ. ಸ್ವಾತಂತ್ರ್ಯಕ್ಕಾಗಿ ಹೋರಾಡಿದವರ ಬಗ್ಗೆ ನಮ್ಮನ್ನಾಳುವವರಿಗೆ ಸಾರ್ವಜನಿಕರಿಗೆ ಗೌರವವಿಲ್ಲ. ಸರ್ಕಾರಿ ಕಚೇರಿಗೆ ವಿಧಾನಸೌಧಕ್ಕೆ ಏನಾದರೂ ಕೆಲಸಕ್ಕೆ ಹೋದರೆ ಜನಪ್ರತಿನಿಧಿಗಳನ್ನು ಕಾಯಿಸುತ್ತಾರೆ, ಸತಾಯಿಸುತ್ತಾರೆ. ಸ್ವಾತಂತ್ರ್ಯ ಹೋರಾಟಗಾರರು ನಾವು ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದ್ದು ಸ್ವಂತ ಕೆಲಸಕ್ಕಾಗಿ ಅಲ್ಲ, ನಮ್ಮ ಮುಂದಿನ ಜನಾಂಗ ಸ್ವತಂತ್ರವಾಗಿ ಬಾಳಿ ಬದುಕಲಿ ಎಂದು ಸ್ವಾಭಿಮಾನದಿಂದ ಹೇಳುತ್ತಾರೆ. ಅಂತಹ ಜನಗಳು ಇನ್ನೂ ನಮ್ಮ ನಡುವೆ ಬದುಕಿರುವುದು ಹೆಮ್ಮೆಯ ವಿಷಯ. ಅಂತಹವರಲ್ಲಿ ಕಿಟ್ಟಪ್ಪಗೌಡರು ಒಬ್ಬರು.

ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕು ಸ್ವಾತಂತ್ರ್ಯ ಹೋರಾಟಕ್ಕೆ ತನ್ನದೇ ಆದಂತಹ ಕೊಡುಗೆಯನ್ನು ಕೊಟ್ಟಿದೆ. ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದವರಲ್ಲಿ ಕಡಿದಾಳ್ ಮಂಜಪ್ಪ, ಶಾಂತವೇರಿ ಗೋಪಾಲ ಗೌಡ, ಅಪ್ಪಯ್ಯ ಹೆಗಡೆ, ಎನ್. ಎ. ಕಿಟ್ಟಪ್ಪ ಗೌಡ, ಎಂ. ಡಿ. ಶೇಷಪ್ಪ ಹೆಗ್ಗಡೆ ಮುಖ್ಯರು. ಮೊದಲ ಮೂವರು ಕೀರ್ತಿಶೇಷರಾಗಿದ್ದಾರೆ. ಕೊನೆಯವರಿಬ್ಬರು ಬದುಕಿನ ಮುಸ್ಸಂಜೆಯಲ್ಲಿದ್ದಾರೆ.

ಕಿಟ್ಟಪ್ಪ ಗೌಡರು ಸ್ವಾತಂತ್ರ್ಯಕ್ಕಾಗಿ ಹೋರುಡಿದ ನಾಲ್ಕು ಜನರಲ್ಲಿ ಕ್ರಾಂತಿಕಾರಿಯಾಗಿದ್ದರು. ಬ್ರಿಟಿಷ್ ಸರ್ಕಾರಕ್ಕೆ ಅವರು ಸಿಂಹಸ್ವಪ್ನವಾಗಿದ್ದರು. ೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯಲ್ಲಿ ಮೈಸೂರು ರಾಜ್ಯದಲ್ಲಿ ತೀರ್ಥಹಳ್ಳಿ ತಾಲೂಕು ಈಸೂರಿನಂತೆ ರಾಜ್ಯದ ಗಮನ ಸೆಳೆದಿತ್ತು. ಇದಕ್ಕೆ ಕಾರಣ ಕಿಟ್ಟಪ್ಪ ಗೌಡರು ಹಾಗೂ ಶಾಂತವೇರಿ ಗೋಪಾಲ ಗೌಡರು. ಗೋಪಾಲ ಗೌಡರ ಕಾರ್ಯಕ್ಷೇತ್ರ ತೀರ್ಥಹಳ್ಳಿಯಾದರೆ ಕಿಟ್ಟಪ್ಪಗೌಡರ ಕಾರ್ಯಕ್ಷೇತ್ರ ಆಗುಂಬೆ ಹೋಬಳಿಯಾಗಿತ್ತು. ಉಳಿದವರು ಭಾಷಣ ಬಿಗಿದು ಜನಗಳನ್ನು ಹುರಿದುಂಬಿಸುವುದರಲ್ಲಿ ನಿರತರಾಗಿ ಬಂಧನಕ್ಕೊಳಗಾದರೆ ಕಿಟ್ಟಪ್ಪ ಗೌಡರದ್ದು ಭೂಗತ ಚಟುವಟಿಕೆಯಾಗಿತ್ತು. ಟೆಲಿಫೋನು ತಂತಿ ಕಡಿದುಹಾಕುವುದು, ಟಪ್ಪಾಲು ಪೆಟ್ಟಿಗೆ ನಾಶಪಡಿಸುವುದು, ಹೆಂಡದಂಗಡಿಯ ಮುಂದೆ ಪಿಕೆಟಿಂಗ್ ಮಾಡುವುದು, ಗಂಧದ ಮರ, ಬಗುನೆ ಮರ ಕಡಿಯುವುದು, ಶಾಲೆಯ ವಿದ್ಯಾರ್ಥಿಗಳಿಂದ 'ಬ್ರಿಟಿಷರೆ ಭಾರತ ಬಿಟ್ಟು ತೊಲಗಿ' ಎಂದು ಘೋಷಣೆ ಮಾಡಿಸಿ ಪ್ರಭಾತ್‌ಫೇರಿ ಮಾಡಿಸುವುದು ಮಾಡಿದರು. ತನ್ನನ್ನು ದಸ್ತಗಿರಿ ಮಾಡಲು ಬರುವ ಪೊಲೀಸರ ವ್ಯಾನು ಸಂಚರಿಸಲು ಅಡ್ಡಿ ಆಗುವಂತೆ ರಸ್ತೆಗೆ ಮರ ಕಡಿದು ಉರುಳಿಸುವಂತಹ ಕಾಯಕ ಮಾಡುತ್ತಿದ್ದರು. ಇದರಿಂದಾಗಿ ಶಿವಮೊಗ್ಗೆಯ ಡಿ. ಸಿ. ನವನೀತಂ ನಾಯ್ಡು ಅವರ ಕೆಂಗಣ್ಣಿಗೆ ಇಬ್ಬರೂ ಗುರಿಯಾದರು. ತರುಣರಿಬ್ಬರನ್ನು ದಸ್ತಗಿರಿ ಮಾಡಲು ಡಿ. ಸಿ. ಸಾಹೇಬರ ಹುಕುಂ ಆಯಿತು. ಮೇಗರವಳ್ಳಿಯಲ್ಲಿ ಕಿಟ್ಟಪ್ಪನವರನ್ನು ಬಂಧಿಸಲು ಪೊಲೀಸರ ದಂಡು ಬಂದಿತು. ಗೋಪಾಲ ಗೌಡರು ಹಗಲು ಹೊತ್ತಿನಲ್ಲಿ ಸಂಚಾರ ಮಾಡುವುದರಿಂದ ಅವರು ಅವರ ಸಂಗಡಿಗರೊಂದಿಗೆ ದಸ್ತಗಿರಿಯಾದರು. ನ್ಯಾಯಾಲಯದಲ್ಲಿ ಅವರಿಗೆ ಶಿಕ್ಷೆಯಾಯಿತು. ಕಿಟ್ಟಪ್ಪ ಗೌಡರು ಹಗಲು ಹೊತ್ತು ರೈತರ ಮನೆಗಳಲ್ಲಿ ಕೆಲಸ ಮಾಡುವ ಕೂಲಿಕಾರರಂತೆ ಕಂಬಳಿ ಕೊಪ್ಪೆ ಸೂಡಿಕೊಂಡು ಮೇಲೆ ಸೊಪ್ಪಿನ ಹಗ್ಗವನ್ನು ಸಿಂಬೆ ಮಾಡಿ ತೊಟ್ಟು ಪೊಲೀಸರ ಮಧ್ಯೆ ಸುತ್ತಾಡಿಕೊಂಡು ಪೊಲೀಸರಿಗೆ ಚಳ್ಳೆಹಣ್ಣು ತಿನ್ನಿಸಿ ಓಡಿಯಾಡಿದರು. ಹೆಂಡದ ಗುತ್ತಿಗೆದಾರರು ಸ್ವಾತಂತ್ರ್ಯ ಹೋರಾಟಗಾರರನ್ನು ಹಿಡಿಸಿ ಕೊಡಲು ಪೊಲೀಸರಿಗೆ ಸುಳಿವು ಕೊಡುತ್ತಿದ್ದರು. ಕಿಟ್ಟಪ್ಪ ಗೌಡರು ಪೊಲೀಸರಿಗೆ ಸಿಗದೆ ಆಟವಾಡಿಸುತ್ತಿದ್ದರು. ಪೊಲೀಸರು ಮೇಗರವಳ್ಳಿಗೆ ಬಾರದಂತೆ ಕಿಟ್ಟಪ್ಪ ಗೌಡರು ರಾತ್ರಿ ಹೊತ್ತಿನಲ್ಲಿ ಸಂಗಡಿಗರೊಂದಿಗೆ ಸೇರಿಕೊಂಡು ತೀರ್ಥಹಳ್ಳಿಗೂ ಮೇಗರವಳ್ಳಿಗೂ ಮಧ್ಯೆ ಇರುವ ಅಣುವಳ್ಳಿ ಸೇತುವೆ ಕೆಡವಲು ಪ್ರಯತ್ನಿಸಿದರು. ಆ ಹೊತ್ತಿಗೆ ಪೊಲೀಸ್ ವ್ಯಾನ್ ಬಂದಿತು. ಕಿಟ್ಟಪ್ಪ ಗೌಡರು ಕಾಡುಬಿದ್ದು ಕಣ್ಮರೆಯಾದರು. ಈಸೂರಿನಲ್ಲಿ ಪೊಲೀಸಿನವರನ್ನು ಗುಂಡಿಕ್ಕಿ ಕೊಂದದ್ದು ರಾಜ್ಯದ ಗಮನ ಸೆಳೆದಿತ್ತು. ಕಿಟ್ಟಪ್ಪ ಗೌಡರಿಗೆ ಇದು ಸ್ಫೂರ್ತಿಯಾಯಿತು. ರಾತ್ರಿ ರಸ್ತೆಗೆ ಮರ ಕಡಿದು ಹಾಕಿ ಪೊಲೀಸ್ ವ್ಯಾನ್ ಬಂದಾಗ ಗೌಡರು ಪೊಲೀಸಿನವರನ್ನು ಕೊಂದುಹಾಕಲು ಸಂಚು ನಡೆಸಿದರು. ಸುದ್ದಿ ಡಿ.ಸಿ. ಸಾಹೇಬರಿಗೆ ವರದಿಯಾಗಿ ಅವರು ಮೇಗರವಳ್ಳಿಗೆ ಬಂದು ಮೊಕ್ಕಾಂ ಹೂಡಿದರು. ಊರಿನ ಹಿರಿಯರಿಗೆ ಅವರು ಹುಡುಗನಿಗೆ ಬುದ್ಧಿ ಹೇಳಿ ; ಚಳುವಳಿ ಕೈ ಬಿಡದಿದ್ದರೆ ಅವನಿಗೆ ಗುಂಡಿಕ್ಕಲು ಆಜ್ಞೆ ಮಾಡಿದ್ದೇನೆ ಎಂದು ಬೆದರಿಕೆ ಹಾಕಿದರು. ಊರಿನಲ್ಲಿ ಭಯದ ವಾತಾವರಣ ನಿರ್ಮಾಣವಾಯಿತು. ಹುಡುಗ ಕಿಟ್ಟಪ್ಪನನ್ನು ಊರಿನ ಹಿರಿಯರು ತೀರ್ಥಹಳ್ಳಿಗೆ ರಾತ್ರೋರಾತ್ರಿ ಸಾಗುಹಾಕಿದರು. ಆತನ ಸುಳಿವು ಸಿಕ್ಕು ಬೆಳಗಿನ ಜಾವ ಪೊಲೀಸ್ ಇನ್‌ಸ್ಪೆಕ್ಟರ್ ಮಾಯಣ್ಣ ದಸ್ತಗಿರಿ ಮಾಡಿದರು. ಪೊಲೀಸ್ ಬೂಟಿನ ಆತಿಥ್ಯ ನೀಡಲಾಯಿತು. ಡಿ. ಸಿ. ಸಾಹೇಬರಿಂದ ಬೈಸಿಕೊಂಡ ಕಿಟ್ಟಪ್ಪನವರನ್ನು ಜೈಲಿಗೆ ಹಾಕಿದರು. ಅಲ್ಲಿಗೆ ನಾಲ್ಕು ತಿಂಗಳ ಅವರ ಭೂಗತ ಹೋರಾಟಕ್ಕೆ ಕೊನೆಯಾಯಿತು. ಜೈಲಿನಿಂದ ಬಂದ ಮೇಲೆ ತಮ್ಮ ಸೇಂದಿ ವ್ಯಾಪಾರಕ್ಕೆ ಕಲ್ಲುಹಾಕಲು ಯತ್ನಿಸಿದ ಕಿಟ್ಟಪ್ಪನವರಿಗೆ ಸೇಂದಿ ಗುತ್ತಿಗೆದಾರರು ಥಳಿಸಿ ತಮ್ಮ ಜಿದ್ದು ತೀರಿಸಿಕೊಂಡರು. ಇದರಿಂದ ಕಿಟ್ಟಪ್ಪನ ಸ್ವಾಭಿಮಾನ ಕೆರಳಿತೇ ವಿನಾ ನೈತಿಕ ಸ್ಥೈರ್ಯ ಕುಂದಲಿಲ್ಲ. ಕಿಟ್ಟಪ್ಪ ಸಾವನ್ನು ಗೆದ್ದು ಬಂದಿದ್ದರು.

೧೯೪೭ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದಿತು. ಮೈಸೂರಿನಲ್ಲಿ ಮಹಾರಾಜರ ಆಳ್ವಿಕೆ ತಪ್ಪಿರಲಿಲ್ಲ. ಜವಾಬ್ದಾರಿ ಸರ್ಕಾರಕ್ಕಾಗಿ ಚಳುವಳಿ ಪ್ರಾರಂಭವಾಯಿತು. ಕಿಟ್ಟಪ್ಪ ಗೌಡರಾಗ ಹೆಬ್ಬಾಳದ ವ್ಯವಸಾಯ ಕಾಲೇಜಿಗೆ ಸೇರಿಕೊಂಡಿದ್ದರು. ಚಳುವಳಿಯಲ್ಲಿ ಭಾಗವಹಿಸಲು ಗೋಪಾಲ ಗೌಡರಿಂದ ಕಿಟ್ಟಪ್ಪನವರಿಗೆ ಕಾಗದ ಹೋಯಿತು. ಓದಿಗೆ



ತಿಲಾಂಜಲಿ ಕೊಟ್ಟು ಕಿಟ್ಟಪ್ಪನವರು ಗೋಪಾಲ ಗೌಡರನ್ನು ಸೇರಿಕೊಂಡರು. ಮತ್ತೆ ಸೇಂದಿ ಅಂಗಡಿಗೆ ಬಂದ್‌ಗೆ ಕರೆಕೊಡುವುದು, ಕುಡಿತದ ವಿರುದ್ಧ ಜನಜಾಗೃತಿ ಮೂಡಿಸಲು ಸಭೆ ಸಮಾರಂಭಗಳನ್ನು ಏರ್ಪಡಿಸುವುದು, ಶಾಲೆಗಳ ಬಂದ್‌ಗೆ ಕರೆಕೊಡುವುದು ನಡೆಯಿತು. ಕಿಟ್ಟಪ್ಪನವರನ್ನು ಬಂಧಿಸಲು ಇನ್‌ಸ್ಪೆಕ್ಟರ್ ಲಕ್ಷ್ಮಣ್ ಶತಾಯಗತಾಯ ಪ್ರಯತ್ನಪಟ್ಟರು. ಕಿಟ್ಟಪ್ಪನವರು ಎರಡು ತಿಂಗಳು ಭೂಗತರಾಗಿ ಕೊನೆಗೆ ಸೆರೆಸಿಕ್ಕರು. ಬಿಡುಗಡೆಯಾದ ಮೇಲೆ ಗೋಪಾಲ ಗೌಡರೊಂದಿಗೆ ಸೇರಿ ಶಿವಮೊಗ್ಗೆಯ ಆಂಜನೇಯ ದೇವಸ್ಥಾನಕ್ಕೆ ಹರಿಜನ ಪ್ರವೇಶಕ್ಕೆ ತಯಾರು ಮಾಡಿದರು. ದೇವಸ್ಥಾನದ ಎದುರು ಸಾವಿರಾರು ಜನ ಜಮಾಯಿಸಿದರು. ಜಿಲ್ಲಾಧಿಕಾರಿ ಮುನಿರಾಜಪ್ಪನವರೆದುರು ಇಬ್ಬರು ನಾಯಕರನ್ನೂ ಹರಿಜನರ ಸಹಿತ ಹಾಜರುಪಡಿಸಲಾಯಿತು. ಹೆದರಿಕೊಂಡ ಹರಿಜನರು ಓಡಿಹೋದರು. ಇಬ್ಬರಿಗೂ ಜಿಲ್ಲಾಧಿಕಾರಿಯವರು ಬುದ್ಧಿಹೇಳಿ ಕಳುಹಿಸಿದರು. ಒತವಚನ ಕೇಳುವ ಸ್ಥಿತಿಯಲ್ಲಿರಲಿಲ್ಲ ಹುಡುಗರಿಬ್ಬರು.

ಅಲ್ಲಿಗೇ ಕಿಟ್ಟಪ್ಪನವರ ಹೋರಾಟ ನಿಲ್ಲಲಿಲ್ಲ. ಮೇಗರವಳ್ಳಿಯಲ್ಲಿ ಶರಾಬು ಅಂಗಡಿಗೆ ಯಾರೂ ಪ್ರವೇಶಿಸದಂತೆ ಅಂಗಡಿ ಎದುರು ಪಿಕೆಟಿಂಗ್ ನಡೆಸಿದರು. ಅವರಿವರ ಚಿತಾವಣೆಯ ಮೇರೆಗೆ ಒಬ್ಬ ಕಾಂಗ್ರೆಸ್ ಧ್ವಜ ಕಿತ್ತು ಹರಿದು ಶರಾಬು ಅಂಗಡಿಗೆ ಹೋಗಿ ಕುಡಿದು ಬಂದ. ಆತನಿಗೆ ಉರಿಚಟ್ಲಿ ಸೊಪ್ಪಿನ ಹಾರ ಹಾಕಿ ಊರಿನಲ್ಲಿ ಮೆರವಣಿಗೆ

ಮಾಡಿದರು. ಉರಿಚಟ್ಲೆ ಸೊಪ್ಪು ಆತನ ಕತ್ತನ್ನು ಕೆಂಪು ಮಾಡಿ ಉರಿ ಹತ್ತಿಸಿ ಆತ ಪರದಾಡುವಂತೆ ಮಾಡಿತು. ಗುತ್ತಿಗೆದಾರರು ಆತನನ್ನು ಜಿಲ್ಲಾಧಿಕಾರಿಯ ಎದುರು ಹಾಜರುಪಡಿಸಿ ಇದರ ಹಿಂದೆ ಕಿಟ್ಟಪ್ಪನ ಕೈವಾಡ ಇದೆಯೆಂದು ದೂರಿದರು. ಕಿಟ್ಟಪ್ಪನನ್ನು ಹಿಡಿದು ತರಲು ಇನ್‌ಸ್ಪೆಕ್ಟರ್ ಲಕ್ಷ್ಮಣ್‌ಗೆ ಡಿ. ಸಿ.ಯವರು ಆಜ್ಞೆ ಮಾಡಿದರು. ಕಿಟ್ಟಪ್ಪನವರು ತಪ್ಪಿಸಿಕೊಂಡು ಕುಂದಾಪುರದ ನರಿಬ್ಯಾಣದಲ್ಲಿ ಜವಾಬ್ದಾರಿ ಸರ್ಕಾರದ ಹಕ್ಕಿಗಾಗಿ ನಡೆವ ಸಭೆಗೆ ಹೋದರು. ಇದು ಕಿಟ್ಟಪ್ಪ ಗೌಡರು ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಸಂಕ್ಷಿಪ್ತ ಕತೆ. ೧೯೪೦ರಲ್ಲಿ ವರಾಹಿ ಮುಳುಗಡೆ ಸಂದರ್ಭದಲ್ಲಿ ರೈತರನ್ನು ಒಕ್ಕಲು ಎಬ್ಬಿಸುವ ಸಂದರ್ಭ ಬಂದಿತು. ಕಿಟ್ಟಪ್ಪನವರು ಮೊಟ್ಟಮೊದಲು ತೀರ್ಥಹಳ್ಳಿಯಲ್ಲಿ ರೈತರ ಸಮ್ಮೇಳನವನ್ನು ನಡೆಸಿ ಕಡಿದಾಳ್ ಮಂಜಪ್ಪನವರ ಅಧ್ಯಕ್ಷತೆಯಲ್ಲಿ ಹನ್ನೆರಡು ನಿರ್ಣಯಗಳನ್ನು ತಯಾರಿಸಿ ಸರ್ಕಾರಕ್ಕೆ ಕೊಟ್ಟರು.

ಕಿಟ್ಟಪ್ಪ ಗೌಡರು ಸ್ವಾತಂತ್ರ್ಯಾನಂತರ ವಿದ್ಯಾಭ್ಯಾಸ ಮುಂದುವರೆಸಿ ಹೈಸ್ಕೂಲ್ ಅಧ್ಯಾಪಕರಾಗಿ ಹೆಡ್ಮಾಸ್ಟರಾಗಿ ನಿವೃತ್ತಿಯಾಗಿ ತೀರ್ಥಹಳ್ಳಿಯಲ್ಲಿ ವಿಶ್ರಾಂತ ಜೀವನ ನಡೆಸುತ್ತಿದ್ದಾರೆ. ಅವರೊಬ್ಬ ಆದರ್ಶ ಶಿಕ್ಷಕರಾಗಿ ರಾಜ್ಯ ಪ್ರಶಸ್ತಿ ಪುರಸ್ಕೃತರಾಗಿದ್ದಾರೆ. ಬಹಳ ಜನ ಬಡ ವಿದ್ಯಾರ್ಥಿಗಳ ಓದಿಗೆ ನೆರವಾಗಿದ್ದಾರೆ. ಬಹಳ ಜನ ಹುಡುಗರಿಗೆ ಜೀವನ ಮಾಡಲು ಉದ್ಯೋಗ ಕೊಡಿಸಿದ್ದಾರೆ.

ಬಿಳುಮನೆ ರಾಮದಾಸ್
ನಂ. ೧೪೦೧, ೩೭ನೇ 'ಬಿ' ಅಡ್ಡರಸ್ತೆ, ೪ನೇ 'ಟಿ' ಬ್ಲಾಕ್,
ಜಯನಗರ, ೧೧ನೇ ಮುಖ್ಯರಸ್ತೆ, ಬೆಂಗಳೂರು - ೫೬೦ ೦೪೧

# ವಲಸೆ ಹಕ್ಕಿ



ಕೇವಲ್‌ದೇವ್ ಘಾನಾ
ಜೈಪುರದ ಭಗಭಗ ಉರಿವ
ಬೆಂಕಿ ಹಾದಿ ಬೆಂದು ಬಂದಾಗ
ಸಿಗುವ ಭರತಪುರದ
ಒಂದು ಪಕ್ಷಿಧಾಮ.

ಏಪ್ರಿಲ್ ತಿಂಗಳ ಬಿಸಿಲ ಬೆಂಗಾಡಿನ ನಡುವೆ
ಒಂದಿಷ್ಟು ಹಸಿರಿನ ಕುರುಚಲು ಚಿಗುರು
ಪಂಪಿನಿಂದ ಚಿಮ್ಮಿದ ಬೊಗಸೆ ನೀರು
ಅಲ್ಲೊಂದು ಇಲ್ಲೊಂದು ಹಕ್ಕಿ
ಇಷ್ಟೇನಾ ? ಮನ ಕಕ್ಕಾಬಿಕ್ಕಿ.

ಇಷ್ಟೇ ಅಲ್ಲ...
ನಾನೂ, ಮಗ ಕುಳಿತ ಸೈಕಲ್ ರಿಕ್ಷಾ
ತುಳಿವ ಆ ಮಾತಿನ ಮಹಾಮಾಂತ್ರಿಕ
ಮೈ ತುಂಬಾ ಮುಚ್ಚಿದ್ದ ಕಪ್ಪುಕೋಟ
ಥಗೆ ಎಂದು ತೆಗೆದಿಟ್ಟು ಸೈಕಲನ್ನಷ್ಟೇ
ಅಲ್ಲ, ನನ್ನನ್ನೂ ತುಳಿಯಲಾರಂಭಿಸಿದ್ದ.
ಹಿಂದಿ, ಇಂಗ್ಲಿಷ್ ನಿರರ್ಗಳ
ಕತ್ತಿ ಹೊಳಪಿನ ಕಣ್ಣುಗಳ ಗಾಳ
ಗಿಳಿಮೂಗು ವ್ಯಕ್ತಿ.

ಒಮ್ಮೆ ಭಿಂಡ್ರನ್‌ವಾಲೆಯಂತೆ
ಮತ್ತೊಮ್ಮೆ ಬಿನ್ ಲಾಡೆನ್‌ನಂತೆ
'ಛೆ' 'ಛೇ' ಎಂದು ತಲೆ ವದರಿದರೆ
ಒಮ್ಮೆ ಏಸುವಿನಂತೆ
ಮತ್ತೊಮ್ಮೆ ಗುರುನಾನಕರಂತೆ
ತತ್ತ್ವಜ್ಞಾನಿಯಂತೆ ದಾರ್ಶನಿಕನಂತೆ
ಮನ ಮತ್ತೆ ಮತ್ತೆ ಕಕ್ಕಾಬಿಕ್ಕಿ.

ಅದೋ ಅಲ್ಲಿ ನೀಲಕಂಠ
(ಜೊತೆಗೆ ವಗ್ಗರಣೆ 'ಮಹಾದೇವ್')
ಇಲ್ಲಿ ನೀರಲ್ಲಿ ಎರಡೆರಡು ಸಾರಸ
ಕಂಡಿದ್ದು ನಿಮ್ಮ ಅದೃಷ್ಟ

ಅದೋ ಅಲ್ಲಿ ಅದು ಇದೋ
ಇಲ್ಲಿ ಇದು. ಸೈಕಲ್ ನಿಲ್ಲಿಸಿ
ಶತಾಯ ಗತಾಯ ಕಣ್ಣಿಗೆ ಕಾಣಿಸಿಯೇ
ಕಾಣಿಸಿ ಹಕ್ಕಿಗಳ ವಲಸೆ, ಪ್ರಣಯ,
ಪ್ರೇಮ, ಪ್ರೀತಿಗಳ ದುರ್ಬೀನಿಟ್ಟು
ಕಣ್ಣಾರೆ ಕಂಡಂತೆ ಕಣ್ಣಿಗೆ ಕಟ್ಟುವಂತೆ
ವಿವರಣೆಯ ನೀಡುತ್ತಾ ನೀಡುತ್ತಾ
ರಿಕ್ಷಾಚಾಲಕನೀಗ ಮಾರ್ಗದರ್ಶಕ !

ಹಾದಿ ಸವೆದಂತೆ ಪಕ್ಷಿಗಳ ಬಗೆಗಲ್ಲ
ಅವನ ಬಗೆಗೇ ಆಸಕ್ತಿ , ಆಕರ್ಷಣೆ.

ಹೆಸರು ಸಂತಾಲ ಸಿಂಗ
ಇಂಡಿಯಾ - ಪಾಕಿಸ್ತಾನ ವಿಭಜನೆ ಸಂದರ್ಭ
ಪಾಕಿಸ್ತಾನದಿಂದ ಬಂದದ್ದು ವಲಸೆ
(ಹಕ್ಕಿಗಳಂತೆ ಹಿಂತಿರುಗಿಲ್ಲದಷ್ಟೇ ವ್ಯತ್ಯಾಸ)
ಹಳ್ಳಿಯಲ್ಲಿ ನಾಲ್ಕು ಮಕ್ಕಳ ಸಂಸಾರ
ಬೆನ್ನುಮೂಳೆಗಳ ನಡುವೆ ಕಾಲುವೆ
ಮೂಡಿಸಿದ್ದ ದುಡಿತ. ಇದ್ದರುಂಟು ಇಲ್ಲದಿರೆ ಇಲ್ಲ

ಆದರೂ ರಾಜಾಸ್ತಾನದ ಬೇಸಿಗೆಗೂ
ಸೆಡ್ಡು ಹೊಡೆದ ಜೀವನ ಸೆಲೆ
ಪ್ರೀತಿ ಹಂಚುವ ಮಾತು, ನೋಟ ತಂಪು ತಂಪು.

ಮೌನವಾಗಿ ಅವನನ್ನು ದಿಟ್ಟಿಸಿದ್ದೆ
ಮತ್ತದೆ ಹೊಳೆವ ಕಣ್ಣು ಚೂಪು ಮೂಗು
ಕಪ್ಪು ಬಿಳಿಯ ಗಡ್ಡ, ತಲೆ ಮೇಲಿಂದ
ಎದೆಗಿಳಿದಿದ್ದ ಬಿಳಿ ಪಗಡಿ ಪಟಪಟ ಮಾತು

ಸಂತಾಲನೇ ನನ್ನ ಕಣ್ಣುಗಳಿಗೀಗ
ದೂರದಿಂದ ಬಂದ - ಬಂದ ಊರಿಗೆ
ಹಿಂತಿರುಗದ - ಒಂದು ವಲಸೆ ಹಕ್ಕಿ !
ತನ್ನೂರಿಗೆ ಹಿಂತಿರುಗಲಾರದ ವಲಸೆ ಹಕ್ಕಿಯ
ಎದೆಯ ಗೂಡೊಳಗೆ ಏನುಂಟು ? ಏನಿಲ್ಲ ?
ಮನ ಮತ್ತೆಯೂ ಕಕ್ಕಾಬಿಕ್ಕಿ.

ಎಂ. ಎಸ್. ವೇದಾ
'ಅಲಿಂಪು', ನಂ. ೧೨೫೭, ಪಡುವಣ ರಸ್ತೆ, ೪ನೇ ಅಡ್ಡರಸ್ತೆ
ಟಿ. ಕೆ. ಲೇಔಟ್, ಕುವೆಂಪುನಗರ, ಮೈಸೂರು - ೫೭೦ ೦೨೩

ತಿಳಿವು

ಕೆ. ಎಸ್. ರವಿಕುಮಾರ್

# ನಮ್ಮ ಮಗುವಿನಲ್ಲೊಬ್ಬ ಐನ್‌ಸ್ಟೈನ್

ನಾವು ಮಕ್ಕಳೊಂದಿಗೆ ಬೆರೆಯುವಾಗ 'ನಾವೆಲ್ಲ ತಿಳಿದಿದ್ದೇವೆ' ಎಂಬ ಅಹಂನೊಂದಿಗೆ ಬೆರೆಯುತ್ತೇವೆ. ಆದರೆ ಐನ್‌ಸ್ಟೈನ್ ಬಹಳ ಭಿನ್ನ. ಒಂದು ಮಗುವನ್ನು ನಿಷ್ಪ್ರಯೋಜಕ ಎಂಬ ಭಾವನೆಯೊಂದಿಗೆ ಅವರು ಮಾತನಾಡಿಸುತ್ತಿರಲಿಲ್ಲ. ಪ್ರತಿ ಮಗುವೂ ಓರ್ವ ವ್ಯಕ್ತಿ ಎಂದವರು ಭಾವಿಸುತ್ತಿದ್ದರು. ಹಿಟ್ಲರ್ ಎಂಬ ಕ್ರೂರ ಸರ್ವಾಧಿಕಾರಿಯನ್ನು, ಅಮೆರಿಕಾದ ಅಣುಬಾಂಬ್ ಪ್ರಯೋಗಗಳನ್ನು, ತೀವ್ರವಾಗಿ ಖಂಡಿಸಲು ಸ್ವಲ್ಪವೂ ಹೆದರದಿದ್ದ ಐನ್‌ಸ್ಟೈನ್ ಮಕ್ಕಳೊಂದಿಗೆ ಮಗುವಾಗಿಬಿಡುತ್ತಿದ್ದರು. ಮಗುತನ ದೊಡ್ಡತನದ ಒಂದು ಮುಖವಾಗಿರಲೂಬಹುದು.

ಹಸುಳೆ ಐನ್‌ಸ್ಟೈನ್‌ಗೆ ಅಸಹಜವೆನಿಸುವಂತೆ ತಲೆ ದಪ್ಪನಾಗಿತ್ತು. ಪ್ರಾಯಶಃ ತನಗೆ ಬುದ್ಧಿಮಾಂದ್ಯ ಮಗು ಜನಿಸಿದೆ ಎಂದೇ ತಾಯಿ ಪೌಲೀನ್ ಆತಂಕಗೊಂಡಿದ್ದರು. ಈ ಆತಂಕಕ್ಕೆ ಪುಷ್ಟಿಕೊಡುವಂತೆ ಮೂರು ವರ್ಷದವರೆಗೆ ಐನ್‌ಸ್ಟೈನ್ ಮಾತು ಕಲಿಯಲಿಲ್ಲ. ಅವರ ನಂತರ ಹುಟ್ಟಿದ ತಂಗಿ ಮಾಜ್ಹಾ ಎರಡು ವರ್ಷಕ್ಕೇ ಗೊಂಬೆಗಳೊಂದಿಗೆ ಆಟವಾಡಿಕೊಂಡಿದ್ದರೂ ಅಣ್ಣ ಐನ್‌ಸ್ಟೈನ್ ಮಾತ್ರ ಶಿಶು ಸಹಜ ಚುರುಕುತನ ಪ್ರದರ್ಶಿಸಲೇ ಇಲ್ಲ. ಅಂತೂ ಮಾತಾಡಲು ಆರಂಭಿಸಿದಾಗ ಐನ್‌ಸ್ಟೈನ್ ಒಂದೊಂದು ಪದವನ್ನೂ ಎರಡೆರಡು ಬಾರಿ ಉಚ್ಚರಿಸುತ್ತಿದ್ದರು. ಶಾಲೆಗೆ ಸೇರಿದ ಐನ್‌ಸ್ಟೈನ್ ಇತರ ವಿದ್ಯಾರ್ಥಿಗಳೊಂದಿಗೆ ಬೆರೆಯುವುದು ಹೇಗೆ ಎಂಬ ಗೊಂದಲಕ್ಕೆ ಒಳಗಾದರು. ತನ್ನಷ್ಟಕ್ಕೆ ತಾನು ಆಟೋಟಗಳಿಂದ ದೂರವಿರುತ್ತಿದ್ದ ಅವರನ್ನು ಸಹಪಾಠಿಗಳು 'ಬರೀ ಬೋರ್' ಎಂದು ನಿರ್ಲಕ್ಷಿಸಿದ್ದರು, 'ಬೋರಿಂಗ್ ಸೋದರ' ಎಂಬ ಹೆಸರಿಟ್ಟು ಆಗಾಗ ಅವರನ್ನು ಕೀಟಲೆ ಮಾಡುತ್ತಿದ್ದರು. ವಯಸ್ಸು ಒಂಬತ್ತಾದರೂ ತಡೆತಡೆದು ಮಾತನಾಡುವ ಐನ್‌ಸ್ಟೈನ್‌ಗೆ ಕಲಿಕೆಯ ದೌರ್ಬಲ್ಯ (ಇದನ್ನು ಆಸ್ಪೆರ್ಗರ್ಸ್ ಸಿಂಡ್ರೋಮ್ ಎನ್ನುತ್ತಾರೆ)ವಿರಬಹುದೆಂದೂ ತಂದೆ ತಾಯಿಗಳು ಭಾವಿಸಿದ್ದರು. ಒಟ್ಟಾರೆ ಐನ್‌ಸ್ಟೈನ್‌ರವರ ಭವಿಷ್ಯದ ಯೋಚನೆ ಬಂದಾಗಲೆಲ್ಲ ಅವರ ಪೋಷಕರು ಅವ್ಯಕ್ತ ಚಿಂತೆಗೀಡಾಗುತ್ತಿದ್ದರು.

ಮ್ಯೂನಿಕ್‌ನ ಶಾಲೆಯಲ್ಲಿ ಐನ್‌ಸ್ಟೈನ್‌ರವರನ್ನು ಕಲಿಯಲು ಬಿಟ್ಟು ಅವರ ಕುಟುಂಬ ಇಟಲಿಯ ಮಿಲಾನಿಗೆ ಹೊರಡುವ ಮುಂಚೆ ಮಗನ ಪ್ರಗತಿ ಹೇಗಿರಬಹುದೆಂದು ತಿಳಿಯುವ ಕುತೂಹಲದಿಂದ ತಂದೆ ಹರ್ಮನ್ ಕರುಳುಕುಡಿಯ ಮಮಕಾರದಿಂದ ''ನನ್ನ ಮಗನನ್ನು ಇಂಜಿನಿಯರ್ ಮಾಡುವ ಆಸೆ ಇದೆ. ನಿಮ್ಮ ಸಲಹೆ ಏನು ?'' ಎಂದು ಅಧ್ಯಾಪಕರನ್ನು ಕೇಳಿದರಂತೆ. ಅದಕ್ಕವರು, ''ಓಹೋ, ಇವ ನಿಮ್ಮ ಮಗನೋ, ಏನು ಬೇಕಾದರೂ ಓದಿಸಿ. ಆದರೆ ಅವನು ಯಾವುದಕ್ಕೂ ನಾಲಾಯಕ್'' ಎಂದು ತೀಕ್ಷ್ಣವಾಗಿ ಪ್ರತಿಕ್ರಿಯಿಸಿದ್ದರಂತೆ. ಆದರೆ ಯಾರೂ ಸರಿಯಾಗಿ ಗುರ್ತಿಸದೆ ಇದ್ದ ಐನ್‌ಸ್ಟೈನ್‌ರವರ ಒಂದು ವರ್ತನೆಯೆಂದರೆ ಅವರಿಗೆ ಚಿಕ್ಕ ವಯಸ್ಸಿನಲ್ಲೇ ಆಲೋಚನೆಯಲ್ಲಿ ತೊಡಗಬಲ್ಲ ಬಾಲಪ್ರೌಢಿಮೆಯಿತ್ತು ಎಂಬುದು. ತಾನು ಕುತೂಹಲದಿಂದ ಗಮನಿಸಿದ, ಕೇಳಿದ ವಿಚಾರಗಳ ಕುರಿತು ಒಬ್ಬರೇ ಕುಳಿತು ಆಲೋಚಿಸುವುದು ಐನ್‌ಸ್ಟೈನ್‌ಗೆ ಪ್ರಿಯವಾಗಿತ್ತು. ಒಮ್ಮೊಮ್ಮೆ ತಾಯಿ ಪೌಲೀನ್ ಆಲೋಚನಾಮಗ್ನ ಮಗನನ್ನು ನೋಡಿ ಅಂದುಕೊಳ್ಳುತ್ತಿದ್ದರಂತೆ, ಮಗ ದೊಡ್ಡವನಾದ ಮೇಲೆ ಪ್ರೊಫೆಸರ್ ಆಗಬಹುದೇನೋ ಎಂದು. ತಾಯಿಯ ಈ ಅನಿಸಿಕೆಯೇ ನಿಜವಾಯಿತು. ಹೆತ್ತವರಿಗೆ ಬುದ್ಧಿಮಾಂದ್ಯತೆಯ ಆತಂಕ ಮೂಡಿಸಿದ್ದ, ಸಹಪಾಠಿಗಳಿಗೆ 'ಬೋರ್' ಎನ್ನಿಸಿದ್ದ, ಅಧ್ಯಾಪಕರಿಂದ ನಾಲಾಯಕ್ ಎಂದು 'ಸರ್ಟಿಫಿಕೇಟ್' ಪಡೆದಿದ್ದ ಐನ್‌ಸ್ಟೈನ್ ಇಂಜಿನಿಯರ್ ಆಗುವ ಬದಲು ಮನುಕುಲದ ಮಹಾಮೇಧಾವಿ ವಿಜ್ಞಾನಿಯಾಗಿ ನೊಬೆಲ್ ಪ್ರಶಸ್ತಿ ಪಡೆದರು.

ದೊಡ್ಡವನಾದ ಮೇಲೆ ಮಗು ದೊಡ್ಡ ಸಾಧನೆ ಮಾಡಲಿ ಎಂದು ಹೆತ್ತವರು ಬಯಸುವುದು ತಪ್ಪಲ್ಲ. ಆದರೆ ಆ ನಿರೀಕ್ಷೆಗೆ ಅನುಗುಣವಾಗಿ ಮಗು ಬಾಲ್ಯದಲ್ಲಿ ಅಸಾಮಾನ್ಯವಾದ ವರ್ತನೆಯನ್ನು ತೋರಿಸಬೇಕಾಗಿಲ್ಲ. ಆಲೋಚನಾಮಗ್ನವಾದ ಮಗುವಿನ ನಿಧಾನಪ್ರವೃತ್ತಿ ಮತ್ತು ಹಿಂಜರಿಕೆಗಳು ಅದರ ದೌರ್ಬಲ್ಯವಾಗಿರಬೇಕಾಗಿಲ್ಲ. ಬಾಲಕ ಐನ್‌ಸ್ಟೈನ್ ಎಲ್ಲರಿಗೂ ಮಂಕನಂತೆ ಮೇಲುನೋಟಕ್ಕೆ ಕಂಡುಬಂದರೂ ಅವರು ಶಾಲೆಯಲ್ಲಿ ಪ್ರಶ್ನೆ ಕೇಳಿದರೆಂದರೆ ಅದು ಅಧ್ಯಾಪಕರ ಬುದ್ಧಿಮತ್ತೆಯನ್ನು ಮೀರಿದ ಪ್ರಶ್ನೆಯಾಗಿರುತ್ತಿತ್ತು. ಒಮ್ಮೆ ಒಬ್ಬ ಅಧ್ಯಾಪಕರು ಕಸಿವಿಸಿಗೊಳಗಾಗಿ ''ನಿನ್ನ ಪ್ರಶ್ನೆಗಳಿಗೆ ನನ್ನ ಬಳಿ ಉತ್ತರವಿಲ್ಲ. ಇತರ ವಿದ್ಯಾರ್ಥಿಗಳೆದುರು ನನ್ನ ಗೌರವ ಕಡಿಮೆಯಾಗುತ್ತದೆ. ನೀನೇಕೆ ಬೇರೆ ಶಾಲೆಗೆ ಸೇರಬಾರದು ?'' ಎಂದು ಕೇಳಿದ್ದರಂತೆ.

ಪರೀಕ್ಷೆಗಳಲ್ಲಿ ಉತ್ತಮ ಸಾಧನೆ ಮಾಡಲಾಗದಿದ್ದರೆ ಅಷ್ಟಕ್ಕೇ ಎಲ್ಲ ಮುಗಿದುಹೋಯಿತೆಂಬಂತೆ ನಿರಾಶರಾಗಿ ಹಿಮ್ಮೆಟ್ಟಬೇಕಾಗಿಲ್ಲ. ಅಂದುಕೊಂಡದ್ದನ್ನು ಸಾಧಿಸಲೇಬೇಕೆಂಬ ಪ್ರವೃತ್ತಿಯಿಂದ ಯಶಸ್ಸು ಪಡೆಯಬಹುದು. ಐನ್‌ಸ್ಟೈನ್ ಸ್ವಿಸ್ ಫೆಡರಲ್ ಪಾಲಿಟೆಕ್ನಿಕ್ ಶಾಲೆಗೆ ಪ್ರವೇಶ ಬಯಸಿ ಬರೆದ ಪರೀಕ್ಷೆಯಲ್ಲಿ ಫೇಲಾದರು. ಆದರೆ ಅವರು ಗಣಿತ ಹಾಗೂ ಭೌತಶಾಸ್ತ್ರಗಳಲ್ಲಿ ತೋರಿದ ಉತ್ತಮ ಸಾಧನೆಯನ್ನು ಗುರ್ತಿಸಿದ ಅಧ್ಯಾಪಕರೊಬ್ಬರು ಹೆಚ್ಚಿನ ತರಬೇತಿ ಪಡೆದು ಇನ್ನೊಮ್ಮೆ ಪ್ರವೇಶ ಪರೀಕ್ಷೆ ಬರೆಯಲು ಹುರಿದುಂಬಿಸಿದರು. ಮತ್ತೊಂದು ಪ್ರಯತ್ನದಲ್ಲಿ ಐನ್‌ಸ್ಟೈನ್ ಯಶಸ್ವಿಯಾದರು. ವೈಫಲ್ಯವನ್ನು ಸಾಫಲ್ಯವಾಗಿಸುವುದೇ ಕ್ರಿಯಾಶೀಲತೆಗಿರುವ ಸವಾಲು.

ಐನ್‌ಸ್ಟೈನ್ ಡಿಪ್ಲೊಮಾ ಪದವಿ ಪಡೆದರೇ ಹೊರತು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಪದವಿಯನ್ನಲ್ಲ. ಜ್ಯೂರಿಚ್ ವಿಶ್ವವಿದ್ಯಾನಿಲಯ ಪ್ರಾಯಶಃ ಇದೇ ಕಾರಣಕ್ಕಾಗಿ ಅವರ



ಡಾಕ್ಟೊರೇಟ್ ಪ್ರಬಂಧವನ್ನು ಅಂಗೀಕರಿಸಲು ನಿರಾಕರಿಸಿತು. ಪ್ರತಿಭೆಗೆ ಸಾಂಪ್ರದಾಯಿಕ ಪದವಿಯೇ ಮಾನದಂಡವಾಗಿರಬೇಕಾಗಿಲ್ಲ ಎಂಬ ಮಾತನ್ನು ಐನ್‌ಸ್ಟೈನ್ ತಮ್ಮ ಅಪೂರ್ವ ಸಂಶೋಧನೆಗಳ ಮೂಲಕ ನಿಜ ಮಾಡಿದರು.

ನಾವು ವೃತ್ತಿಜೀವನದಲ್ಲಿ ಮೊದಲ ಪ್ರಯತ್ನಗಳಿಂದ ನಿರಾಶರಾಗಿ ಹಿಂದಡಿಯಿಟ್ಟರೆ ಜೀವನಪೂರ್ತಿ ಹಿಂಜರಿದುಕೊಂಡೇ ಬದುಕಬೇಕಾಗುವುದು. ರಜೆಯ ಮೇಲೆ ಹೋಗಿದ್ದ ಉಪಾಧ್ಯಾಯರೊಬ್ಬರ ಜಾಗದಲ್ಲಿ ತಾತ್ಕಾಲಿಕ ಕೆಲಸ ಮಾಡಬೇಕಾಗಿ ಬಂದ ಮೊದಲ ದಿನವೇ ಐನ್‌ಸ್ಟೈನ್‌ರನ್ನು ವಿದ್ಯಾರ್ಥಿಗಳು ಅಪಾರ ಗೋಳುಹೊಯ್ದುಕೊಂಡರು. ವಯಸ್ಸಿನಲ್ಲಿ ಅವರಿಗಿಂತಲೂ ದೊಡ್ಡವರಿದ್ದ ಹಲವು ವಿದ್ಯಾರ್ಥಿಗಳು ಆ ತರಗತಿಯಲ್ಲಿದ್ದರು. ಆದರೂ ಐನ್‌ಸ್ಟೈನ್ ಜಪ್ಪೆನ್ನಲಿಲ್ಲ. ಪಾಠ ಹೇಳಿಯೇ ತೀರಿದರು. ಸನ್ನಿವೇಶಗಳನ್ನು ಎದುರಿಸುವ ಅನುಭವಗಳು ಆತ್ಮವಿಶ್ವಾಸಕ್ಕೆ ಮೆಟ್ಟಿಲುಗಳು ಎಂಬುದನ್ನು ಐನ್‌ಸ್ಟೈನ್ ಅರಿತಿದ್ದರು.

ಸಮಯದ ಸದ್ಬಳಕೆ ವ್ಯಕ್ತಿತ್ವವನ್ನು ರೂಪಿಸುತ್ತದೆ. ವ್ಯಕ್ತಿಯನ್ನು ಕ್ರಿಯಾಶೀಲನನ್ನಾಗಿಸುತ್ತದೆ. ಕ್ರಿಯಾಶೀಲ ವ್ಯಕ್ತಿ ಹೊಸ ಆವಿಷ್ಕಾರಗಳನ್ನು ಮಾಡಬಲ್ಲವನಾಗಿರುತ್ತಾನೆ. ಈ ಮಾತುಗಳು ಐನ್‌ಸ್ಟೈನ್‌ರವರಿಗೆ ಚೆನ್ನಾಗಿ ಒಪ್ಪುತ್ತವೆ. ಅವರು ಪೇಟೆಂಟ್ ಕಛೇರಿಯಲ್ಲಿ ಕೆಲಸಕ್ಕೆ ಸೇರಿದ್ದು ಸಾಮಾನ್ಯ ಗುಮಾಸ್ತರಾಗಿ. ತಮಗೆ ವಹಿಸಿದ್ದ ಕೆಲಸವನ್ನು ಒಂದೆರಡು ಗಂಟೆಗಳಲ್ಲಿ ಮುಗಿಸಿ ಉಳಿದ ವೇಳೆಯನ್ನು ಅಧ್ಯಯನ ಹಾಗೂ ಬರವಣಿಗೆಗೆ ಐನ್‌ಸ್ಟೈನ್ ಮೀಸಲಿರಿಸಿದ್ದರು. ಗುಮಾಸ್ತ ವೃತ್ತಿಯ ಅವಧಿಯಲ್ಲೇ ಅವರು ವಿಜ್ಞಾನ ಪ್ರಪಂಚವನ್ನೇ ಅಚ್ಚರಿಯ ಕಡಲಲ್ಲಿ ಮುಳುಗಿಸುವಂತಹ ಪ್ರಬಂಧಗಳನ್ನು ರಚಿಸಿದ್ದು. ವ್ಯಕ್ತಿ ಸಾಮಾನ್ಯನಂತೆ ಕಾಣಬಹುದು. ಅವನ ವೃತ್ತಿ ಸಾಮಾನ್ಯದ್ದಿರಬಹುದು. ಆದರೆ ಆತ ಸತತ ಪರಿಶ್ರಮ, ಅಧ್ಯಯನ ಹಾಗೂ ಏಕಾಗ್ರತೆಗಳಿಂದ ಅತ್ಯುತ್ತಮವಾದುದನ್ನು ಸಾಧಿಸಲು ಆತನ ಸಾಮಾನ್ಯತನ ಅಡ್ಡಬರುವುದಿಲ್ಲ.

ಗುಮಾಸ್ತನ ಸಂಬಳ ಸಂಸಾರ ಸಾಗಿಸಲು ಸಾಲುತ್ತಿರಲಿಲ್ಲ. ಹೀಗಾಗಿ ಐನ್‌ಸ್ಟೈನ್ ಮನೆ ಪಾಠವನ್ನು ಹೇಳಿ ಖರ್ಚುವೆಚ್ಚಗಳನ್ನು ತಕ್ಕಮಟ್ಟಿಗೆ ನಿಭಾಯಿಸುತ್ತಿದ್ದರು. ಮಡದಿ ಮನೆಗೆಲಸದಲ್ಲಿ ತೊಡಗಿದ್ದಾಗ ಒಂದು ಕೈಯಲ್ಲಿ ಭೌತಶಾಸ್ತ್ರದ ಪುಸ್ತಕ ಹಿಡಿದು ಓದುತ್ತ, ಇನ್ನೊಂದು ಕೈಯಲ್ಲಿ ತೊಟ್ಟಿಲು ತೂಗುತ್ತಾ ಮಗುವನ್ನು ಮಲಗಿಸುತ್ತಿದ್ದರು. ತಾವು ಮಾಡುವ ಕೆಲಸಗಳ ಬಗ್ಗೆ ಅವರಿಗೆ ತಾರತಮ್ಯವಿರಲಿಲ್ಲ. ಅಧ್ಯಯನದ ಹಸಿವು ಹಾಗೂ ಹೊಸ ಆಲೋಚನೆಗಳಿಗೆ ಮಹತ್ವ ನೀಡಿದರೆ ವೈಯಕ್ತಿಕ ಸ್ಥಾನಮಾನದ ಕೃತಕತೆಗಳು ಮುಖ್ಯ ಅನ್ನಿಸುವುದಿಲ್ಲ.

ಐನ್‌ಸ್ಟೈನ್ ಜರ್ಮನ್ ವಿಜ್ಞಾನ ಅಕಾಡೆಮಿಯ ನಿರ್ದೇಶಕರಾಗಿ ನೇಮಕಗೊಂಡರು. ದಡ್ಡ ಬಾಲಕ ದೊಡ್ಡ ಜವಾಬ್ದಾರಿಯ ಸ್ಥಾನಕ್ಕೆ ಏರಿದ್ದಕ್ಕೆ ಆತನ ಅನಿಶ ಕುತೂಹಲ ಪ್ರವೃತ್ತಿ ಹಾಗೂ ಪರಿಶ್ರಮಗಳೇ ಕಾರಣವಾಗಿದ್ದವು. ದೊಡ್ಡವರಿಗೆ ಮೇಲುನೋಟಕ್ಕೆ ಕಾಣುವ 'ದಡ್ಡತನ' ಮಗುವಿನ ಸಹಜ ಕುತೂಹಲಕ್ಕೆಂದೂ ಅಡ್ಡಿಯಾಗಿರುವುದಿಲ್ಲ.

ನಾವು ಮಕ್ಕಳೊಂದಿಗೆ ಬೆರೆಯುವಾಗ 'ನಾವೆಲ್ಲ ತಿಳಿದಿದ್ದೇವೆ' ಎಂಬ ಅಹಂನೊಂದಿಗೆ ಬೆರೆಯುತ್ತೇವೆ. ಆದರೆ ಐನ್‌ಸ್ಟೈನ್ ಬಹಳ ಭಿನ್ನ. ಒಂದು ಮಗುವನ್ನು ನಿಷ್ಪ್ರಯೋಜಕ ಎಂಬ ಭಾವನೆಯೊಂದಿಗೆ ಅವರು ಮಾತನಾಡಿಸುತ್ತಿರಲಿಲ್ಲ. ಪ್ರತಿ ಮಗುವೂ ಓರ್ವ ವ್ಯಕ್ತಿ ಎಂದವರು ಭಾವಿಸುತ್ತಿದ್ದರು. ಹಿಟ್ಲರ್ ಎಂಬ ಕ್ರೂರ ಸರ್ವಾಧಿಕಾರಿಯನ್ನು, ಅಮೆರಿಕಾದ ಅಣುಬಾಂಬ್ ಪ್ರಯೋಗಗಳನ್ನು, ತೀವ್ರವಾಗಿ ಖಂಡಿಸಲು ಸ್ವಲ್ಪವೂ ಹೆದರದಿದ್ದ ಐನ್‌ಸ್ಟೈನ್ ಮಕ್ಕಳೊಂದಿಗೆ ಮಗುವಾಗಿಬಿಡುತ್ತಿದ್ದರು. ಮಗುತನ ದೊಡ್ಡತನದ ಒಂದು ಮುಖವಾಗಿರಲೂಬಹುದು.

ಐನ್‌ಸ್ಟೈನ್ ತಮ್ಮ ಬದುಕಿನುದ್ದಕ್ಕೂ ಮನುಷ್ಯ ವಿರೋಧಿ ಮೌಲ್ಯಗಳೊಂದಿಗೆ ರಾಜಿಮಾಡಿಕೊಳ್ಳಲಿಲ್ಲ. ಕೆಟ್ಟದ್ದನ್ನು ಖಂಡಿಸಿದರು. ಕೆಟ್ಟದ್ದನ್ನು ಪ್ರತಿಭಟಿಸಿದರು. ಕೆಟ್ಟದ್ದನ್ನು ನಿವಾರಿಸಲು ಕೆಲಸ ಮಾಡಿದರು.

ಮಕ್ಕಳ ಬೆಳವಣಿಗೆ, ವರ್ತನೆ, ಆರೋಗ್ಯ, ವಿದ್ಯಾಭ್ಯಾಸ ಮತ್ತು ಸಾಧನೆಗಳ ಕುರಿತು ನಮಗಿರುವ (ನಾವೇ ಸರಿ ಅಂದುಕೊಂಡ) ಸಾಮಾನ್ಯ ತಿಳುವಳಿಕೆ ಹಾಗೂ ಅನವಶ್ಯಕ ಆತಂಕಗಳನ್ನೆಲ್ಲ ತಲೆಕೆಳಗು ಮಾಡಿದ ಆಲ್ಬರ್ಟ್ ಐನ್‌ಸ್ಟೈನ್ ಮಕ್ಕಳನ್ನು ಅರ್ಥ ಮಾಡಿಕೊಳ್ಳಲು ದೊಡ್ಡವರಿಗೆ ಒಂದು ಮಾದರಿಯನ್ನು ಸ್ವಯಂ ಒದಗಿಸಿದ್ದಾರೆ. ಆ ಮಾದರಿ ಇಂದಿಗೂ ಪ್ರಸ್ತುತವಾಗಿದೆ. ಮುಂದೂ ಪ್ರಸ್ತುತವಾಗಿರುತ್ತದೆ.

ಬೇರೆಯವರಿಗೆ ಮುಖ್ಯ ಅಲ್ಲ ಅನ್ನಿಸಿದ ವಿಚಾರಗಳನ್ನು ಕುತೂಹಲದಿಂದ ಗಮನಿಸುವವರು ವಿಜ್ಞಾನಿ ಮತ್ತು ಮಗು ಇಬ್ಬರೇ ಎಂಬ ಮಾತು ಇಂಗ್ಲಿಷಿನಲ್ಲಿದೆ. ನಮ್ಮ ಮಗುವಿನಲ್ಲಿ ಒಬ್ಬ ವಿಜ್ಞಾನಿಯನ್ನು, ಜೊತೆಗೆ ಐನ್‌ಸ್ಟೈನ್‌ರವರ ಸಜ್ಜನಿಕೆ, ದಿಟ್ಟತನ, ಸಾಧಿಸುವ ಪ್ರವೃತ್ತಿಗಳನ್ನು ನಾವು ನಿರೀಕ್ಷೆ ಮಾಡುವುದು ತಪ್ಪಾಗಲಾರದು. ಅಸಹಜವೂ ಆಗಲಾರದು. ಏನಂತೀರಾ ?

ಕೆ. ಎಸ್. ರವಿಕುಮಾರ್
ಭಾರತೀಯ ಜೀವ ವಿಮಾ ನಿಗಮ, ಹಾಸನ - ೫೭೩ ೨೦೧

## ನೀರು ನೀರಾದೆ

ಹೊಳೆಯಿಂದ ಮನೆಗೆ
ನಡೆದ ದಾರಿಯಲಿ
ದನಗಳ ಗುಂಪು
ಎದುರಾಗಿ
ಅದರಲ್ಲೊಂದು
ನನ್ನ ಬದಿಯಲ್ಲೆ ಸಾಗಿ
ಹಾಯುವಂತೆ ಕಂಡಿತು
ಭಯ ಹುಟ್ಟಿತು
ಗಬಕ್ಕನೆ ಕೊಂಬು ಹಿಡಿದೆ
ಕತ್ತು ಅದುಮಿ ಹೆಕ್ಕತ್ತು ತಿರುವಿ
ಚಂಗನೆ ದೂರ ನೆಗೆದೆ.
ಆ ದನ
ಎಲ್ಲಿ ಮೇಲೇರಿ ಬರುವುದೊ
ಎಂದು ಬೆದರಿ
ಓಡಿ ಹೋಗುವಲ್ಲಿ ತಿರುಗಿ ನೋಡಿದೆ.
ಆ ಗೋವು ಗೋಣು ಮುರಿದಂತೆ
ನೆಲಕ್ಕೆ ಉರುಳಿತ್ತು
ಮೂಕದನಿಯಲ್ಲೆ ಅರಚುತ್ತಿತ್ತು ,
ನಾನು ಮತ್ತೂ ಓಡಿದೆ,
ತನ್ನವರಿಗೆ ನನ್ನ ವಿರುದ್ಧ ದೂರುತ್ತಿತ್ತು
ಕೂಗಿ ಕೂಗಿ ತನ್ನ ಜನರಿಗೆ ಹೇಳುತ್ತಿತ್ತು
ಅವರು ಯಾರೋ ಅಲ್ಲೆ ಇದ್ದಂಗಿತ್ತು
ಅವರೆಲ್ಲಿ ನನ್ನನ್ನು ಹಿಡಿದು ಬಡಿವರೊ
ಎಂದು ಪಿಳಿಪಿಳಿ ಕಣ್ಣು ಬಿಟ್ಟು
ಅವರನ್ನೇ ನೋಡುತ್ತ ಅವರಿಂದೆ ಓಡುತ್ತಿದ್ದೆ.
ಅವರು ನನ್ನ ಕಡೆ ನೋಡಲಿಲ್ಲ
ಹಸು ಕೂಗುವುದು ಬಿಡಲಿಲ್ಲ
ಅದರ ದನಿ ಅವರಿಗೆ ಕೇಳಿಸಿದಂತಿರಲಿಲ್ಲ.
ಅವರನ್ನು ದಾಟಿ
ಬಚಾವಾದ ಸಮಾಧಾನದಲ್ಲಿ
ಅಲ್ಲೆ ದೂರದಲ್ಲಿ ಬಚ್ಚಿಟ್ಟುಕೊಂಡೆ.
ತಕ್ಷಣ ಎಚ್ಚರಾಯ್ತು ಕಣ್ಣು ಬಿಟ್ಟೆ.
ಕತ್ತಲು ಕತ್ತಲು ಹಾಸುಗೆ ಮೇಲೆ
ಇದ್ದೆ ಆದರೂ
ತನ್ನ ಪಾಡಿಗಿದ್ದ
ಹಾಯದ ಸಾಧು ಹಸುವಿಗೆ ಹೆದರಿ
ಕಾಪಾಡಿಕೊಳ್ಳುವ ಕುಂಟು ನೆಪ
ನನ್ನಿಂದ ಘಾಸಿ ಮಾಡಿತಲ್ಲ !
ನಾಚಿ ನೀರಾದೆ, ನೀರು ನೀರಾದೆ.



ಡಾ|| ಶ್ರೀಧರ ಪಿಸ್ಸೆ, ದೇಸಾಯಿ ಓಣಿ, ಕಮಲಾಪುರ - ೫೮೩ ೨೨೧

# ಇದೀಗ ಪ್ರಕಟವಾಗಿದೆ

## ನವಕರ್ನಾಟಕದ ಅಪೂರ್ವ ಕೊಡುಗೆ




ಡೆಮಿ 1/4 ಆಕಾರದ 320 ಪುಟಗಳು



**ಪ್ರತಿಯೊಂದು ಮನೆ, ಶಾಲಾ-ಕಾಲೇಜು ಗ್ರಂಥಾಲಯದಲ್ಲಿ ಇರಲೇಬೇಕಾದ ಉಪಯುಕ್ತ ಕೃತಿ**

ಮುಖಬೆಲೆ ರೂ. 400
'ಹೊಸತು' ಪತ್ರಿಕೆಯ ಮೂರು ವರ್ಷದ ಚಂದಾದಾರರಿಗೆ
ರೂ. 320 ಮಾತ್ರ
(ಅಂಚೆ ವೆಚ್ಚ ರೂ. 20 ಪ್ರತ್ಯೇಕ)

ಪ್ರಾರಂಭದಿಂದ ಇಲ್ಲಿಯವರೆಗೆ ಸಾಹಿತ್ಯ, ಶಾಂತಿ, ಭೌತ ವಿಜ್ಞಾನ, ರಸಾಯನ ವಿಜ್ಞಾನ, ವೈದ್ಯ ವಿಜ್ಞಾನ, ಮತ್ತು ಅರ್ಥಶಾಸ್ತ್ರ ಕ್ಷೇತ್ರಗಳಿಗಾಗಿ ಪ್ರಶಸ್ತಿ ಪಡೆದ 774 ಮಂದಿ ಗಣ್ಯರ ಚಿತ್ರಗಳ ಸಹಿತ ಅವರ ಬದುಕು ಸಾಧನೆಗಳ ಸಮಗ್ರ ಮಾಹಿತಿ ಕೋಶ

ಅಂಚೆ ವೆಚ್ಚ ರೂ. 20 ಸೇರಿಸಿ ಒಟ್ಟು ರೂ. 340ರ ಡಿ.ಡಿ. ಅಥವಾ ಎಂ.ಒ. ಕೆಳಕಂಡ ವಿಳಾಸಕ್ಕೆ ಕಳಿಸಿ


**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

ನವಕರ್ನಾಟಕ ಪ್ರಕಾಶನ

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001. ಫ್ಯಾಕ್ಸ್ : 30578023
ಫೋನ್ : 30578022, 22203580 e-mail : navakarnataka@dataone.in web : www.navakarnatakabooks.com

ಶಾಖೆಗಳು : ಬೆಂಗಳೂರು © 22251382 :: ಮಂಗಳೂರು © 2441016 :: ಮೈಸೂರು © 2424094 :: ಗುಲ್ಬರ್ಗಾ © 224302



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly /March 2008 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.